# ಭಾಸಕವಿ

ಎ. ಆರ್. ಕೃಷ್ಣಶಾಸ್ತ್ರೀ, ಎಂ. ಎ.



ಬೆಂಗಳೂರು

# ಭಾಸ ಕವಿ

(ಕವಿವಿಚಾರ ಮತ್ತು ಕಾವ್ಯವಿಮರ್ಶೆ)

ಎ. ಆರ್. ಕೃಷ್ಣಶಾಸ್ತ್ರೀ, ಎಂ. ಎ.

ಬೆಂಗಳೂರು

೧೯೩೩

ಮೂರನೆಯ ಮುದ್ರಣ ೧೯೫೩



ಬೆಲೆ : ರೂ. ೨—೮—೦

ಮುದ್ರಣಕಾರರು :
ಜಿ. ಎಚ್. ರಾಮರಾವ್, ಬಿ. ಎಸ್‌ಸಿ.,
ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್,
ಮೈಸೂರು.

# ವಿಷಯ ಸೂಚಿಕೆ

# ಮುನ್ನುಡಿ

## (ಮೊದಲನೆಯ ಮುದ್ರಣಕ್ಕೆ ಬರೆದದ್ದು)

ಭಾಸ ಕವಿಯು ಬಹು ಪ್ರಾಚೀನನಾದ ನಾಟಕ ಕರ್ತೃ, ಅಶ್ವಘೋಷ ರಚಿತವಾದ ಕೆಲವು ನಾಟಕಗಳ ತುಂಡುಗಳನ್ನು ಬಿಟ್ಟರೆ, ಭಾಸ ನಾಟಕಗಳೇ ಸಂಸ್ಕೃತ ಸಾಹಿತ್ಯದಲ್ಲಿ ಈಗ ದೊರೆತಿರುವ ಪ್ರಾಚೀನತಮವಾದ ನಾಟಕಗಳೆಂದು ಹೇಳಬಹುದು ಅಶ್ವಘೋಷನು ನಿಜವಾಗಿಯೂ ಭಾಸನಿಗಿಂತ ಹಿಂದಿನವನೇ, ಹೀಗೆಂದು ನಿರ್ಧರಿಸಲು ಸಾಕಾದಷ್ಟು ಪ್ರಮಾಣಗಳಿವೆಯೇ ಎಂದು ಇಲ್ಲಿ ವಿಚಾರ ಮಾಡುವುದು ಅನಾವಶ್ಯಕ, ಈಗ ಭಾಸ ಕರ್ತೃಕವೆಂದು ಪ್ರಕಟವಾಗಿರುವ ರೂಪಕಗಳು ಭಾಸನು ಬರೆದವೇ ಅಲ್ಲವೇ, ಅವುಗಳ ಕಾಲವಾವುದು ಎಂಬುದನ್ನು ಮುಂದೆ ವಿಸ್ತಾರವಾಗಿ ತರ್ಕಿಸಿ ಸಿದ್ಧಾಂತಕ್ಕೆ ಬರಲು ಪ್ರಯತ್ನ ಮಾಡಿದೆ.

ಹಳೆಯವಾಗಲಿ ಹೊಸವಾಗಲಿ ಈ ಗ್ರಂಥಗಳಲ್ಲಿ ಶ್ಲಾಘ್ಯವಾದ ಕಾವ್ಯಗುಣಗಳಿವೆ, ಆದ್ದರಿಂದ ಇವು ಪ್ರಕಟವಾಗುವುದೇ ತಡ, ನಮ್ಮ ದೇಶದ ಮತ್ತು ಹೊರಗಿನ ನಾನಾ ಭಾಷೆಗಳಿಗೆ ತರ್ಜುಮೆಯಾಗಿ ಮೆಚ್ಚುಗೆಯನ್ನು ಪಡೆದುವು, ಇವುಗಳಲ್ಲಿ ಒಂದೆರಡು ಹೊರತು ಪ್ರಾಯಶಃ ಮಿಕ್ಕವೆಲ್ಲವೂ ಗದ್ಯಪದ್ಯಾತ್ಮಕವಾಗಿಯಾಗಲಿ ಗದ್ಯರೂಪವಾಗಿಯಾಗಲಿ ಕನ್ನಡಕ್ಕೂ ಭಾಷಾಂತರವಾಗಿವೆ, ಇವುಗಳನ್ನು ಓದಿ ರಸಗ್ರಹಣಮಾಡುವ ಕನ್ನಡಿಗರಿಗೆ ಈ ಪುಸ್ತಕವು ಸ್ವಲ್ಪಮಟ್ಟಿಗಾದರೂ ಉಪಯುಕ್ತವಾಗಬಹುದೆಂದು ನಂಬುತ್ತೇನೆ.

ಈಗ್ಗೆ ಸುಮಾರು ಇಪ್ಪತ್ತು ವರ್ಷಗಳ ಕೆಳಗೆ ಮ॥ ಗಣಪತಿ ಶಾಸ್ತ್ರಿಗಳು "ಸ್ವಪ್ನವಾಸವದತ್ತ"ವನ್ನು ಪ್ರಕಟಿಸಿದಾಗ ಅದನ್ನು ಓದಿ ಆ ಕೃತಿಯಲ್ಲಿಯೂ ಅದರ ಕವಿಯಲ್ಲಿಯೂ ಆಸಕ್ತಿಯುಂಟಾಯಿತು, ಆದ್ದರಿಂದ ನಾನು ಆ ವಿಚಾರವಾಗಿ ಹಲವು ಪತ್ರಿಕೆಗಳಲ್ಲಿಯೂ ಪುಸ್ತಕಗಳಲ್ಲಿಯೂ ಬರುತ್ತಿದ್ದ ಖಂಡನ ಮಂಡನ ಸಂಶೋಧನಗಳನ್ನು ಆದರದಿಂದ ಓದಿ ಗುರುತುಮಾಡಿಕೊಳ್ಳುತ್ತಿದ್ದೆ, ಇದನ್ನು ತಿಳಿದಿದ್ದ

"ಕರ್ಣಾಟಕ ಸಂಘ"ದ ಅಧಿಕಾರಿಗಳು ತಾವು ಪ್ರಕಟಿಸಿದ ವೇ|| ಬ್ರ|| ಪಂಡಿತ ಅಳಸಿಂಗರಾಚಾರ್ಯರ ಕೃತ ಕನ್ನಡ ವಾಸವದತ್ತ ನಾಟಕಕ್ಕೆ ನಾನು ಒಂದು ಮುನ್ನುಡಿಯನ್ನು ಬರೆಯಬೇಕೆಂದು ಆಜ್ಞಾಪಿಸಿದರು ಇದು ಒಂದು ಪ್ರಬಂಧವಾಗಿ "ಪ್ರಬುದ್ಧ ಕರ್ಣಾಟಕ"ದ ಹನ್ನೊಂದನೆಯ ಸಂಪುಟದಲ್ಲಿ ಪ್ರಕಟವಾಯಿತು, "ಪ್ರತಿಮಾ ನಾಟಕ"ವನ್ನು ವಾರ ಹೇಳಿದ್ದರ ಫಲವಾಗಿ ಅದರ ಮೇಲಣ ಮತ್ತೊಂದು ಪ್ರಬಂಧವೂ, ಭಾಸ ಕವಿ ಕಾಲಾದಿ ಸಮಸ್ಯೆಯ ಮೇಲಣ ಇನ್ನೊಂದು ಪ್ರಬಂಧವೂ ಅದೇ ಪತ್ರಿಕೆಯಲ್ಲಿ ಬಂದುವು ಇವುಗಳಿಗೆ ಭಾಸ ಕೃತವಾದ ಮಿಕ್ಕ ನಾಟಕಗಳ ಮೇಲಣ ವಿಮರ್ಶೆಯನ್ನೂ ಬರೆದು ಸೇರಿಸಿ ಈಗ ಈ ಪುಸ್ತಕವನ್ನು ಪ್ರಕಟಿಸಿದೆ

ನಮ್ಮವರು ಕವಿ ಕಾಲಾದಿ ವಿಚಾರಕ್ಕೆ ಪ್ರಾಶಸ್ತ್ಯವನ್ನು ಕೊಡುವುದಿಲ್ಲ, ಇಂಥ ವಿಚಾರವು " ಕಾಕಸ್ಯ ಕತಿ ವಾ ದಂತಾಃ? " ಎಂಬ ವಿಚಾರದ ಹಾಗೆ ನಿರುಪಯೋಗವೆನ್ನುತ್ತಾರೆ ಆದರೆ ಸಾಹಿತ್ಯ ಚರಿತ್ರೆಯನ್ನು ರೂಪಿಸುವುದಕ್ಕೂ ಅದರಲ್ಲಿ ಕವಿಯ ಸ್ಥಾನವನ್ನು ನಿರ್ದೇಶಿಸುವುದಕ್ಕೂ ಅವನ ಯೋಗ್ಯತೆಯನ್ನು ನಿಷ್ಕರ್ಷಿಸುವುದಕ್ಕೂ ಇದು ಆವಶ್ಯಕ ನಾಟಕ ವಿಮರ್ಶೆಯೆಂಬುದು, ಬಹಳ ಮಟ್ಟಿಗೆ, ದಶರೂಪಕಾದಿಗಳಲ್ಲಿ ಉಕ್ತವಾದ ಲಕ್ಷಣವನ್ನು ಅನುವಾದಮಾಡಿ ಅನ್ವಯಿಸುವುದರಲ್ಲಿ ಮುಗಿದು ಹೋಗುತ್ತಿದೆ ಇವುಗಳ ಉಪಯೋಗವೇನೇ ಇರಲಿ, ಲಕ್ಷಣವನ್ನು ಸಂಕೋಲೆಯಾಗಿ ಮಾಡಿಕೊಳ್ಳದೆ ಬೇರೆ ರೀತಿಯಿಂದ ಇತರ ಸಾಹಿತ್ಯಗಳನ್ನೂ ವ್ಯಾಸಂಗಮಾಡಿರುವವರು ಇವುಗಳನ್ನು ಏಕೆ ಮೆಚ್ಚುವರು, ಯಾವ ದೃಷ್ಟಿಯಿಂದ ಪರಿಶೀಲಿಸಬಹುದು —ಎಂಬುದನ್ನು ಈ ಗ್ರಂಥದಲ್ಲಿ ಸ್ವಲ್ಪ ಮಟ್ಟಿಗೆ ನೋಡಬಹುದಾಗಿದೆ ಎಂದು ನಾನು ಎಣಿಸುತ್ತೇನೆ ಇದು ಎಲ್ಲರಿಗೂ ಒಪ್ಪಿಗೆಯಾಗದೆ ಇರಬಹುದು, ಅದರಲ್ಲೇನೂ ಆಶ್ಚರ್ಯವಿಲ್ಲ. ಇದರಿಂದ ಯಾರಿಗಾದರೂ ಉಪಯೋಗವಾದರೆ ಸಂತೋಷ, ಮೆಚ್ಚುಗೆಯಾದರೆ ಧೈರ್ಯ. ಏನಿಲ್ಲದಿದ್ದರೂ ಈ ಪುಸ್ತಕದಿಂದ ಭಾಸ ಕವಿ ಕಾವ್ಯ ವಿಚಾರಗಳೆಲ್ಲವೂ ಒಟ್ಟಿಗೆ ಒಂದೆಡೆಯಲ್ಲಿ ಸಂಗ್ರಹವಾಗಿ ದೊರೆತಂತಾದರೂ ಆಗುತ್ತದೆ.

ಮಹಾ ಕವಿ ಕೃತಿಗಳ ವಿಚಾರವು ವಿಮರ್ಶೆಮಾಡಿದಷ್ಟೂ ಬೆಳೆಯುತ್ತ ಹೋಗುತ್ತದೆ, ಹೊಸ ಹೊಸ ಸಂಗತಿಗಳೂ ಭಾವಗಳೂ ಪ್ರಯೋಜನಗಳೂ ವ್ಯಕ್ತವಾಗುತ್ತವೆ ಹೀಗೆ ಷೇಕ್ಸ್‌ಪಿಯರ್ ಹೋಮರ್ ಮುಂತಾದ ಕವಿಗಳ ಮೇಲೂ ಅವರ ಗ್ರಂಥಗಳ ಮೇಲೂ ಅಪಾರವಾದ ಸಾಹಿತ್ಯವು ಹುಟ್ಟಿದೆ, ಅವರು ಜೀವಿಸಿ ಗತಿಸಿ ನೂರಾರು ವರ್ಷಗಳಾದರೂ ಇನ್ನೂ ಹುಟ್ಟುತ್ತಲೇ ಇದೆ, ಭಾಸ ಕಾಳಿದಾಸರ ವಿಚಾರವೂ ಹಾಗೆಯೇ, ಜೊತೆಗೆ ಇವರ ದೇಶ ಕಾಲಾದಿಗಳ ಅನಿಶ್ಚಯ ಬೇರೆ, ಆದ್ದರಿಂದ ಸುಮಾರು ೧೫೦ ವರ್ಷಗಳಿಂದ ಕಾಳಿದಾಸನ ಮೇಲೆ ಲೇಖನಗಳೂ ವಿಚಾರಗಳೂ ಗ್ರಂಥಗಳೂ ಬರುತ್ತಲೇ ಇವೆ, ಭಾಸನ ಮೇಲೆ ಈಗ ಇಪ್ಪತ್ತು ವರ್ಷದಿಂದ ಬಂದಿರುವ ಲೇಖನಗಳೂ, ಹೆಚ್ಚು ಕಡಮೆ ಅಷ್ಟೇ ಆಗುತ್ತವೆ, ಆದರೂ ಇನ್ನೂ ಅಲ್ಲಿಗೆ ಮುಗಿಯುವಂತಿಲ್ಲ ಏಕೆಂದರೆ ಈ ಸಂಬಂಧವಾಗಿ ಇನ್ನೂ ಸಿದ್ಧಾಂತವಾಗದ ಕೆಲವು ಅಂಶಗಳಿವೆ, ಬಿಡಿಸಬೇಕಾದ ತೊಡಕುಗಳಿವೆ ಜೊತೆಗೆ ಹೊಸ ಹೊಸ ಪ್ರಶ್ನೆಗಳು ಹುಟ್ಟುತ್ತವೆ ಉದಾಹರಣೆಗಾಗಿ, ಭಾಸನು ತನ್ನ ನಾಟಕಗಳಿಗೆ ರಾಮಾಯಣ ಭಾರತ ಭಾಗವತಾದಿ ಗ್ರಂಥಗಳಲ್ಲಿ ಪ್ರಸಿದ್ಧವಾದ ಕಥೆಗಳನ್ನೇ ತೆಗೆದುಕೊಂಡರೂ, ಇವುಗಳ ಆಕರಗಳು ಈಗ ದೊರೆಯುವ ಈ ಇತಿಹಾಸಗಳೇಯೋ ಬೇರೆಯೋ, ದಾಕ್ಷಿಣಾತ್ಯ ಪಾಠಗಳೋ ಔತ್ತರೇಯ ಪಾಠಗಳೋ, ಇವುಗಳಲ್ಲಿ ಎಷ್ಟರಮಟ್ಟಿಗೆ ಅವನ ಕಲ್ಪನೆಯಿದೆಯೋ* ನಿರ್ಧರಿಸಬೇಕಾಗಿದೆ ಇದರಿಂದ ಅವನು ಇಂಥ ಊರಿನವನು ಎಂದು ನಿಷ್ಕರ್ಷಿಸಲು ಆಗದಿದ್ದರೂ ಉತ್ತರದೇಶದಲ್ಲಿದ್ದನೇ ದಕ್ಷಿಣ ದೇಶದಲ್ಲಿದ್ದನೇ ಎಂದಾದರೂ ನಿಶ್ಚಯಿಸಲು ಸಹಾಯವಾಗಬಹುದು ಹಾಗೆಯೇ ಚಾರುದತ್ತ—ಮೃಚ್ಛಕಟಿಕಗಳ

---

* "ಪಂಚರಾತ್ರ"ದ ನಿಬಂಧನೆ, ಘಟೋತ್ಕಚನ ದೌತ್ಯ, ಧೃತರಾಷ್ಟ್ರನು ದುರ್ಜಯ ಮೊದಲಾದ ಪೌತ್ರರೊಡನೆ ರಣರಂಗಕ್ಕೆ ಬಂದು ದುರ್ಯೋಧನನನ್ನು ಕಾಣುವುದು, ಪ್ರತಿಮಾಗೃಹ, ರಾಮನು ಸಮುದ್ರವನ್ನು ಬಿಡಿಸಿಕೊಂಡು ಹೋಗುವುದು, ಕೃಷ್ಣನು ಏಳನೆಯ ಮಗುವಾಗಿ ಹುಟ್ಟಿದ್ದು, ಮಧೂಕಋಷಿಯ ಶಾಪ—ಇತ್ಯಾದಿ

ವಿಚಾರ ಇವುಗಳಲ್ಲಿ ಯಾವುದರಿಂದ ಯಾವುದು ಬಂದದ್ದು ? ಅಶ್ವಘೋಷನೂ ಇಂತಹದೇ ಒಂದು ನಾಟಕವನ್ನು ಬರೆದಿದ್ದನು ಹಾಗಾದರೆ ಇವೆಲ್ಲಕ್ಕೂ ಮೂಲವಾವುದು ? ಇಂಥ ಕಥೆ ಏಕೆ ಮೆಚ್ಚಿಕೆ ಪಡೆಯಿತು ? ಈ ಸಂಪ್ರದಾಯ ಏಕೆ ಹುಟ್ಟಿ ಬೆಳೆಯಿತು ? ಇದು ಶಾಕುಂತಳಾದಿ ನಾಟಕಗಳಿಗಿಂತ ಎಲ್ಲದರಲ್ಲಿಯೂ ಭಿನ್ನವಾಗಿದ್ದು ಕ್ರಿಸ್ತ ಪೂರ್ವ ಮೂರು ನಾಲ್ಕನೆಯ ಶತಮಾನದಲ್ಲಿದ್ದ ಗ್ರೀಕ್ ರೋಮನ್ ನಾಟಕಗಳನ್ನು ಜ್ಞಾಪಕಕ್ಕೆ ತರುತ್ತದೆ ಇವಕ್ಕೆ ಪರಸ್ಪರ ಏನಾದರೂ ಸಂಬಂಧವಿರಬಹುದೇ ?—ಇತ್ಯಾದಿ.

ಹಿಂದೆ, ಇಂಡಿಯ ದೇಶಕ್ಕೂ ಗ್ರೀಸ್ ಮುಂತಾದ ಪಾಶ್ಚಾತ್ಯ ದೇಶಗಳಿಗೂ ವ್ಯಾಪಾರಾದಿಗಳಿಂದ ಪರಿಚಯ ಸಂಬಂಧಗಳಿದ್ದುವು; (ಇವು ಸುಮಾರು ೫೦೦೦ ವರ್ಷಗಳ ಹಿಂದಿನ ವರೆಗೂ ಹೋಗುತ್ತವೆಂಬುದು ಹರಪ್ಪ ಮಹೆಂಜೋದಾರೋ ಕಿಷ್ ಮುಂತಾದ ಸ್ಥಳಗಳಲ್ಲಿ ಮಾಡಿದ ಭೂಸಂಶೋಧನೆಗಳಿಂದ ಗೊತ್ತಾಗಿದೆ) ಆದ್ದರಿಂದ ಗ್ರೀಕ್ ಮತ್ತು ಭಾರತೀಯ ಶಿಲ್ಪ ಶಾಸ್ತ್ರ ಸಾಹಿತ್ಯಾದಿಗಳಲ್ಲಿರುವಂತೆ ನಾಟಕಗಳಲ್ಲಿಯೂ ಸಂಬಂಧವಿರಬಹುದೇ ಎಂದು ವೀಬರ್, ವಿಂಡಿಷ್ ಮುಂತಾದ ಹಲವು ವಿದ್ವಾಂಸರು ವಿಚಾರಮಾಡಿದ್ದಾರೆ ಇವೆರಡೂ ಸ್ವತಂತ್ರವಾಗಿ ಹುಟ್ಟಿರಬಹುದು, ಗ್ರೀಕ್‌ನಾಟಕದಿಂದ ಭಾರತೀಯ ನಾಟಕವು ಹುಟ್ಟಿರಲಾರದು ಎಂದು ಸಾಮಾನ್ಯವಾಗಿ ಈಗ ಎಲ್ಲರೂ ಒಪ್ಪಿರುತ್ತಾರೆ, ಆದರೂ ಒಂದರ ಪರಿಣಾಮವು ಮತ್ತೊಂದರ ಮೇಲೆ ಆಗಿಯೇ ಇಲ್ಲವೆಂದು ಹೇಳುವ ಹಾಗಿಲ್ಲ, ಏಕೆಂದರೆ ಅಲೆಗ್ಸಾಂಡರನು ಇಂಡಿಯಾಕ್ಕೆ ದಂಡೆತ್ತಿ ಬಂದಮೇಲೆ, ಈ ದೇಶಕ್ಕೂ ಗ್ರೀಸಿಗೂ ಸಂಬಂಧವು ಹೆಚ್ಚಾಯಿತು ಆ ದಂಡಯಾತ್ರೆಯ ಜೊತೆಯಲ್ಲಿಯೇ ಸಂಸ್ಕೃತಿಯಾತ್ರೆಯೂ ಬಂತು ಕ್ರಿ ಪೂ ೩೨೬ರಲ್ಲಿ ಅಲೆಗ್ಸಾಂಡರನ ಬಿಡಾರದಲ್ಲಿ ಡಯೊನೀಸಸ್ ಉತ್ಸವವು ನಡೆಯಿತೆಂದೂ ಆ ಸಂದರ್ಭದಲ್ಲಿ 'ಏಗೆನ್" ಎಂಬ ನಾಟಕವನ್ನು ಆಡಿದರೆಂದೂ ತಿಳಿಯುತ್ತದೆ.*

---

* ಗಿಲ್ಬರ್ಟ್ ನಾರ್ವುಡ್‌ರವರ "ಗ್ರೀಕ್ ಟ್ರ್ಯಾಜೆಡಿ" ಪುಟ ೩೮-೩೯; 'ಏಗೆನ್" ಎಂಬ ಶಬ್ದಕ್ಕೆ ಅರ್ಥವೇನೆಂದು ಗೊತ್ತಿಲ್ಲ.

ಆಮೇಲೆ, ಎಂದರೆ ಎರಡನೆಯ ಟಾಲಮಿಯ ಕಾಲದಲ್ಲಿ (ಕ್ರಿ. ಪೂ ೨೮೫-೨೪೭) ಅಲೆಗ್ಸಾಂಡ್ರಿಯವು ವಿದ್ವಾಂಸರಿಗೆ ಆಶ್ರಯವನ್ನು ಕೊಟ್ಟಿದ್ದರಿಂದ, ಇತರ ನಾನಾ ಕಡೆಗಳಿಂದ ಹೋದಂತೆ ಇಂಡಿಯದಿಂದಲೂ ಅಲ್ಲಿಗೆ ಅನೇಕ ವಿದ್ವಾಂಸರು ಹೋಗಿ ಇದ್ದಂತೆ ಗೊತ್ತಾಗುತ್ತದೆ ಅಶ್ವಘೋಷನು ಈಗಿನ ಪಿಷಾವರ್‌ನಲ್ಲಿ ಆಳುತ್ತಿದ್ದ ಸಿಥಿಯನ್ ರಾಜನಾದ ಕನಿಷ್ಕನ (ಸು. ಕ್ರಿ ಶ ೧೦೦) ಆಶ್ರಿತನಾಗಿದ್ದನೆಂದು ಹೇಳುತ್ತಾರೆ, ಪಿಷಾವರ್ ಪ್ರಾಂತದಲ್ಲಿ ವಿದೇಶ ಸಂಸ್ಕೃತಿಯು ಅದಕ್ಕೆ ಹಿಂದೆ ನೂರಾರು ವರ್ಷದಿಂದಲೂ ಪ್ರಬಲವಾಗಿತ್ತು. ನಾಟಕವು, ಬೇರೆ ಬೇರೆ ರುಚಿಯುಳ್ಳ ನಾನಾ ಜನರಿಗೆ ಆನಂದವಾಗುವ ಒಂದು ಸಮಾರಾಧನೆ, ಭಾಷಾಪರಿಚಯಾದಿಗಳಿಲ್ಲದಿದ್ದರೂ ಕಣ್ಣಿನಿಂದ ನೋಡಿಯೇ ಸಂತೋಷಪಡಬಹುದಾದ ಕಲೆ ಆದ್ದರಿಂದ ಯಾರು ಯಾವ ನಾಟಕವನ್ನು ನೋಡಿ ಹೇಗೆ ಎಲ್ಲಿ ಯಾವ ಬದಲಾವಣೆಯನ್ನು ತಂದರೋ ಹೇಳುವುದು ಕಷ್ಟ ಅಂತೂ ಈ ಎರಡು ನಾಟಕ ಸಂಪ್ರದಾಯಗಳಿಗೂ ಆದಿಯಲ್ಲಲ್ಲದಿದ್ದರೆ ಮಧ್ಯದಲ್ಲಿಯಾದರೂ ಸಂಬಂಧವು ಅಸಂಭವವಲ್ಲ— ಎಂದು ಮಾತ್ರ ಇಲ್ಲಿ ಹೇಳಿದರೆ ಸಾಕಾಗಿದೆ, ಈ ವಿಚಾರವಾಗಿ ಇರುವ ಸಾಧಕ ಬಾಧಕಗಳನ್ನೂ ವಿಸ್ತೃತ ಚರ್ಚೆಯನ್ನೂ ಬೇರೆ ಕಡೆ ನೋಡಬಹುದು. *

ಭಾಸನ ರೂಪಕಗಳನ್ನು ಅದರಲ್ಲಿಯೂ "ಊರುಭಂಗ" ಮುಂತಾದ ಏಕಾಂಕ ನಾಟಕಗಳನ್ನು, ಓದುತ್ತಿರುವಾಗ ಗ್ರೀಕ್ ನಾಟಕಗಳ ಜ್ಞಾಪಕ ಬರುತ್ತದೆ ಇವು ಪುರಾಣ ವೀರ ಕಥೆಯ ಆಧಾರದ ಮೇಲೆ ಬರೆದವು. 'ಚಕ್ರ' ರೂಪವಾಗಿದ್ದಿರಬಹುದಾದವು, ಇವುಗಳಲ್ಲಿ ದೇಶ ಕಾಲ ಕಾರ್ಯೈಕ್ಯಗಳಿವೆ, ಕರ್ಣ, ದುರ್ಯೋಧನ, ರಾವಣ (ವಾಲಿ, ದಶರಥ?), ಮುಂತಾದ ರುದ್ರ ನಾಯಕರಿದ್ದಾರೆ ಪುರುಷಪ್ರಯತ್ನದ ಪ್ರತಿಭಟನೆಯು ಸ್ಪಷ್ಟವಾಗಿಲ್ಲದಿದ್ದರೂ ಪೌರುಷ ಪರಾಭವವೂ ವಿಧಿವಿಲಾಸವೂ ಗೋಚರಿಸುತ್ತವೆ. 'ಭಟ'ರು (Messengers) ಬಂದು ವರ್ತಮಾನ ತರುತ್ತಾರೆ ಪಂಚರಾತ್ರ

---

* ಕೀತ್‌ರವರ 'ಸಂಸ್ಕೃತ ನಾಟಕ'—ಪುಟ ೫೭ ಇತ್ಯಾದಿ

ಊರುಭಂಗ ಮುಂತಾದವುಗಳ ಮೊದಲಲ್ಲಿ ಕಂಡುಬರುವ ದೀರ್ಘ ವಿಷ್ಕಂಭಗಳು, ನೀತಿ ವರ್ಣನೆ ಮುಂತಾದ ಅಂಶಗಳಲ್ಲಿ 'ಮೇಳ' (Chorus) ವನ್ನು ಜ್ಞಾಪಿಸುತ್ತವೆ

ಸಂಸ್ಕೃತ ಶಾಸ್ತ್ರಗಳ ಚರಿತ್ರೆಯನ್ನು ಪರಿಶೀಲಿಸುತ್ತ ಹೋದರೆ ಅನೇಕ ವೇಳೆ ಅವುಗಳ ತುದಿ ಕಾಣುತ್ತದೆಯೇ ಹೊರತು ಮೊದಲು ಕಾಣುವುದಿಲ್ಲ. ನಾಟಕದ ಚರಿತ್ರೆಯಲ್ಲಿಯೂ ಹೀಗೆಯೇ ಆಗಿದೆ. ಅಶ್ವಘೋಷ ಭಾಸ ಕಾಳಿದಾಸರ ನಾಟಕಗಳು ಪೂರ್ಣವಾಗಿ ಅಭಿವ್ಯಕ್ತಿಗೊಂಡ ಕೃತಿ ಜಾತಿಗಳು ಇವುಗಳ ಮೂಲವೇನೋ, ಹೇಗೋ, ಎಲ್ಲಿಯೋ, ಯಾವ ಯಾವ ಅಂಶಗಳು ಎಂದೆಂದು ಸೇರಿ ಒಂದಾಗಿ ಹೀಗಾಗಿವೆಯೋ ಹೇಳುವುದು ಅಸಾಧ್ಯವಾಗಿದೆ ಇದಕ್ಕೆ ಒಂದು ಕಾರಣವು ಆರ್ಯ ಸಂಸ್ಕೃತಿಯ "ಸಂಘಟನ" ಶಕ್ತಿ, ಅದು ಎಂಥ ಕಠಿಣ ವಸ್ತುವನ್ನಾದರೂ ಜೀರ್ಣಮಾಡಿಕೊಂಡು ಗುರುತು ಸಿಕ್ಕದಂತೆ ಸೇರಿಸಿಕೊಂಡುಬಿಡುತ್ತದೆ ಈ ಶಕ್ತಿಯು ಇಂದಿನ ಸ್ಥಿತಿಯಲ್ಲಿಯೂ ಉಡುಗಿಲ್ಲ. ಆದ್ದರಿಂದ ಈ ಸಾದೃಶ್ಯವು ಸೂಕ್ಷ್ಮವಾಗಿದ್ದರೂ ವಿಚಾರಣೀಯವಾಗಿದೆ

ಈ ವಿಷಯವನ್ನು ವ್ಯಾಸಂಗಮಾಡುವುದಕ್ಕೆ ಆರಂಭಿಸಿದ ಮೇಲೆ ನಾನು ಆಗಾಗ್ಗೆ ಬರೆಯುತ್ತಿದ್ದ ಲೇಖನಗಳನ್ನು ನೋಡಿ ಪ್ರೋತ್ಸಾಹಕೊಟ್ಟ ನನ್ನ ಗುರುಗಳಾದ ಶ್ರೀಮಾನ್ ಬಿ ಎಂ. ಶ್ರೀಕಂಠಯ್ಯ, ಎಂ ಎ, ಬಿ ಎಲ್. ಅವರಿಗೂ ಇತರ ಮಿತ್ರರಿಗೂ, ಈ ವಿಚಾರಕ್ಕೆ ಸಂಬಂಧಪಟ್ಟ ಕೆಲವು ಲೇಖನಗಳನ್ನು ನನ್ನ ಗಮನಕ್ಕೆ ತಂದುಕೊಟ್ಟು ಸಹಾಯಮಾಡಿದ ನನ್ನ ಪೂಜ್ಯ ಮಿತ್ರರಾದ ಮ|| ಡಿ. ವಿ ಗುಂಡಪ್ಪನವರಿಗೂ, ಈ ಗ್ರಂಥಕ್ಕೆ ದೇವರಾಜ ಬಹದ್ದೂರ್ ಧರ್ಮನಿಧಿಯ ಸಾಹಿತ್ಯ ಬಹುಮಾನವನ್ನು ಕೊಟ್ಟು ಗೌರವಿಸಿದ ವಿದ್ವತ್ಸಮಿತಿಯವರಿಗೂ, ಇದನ್ನು ಹೀಗೆ ಪುಸ್ತಕರೂಪವಾಗಿ ಪ್ರಕಟಿಸಿದ ಕರ್ಣಾಟಕ ಸಂಘದ ಅಧಿಕಾರಿಗಳಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ

ಬೆಂಗಳೂರು
೬—೭—೧೯೩೩

ಎ. ಆರ್. ಕೃಷ್ಣಶಾಸ್ತ್ರೀ

# ಅಚ್ಚಿನ ತಪ್ಪುಗಳು

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| ೩ | ೧೨ | ಹರ್ಷಚರಿತ್ರ | ಹರ್ಷಚರಿತ |
| ೩ | ೨೭ | ಹೇಳಿಕೆಯೋ | ಇಂಥ ಹೇಳಿಕೆಯೋ |
| ೩ | ೩೦ | ಬಿಟ್ಟು ಬಿಟ್ಟನಂ | ಬಿಟ್ಟು ಬಿಟ್ಟನು |
| ೪ | ೧೯ | ಆದರೆ | ಆವರೆ |
| ೪ | ೨೮ | ಮೀಕ್ಷಿತವ್ಯ | ಮೀಕ್ಷಿತವ್ಯಂ |
| ೬ | ೩ | ಅಭಿನಗುಪ್ತನು | ಅಭಿನವಗುಪ್ತನು |
| ೮ | ೯ | ರಾಜಸಿಂಹ | ರಾಜಸಿಂಹಃ |
| ೧೦ | ೧೭ | ಕಾವ್ಯದಿಗಳ | ಕಾವ್ಯಾದಿಗಳ |
| ೧೧ | ೧೦ | ಶಾಸನ | ಭಾಸನ |
| ೧೪ | ೧೧ | ಪ್ರಾಸ್ತಾವನೆ | ಪ್ರಸ್ತಾವನೆ |
| ೧೮ | ೨೫ | ಲಾಕ್ಷಣೀಕ | ಲಾಕ್ಷಣಿಕ |
| ೧೯ | ೨೦ | ಬಾರ್ನೇಟ್ | ಬಾರ್ನೆಟ್ |
| ೨೪ | ೧ | ಏಕೆ | ಏಕ |
| ೨೪ | ೨೫ | ಪ್ರಯಾಣ | ಪ್ರಮಾಣ |
| ೨೬ | ೧೫ | ವೃಚ್ಛಕಟಕ | ಮೃಚ್ಛಕಟಿಕ |
| ೨೬ | ೨೫ | ಕತೃತ್ವವು | ಕರ್ತೃತ್ವವು |
| ೩೭ | ೨ | ಜನ್ಯವಾದು | ಜನ್ಯವಾದ |
| ೩೭ | ೩ | ಚಾರುದತ್ತನಿಂದ | ಚಾರುದತ್ತದಿಂದ |
| ೪೬ | ೨೨ | ನಾಟಕಗಳನೆಲ್ಲಾ | ನಾಟಕಗಳನ್ನೆಲ್ಲಾ |
| ೪೮ | ೧೩ | ಭೂಮಿಭುಜೌ | ಭೂಮಿಭುಜಾ |
| ೪೯ | ೧೭ | ಲಿಂಗಾದ್ವೇತೋ | ಲಿಂಗಾದ್ಧೇತೋ |
| ೫೦ | ೧ | ಸಾಗರಾನಂದಿ | ಸಾಗರನಂದಿ |
| ೫೦ | ೬ | ಜನೇನೋನೋ | ಜನೇನೋ |
| ೫೧ | ೭ | ಭಾಗತದ | ಭಾಗವತದ |
| ೫೬ | ೫ | ದಯವಿಟ್ಟು | ದಯವಿಟ್ಟು |
| ೫೯ | ೧೩ | ವಾಸದತ್ತೆಯು | ವಾಸವದತ್ತೆಯು |
| ೬೪ | ೧೦ | ಪ್ರಿಯೆ | ಪ್ರಿಯ |
| ೬೪ | ೧೬ | ಆನುಭವಿಸು | ಅನುಭವಿಸು |
| ೭೬ | ೨೭ | ಹೇಳಿದೆ | ಹೇಳದೆ |
| ೭೮ | ೧೯ | ಬಂಧುಗಳಗಳನ್ನೂ | ಬಂಧುಗಳನ್ನೂ |
| ೮೧ | ೧ | ದಿಗ್ಭ್ರಮೆ | ದಿಗ್ಭ್ರಮೆ |

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| ೮೨ | ೨೨ | ವಾಸವತ್ತೆ | ವಾಸವದತ್ತೆ |
| ೯೪ | ೯ | ಅಯ್ಯೋ ! | " ಅಯ್ಯೋ ! |
| ೯೪ | ೧೪ | ಸಂದರ್ಭದಲಾದರೂ | ಸಂದರ್ಭದಲ್ಲಾದರೂ |
| ೯೫ | ೪ | ನಾನು | ತಾನು |
| ೯೯ | ೨೭ | ಹಾಗಿಂದ ಾಗೇ | ಹಾಗಿಂದ ಹಾಗೇ |
| ೧೦೯ | ೧೪ | ಪಡದೇ | ಪಡೆದೇ |
| ೧೦೨ | ೮ | ಅನುಕೂಲಗಳಾಗಿದ್ದ | ಅನುಕೂಲಳಾಗಿದ್ದ |
| ೧೧೬ | ೫ | ಅನುದಿನಂ | ಅನುವಿಂ |
| ೧೧೯ | ೨ | ರೂವಕಗಳಿಲ್ಲೆಲ್ಲಾ | ರೂಪಕಗಳಲ್ಲೆಲ್ಲಾ |
| ೧೧೯ | ೨ | ನಮ್ಮ ತಮ್ಮ | ತಮ್ಮ |
| ೧೨೧ | ೧೯ | ಸಂಕೊಲೆ | ಸಂಕೋಲೆ |
| ೧೨೨ | ೪ | ಅರ್ಜುನನ್ನು | ಅರ್ಜುನನು |
| ೧೨೩ | ೧೨ | ಹೇಳಿಲಿ | ಹೇಳಲಿ |
| ೧೨೩ | ೧೪ | ಬಿಟ್ಟು ಬಿದ್ದು | ಕಟ್ಟು ಬಿದ್ದು |
| ೧೨೫ | ೮ | ನಾದರೂ | ರಾದರೂ |
| ೧೨೬ | ೩ | ದ್ರೋಣರು | ದ್ರೋಣರು |
| ೧೩೦ | ೧೩ | ಶ್ಯಾಘ್ಯ | ಶ್ಲಾಘ್ಯ |
| ೧೩೦ | ೧೯ | ರಾಜಸೂಯಯಾಗಕ್ಕೆ | ರಾಜಸೂಯ ಯಾಗಕ್ಕೆ |
| ೧೩೧ | ೨೩ | ಬರುತ್ತದೆ, | ಬರುತ್ತದೆ |
| ೧೩೪ | ೧೩ | ಉಪನಯನಕೋಸ್ಕರ | ಉಪನಯನಕ್ಕೋಸ್ಕರ |
| ೧೪೪ | ೧೧ | ನಮ್ಮ | ತಮ್ಮ |
| ೧೪೫ | ೧೬ | ಬಲ್ಲರಿ | ಬಲ್ಲಿರಿ |
| ೧೪೬ | ೨೭ | ಔದಾರ್ಯ | ಔದಾರ್ಯ. |
| ೧೪೭ | ೮ | ದಾರಿಯುದ್ಧಕ್ಕೂ | ದಾರಿಯುದ್ದಕ್ಕೂ |
| ೧೪೮ | ೧೩ | ಹಾಗೆ | ಹಾಗೇ |
| ೧೫೧ | ೧೫ | ಕರಷ್ಯತಿ | ಕರಿಷ್ಯತಿ |
| ೧೫೪ | ೧೧ | ದುಯೋಧನ | ದುರ್ಯೋಧನ |
| ೧೫೬ | ೨ | ಮೇಲೆ | ಆಮೇಲೆ |
| ೧೫೮ | ೨೨ | ಕುರಂಗಿಯನ್ನೂ | ಕುರಂಗಿಯನ್ನು |
| ೧೫೮ | ೨೪ | ಆವಿಮಾರಕಕುರಂಗಿಯರಿಗೂ | ಆವಿಮಾರಕ |
| ೧೬೦ | ೫ | ಪ್ರೆಕ್ಷಕರಿಗೆ | ಪ್ರೇಕ್ಷಕರಿಗೆ |
| ೧೬೦ | ೨೬ | ದ್ವಿತೀಯೋ ನ | ದ್ವಿತೀಯೋನ |

# ಮೂರನೆಯ ಮುದ್ರಣ

ಈ ಗ್ರಂಥದ ಎರಡನೆಯ ಮುದ್ರಣದ ಪ್ರತಿಗಳು ಮುಗಿದು ಹೋದದ್ದರಿಂದ ಅದನ್ನು ಈಗ ಮತ್ತೆ ಮುದ್ರಿಸಲಾಗಿದೆ

ಈಚೆಗೆ ಭಾಸಕವಿಯ ವಿಚಾರವಾಗಿ ಕೆಲವು ಲೇಖನಗಳೇನೋ ಬಂದಿವೆ ಆದರೆ ಸ್ವಪ್ನವಾಸವದತ್ತ ಮುಂತಾದ ಹದಿಮೂರು ನಾಟಕಗಳು ಭಾಸನವೇ ಎಂದು ನಿರ್ವಿವಾದವಾಗಿ ನಿರ್ಧರಿಸುವುದು ಇನ್ನೂ ಸಾಧ್ಯವಾಗಿಲ್ಲ ಇಂದಿಗೂ ವಿದ್ವಾಂಸರಲ್ಲಿ (೧) ಇವು ಭಾಸನವಿರಬಹುದು, (೨) ಇವು ಭಾಸನವಲ್ಲ, (೩) ಇವುಗಳಲ್ಲಿ ಸ್ವಪ್ನವಾಸವದತ್ತ ಮುಂತಾದ ಒಂದೆರಡರಲ್ಲಾದರೂ ಭಾಸನಾಟಕಗಳ ಕೆಲವು ಭಾಗಗಳಿರಬಹುದು— ಎಂದು ಮೂರು ಪಕ್ಷಗಳಿವೆ ಕಾಲವೂ ಅಷ್ಟೇ ಅನಿಶ್ಚಿತವಾಗಿ ಉಳಿದಿದೆ

ಈಗ್ಗೆ ಕೆಲವು ವರ್ಷಗಳ ಹಿಂದೆ "ಯಜ್ಞಫಲ" ವೆಂಬ ಒಂದು ನಾಟಕ ಸಿಕ್ಕಿತು ಅದರಲ್ಲಿರುವುದು ರಾಮಾಯಣ ಬಾಲಕಾಂಡದ ಕಥೆ. ಇಂಥ್ಃಒಂದು ನಾಟಕವು ಭಾಸನ ರಾಮಾಯಣ ನಾಟಕಚಕ್ರದಲ್ಲಿ ಇದ್ದಿರಬಹುದು ಎಂದು ಕೆಲವರು ಯೋಚಿಸಿದ್ದರು ಆದ್ದರಿಂದ ಅದು ಸಾಹಿತಿಗಳಲ್ಲಿ ಹೆಚ್ಚಿನ ಕುತೂಹಲವನ್ನೇ ಉಂಟುಮಾಡಿತು ಇದರ ಹಸ್ತಪ್ರತಿಗಳು ಉತ್ತರ ದೇಶದಲ್ಲಿ ದೊರಕಿ, ಅವು ಕಾಗದದ ಮೇಲೆ ದೇವನಾಗರೀ ಲಿಪಿಯಲ್ಲಿ ಬರೆದವುಗಳಾಗಿ, ಸುಮಾರು ಇನ್ನೂರೈವತ್ತು ವರ್ಷ ಹಿಂದಿನವುಗಳಾದ್ದರಿಂದ ಸಮಸ್ಯೆಯು ಒಂದು ವಿಧದಲ್ಲಿ ಇನ್ನೂ ತೊಡಕಾಯಿತು ಇದನ್ನು ಡಾ|| ದಂಡೇಕರ್ ಮೊದಲಾದ ವಿದ್ವಾಂಸರು ಪರೀಕ್ಷಿಸಿ ವಿಮರ್ಶಿಸಿ ಲೇಖನಗಳನ್ನು ಬರೆದಿದ್ದಾರೆ. ಇವುಗಳ ಆಧಾರದ ಮೇಲೂ ಆ ನಾಟಕವನ್ನು ವ್ಯಾಸಂಗಮಾಡಿಯೂ ಒಂದು ಲೇಖನವನ್ನು ಬರೆದು ಎರಡನೆಯ ಅನುಬಂಧವಾಗಿ (ಪುಟ ೧೭೧) ಸೇರಿಸಿದ್ದೇನೆ ಭಾಸನ ವಿಚಾರದಲ್ಲಿ ಆಸಕ್ತಿ ಇರುವವರಿಗೆ ಇದರಿಂದ ಉಪಯೋಗವೂ ಸಂತೋಷವೂ ಆದೀತೆಂದು ಭಾವಿಸುತ್ತೇನೆ.

ಬೆಂಗಳೂರು
೧—೬—೧೯೫೩ } ಎ ಆರ್. ಕೃಷ್ಣಶಾಸ್ತ್ರೀ

ಈ ಗ್ರಂಥವನ್ನು
ಕನ್ನಡ ಸಂಸ್ಕೃತಗಳಲ್ಲಿ ನನ್ನ ಪ್ರಥಮ ಗುರುಗಳಾದ
ನನ್ನ ತೀರ್ಥರೂಪರವರ ಜ್ಞಾಪಕಾರ್ಥವಾಗಿ
ಬರೆದು ಪ್ರಕಟಿಸಿದ್ದೇನೆ
ಎ ಆರ್ ಕೃ

# ಭಾ ಸ ಕ ವಿ

## ಪೀಠಿಕೆ

ಭಾಸಕವಿಯ ವಿಚಾರವು ಸಂಸ್ಕೃತ ಸಾಹಿತ್ಯ ಚರಿತ್ರೆಯಲ್ಲಿ ಒಂದು ದೊಡ್ಡ ಗಂಟಾಗಿದೆ ಅದು ಈಗ್ಗೆ ಕೆಲವು ವರ್ಷಗಳ ತನಕ ಕಡು ಗಂಟಾಗಿ ಬಿಚ್ಚುವುದಕ್ಕೆ ದಾರಿಯೇ ತೋರದಂತಿದ್ದುದರಿಂದ ಅದನ್ನು ಯಾರೂ ಕೈಗೇ ತೆಗೆದುಕೊಳ್ಳುತ್ತಿರಲಿಲ್ಲ ಈಚೆಗೆ ಅದನ್ನು ಬಿಡಿಸುವುದಕ್ಕೆ ಸ್ವಲ್ಪ ಅವಕಾಶ ಸಿಕ್ಕಿದೆ ಆದರೆ ಅದು ಎಷ್ಟರಮಟ್ಟಿಗೆ ಬಿಡುತ್ತದೆಯೋ ಕಾಲಕ್ರಮದಲ್ಲಿ ಗೊತ್ತಾಗಬೇಕು ಕೆಲವರು ಅದನ್ನು ಬಿಡಿಸಿ ಬಿಟ್ಟಿದ್ದೇವೆಂದು ತಮ್ಮ ತಮ್ಮ ಮಟ್ಟಿಗೆ ನಿರ್ಧರಮಾಡಿಕೊಂಡಿದ್ದರೂ ಅವರ ಸಿದ್ಧಾಂತಗಳು ಎಲ್ಲರಿಗೂ ನಿರ್ವಿವಾದವಾಗಿರುವಂತೆ ಕಾಣುತ್ತಿಲ್ಲ, ಅವು ಪರಸ್ಪರ ವಿರುದ್ಧವಾಗಿರುವುದೇ ಸಂಶಯಕ್ಕೆ ಕಾರಣ ಪ್ರತಿಯೊಬ್ಬರೂ ತಾವು ಹೇಳುವುದೇ ಸರಿ, ಇತರರು ಹೇಳುವುದು ತಪ್ಪೆನ್ನಬಹುದು ಆದರೆ, ವಿದ್ವಾಂಸರೇ ವ್ಯಾಜ್ಯವಾಡುವಾಗ—ಅದರಲ್ಲಿಯೂ ಸ್ವಸಂವೇದ್ಯತೆಯೇ ಪ್ರಮಾಣವಾಗುವಾಗ—ಈ ವಿವಾದವನ್ನು ತೀರ್ಮಾನ ಮಾಡುವವರಾರು ?

೧೯೧೦ ನೆಯ ಇಸವಿಯಲ್ಲಿ ಮ|| ಟಿ ಗಣಪತಿಶಾಸ್ತ್ರಿಗಳು ತಿರುವಾಂಕೂರು ಸಂಸ್ಥಾನದ ದಕ್ಷಿಣ ಪ್ರಾಂತದಲ್ಲಿ ಗ್ರಂಥಶೇಖರಕ್ಕಾಗಿ ಸಂಚಾರಮಾಡುತ್ತಿದ್ದಾಗ–೧ ಸ್ವಪ್ನನಾಟಕಂ, ೨ ಪ್ರತಿಜ್ಞಾನಾಟಿಕಾ, ೩ ಪಂಚರಾತ್ರಂ, ೪ ಚಾರುದತ್ತಂ, ೫ ದೂತಘಟೋತ್ಕಚಂ, ೬ ಅವಿಮಾರಕಂ, ೭ ಬಾಲಚರಿತಂ, ೮ ಮಧ್ಯಮವ್ಯಾಯೋಗಃ, ೯ ಕರ್ಣಭಾರಂ, ೧೦ ಊರುಭಂಗಂ, ೧೧. ಅಭಿಷೇಕನಾಟಕಂ, ೧೨. ಪ್ರತಿಮಾನಾಟಕಂ, ೧೩. ದೂತವಾಕ್ಯಂ—ಎಂಬ ಹದಿಮೂರು ಸಂಸ್ಕೃತ ನಾಟಕಗಳು ದೊರೆತವು ಇವು ಭಾಸಕವಿಕೃತವೆಂದು ಮ|| ಗಣಪತಿಶಾಸ್ತ್ರಿಗಳು ಅಭಿಪ್ರಾಯವನ್ನು

ಕೊಟ್ಟರು * ಈ ಗ್ರಂಥಗಳಲ್ಲಿಯೇ ಕರ್ತೃವಿನ ಹೆಸರು ಭಾಸನೆಂದು ಉಕ್ತವಾಗಿಬಿಟ್ಟಿದ್ದರೆ, ಯಾರೂ ಬದಲು ಹೇಳುವ ಹಾಗಿರಲಿಲ್ಲ ಆದರೆ ಅದೇ ಇಲ್ಲವಾಗಿ ವ್ಯಾಜ್ಯಕ್ಕೊಂದು ಮೂಲವಾಯಿತು

## ಪೂರ್ವ ಪರಿಚಯ

ಮ|| ಗಣಪತಿಶಾಸ್ತ್ರಿಗಳು ತಮ್ಮ ಸಿದ್ಧಾಂತಕ್ಕೆ ಕೊಟ್ಟಿರುವ ಕಾರಣಗಳನ್ನು ಹೇಳುವುದಕ್ಕೆ ಮುಂಚೆ ಅದುವರೆಗೆ ಭಾಸಕವಿಯ ವಿಚಾರವಾಗಿ ತಿಳಿದುಬಂದದ್ದನ್ನು ಇಲ್ಲಿ ಸೂಚಿಸಬಹುದು ಈಗ ಭಾಸನ ಹೆಸರಿನಲ್ಲಿ ಹದಿಮೂರು ನಾಟಕಗಳಿದ್ದರೂ, ಸುಮಾರು ಇಪ್ಪತ್ತು ವರ್ಷಗಳ ಕೆಳಗೆ ಅವುಗಳ ಚಿಹ್ನೆಯೂ ಇರಲಿಲ್ಲ ಸುಭಾಷಿತ ಕಾವ್ಯಸಂಗ್ರಹಾದಿಗಳಲ್ಲಿ ಅವನದೆಂದು ಉಕ್ತವಾಗಿರುವ ಕೆಲವು ಶ್ಲೋಕಗಳನ್ನು (ಪುಟ ೪ ನ್ನು ನೋಡಿ) ಬಿಟ್ಟರೆ ಅವನ ಕೃತಿಯೆಂದು ವಾದಕ್ಕಾದರೂ ಮುಂದಿಡಬಹುದಾದ ಒಂದು ಸಮಗ್ರ ಗ್ರಂಥವೂ ಇರಲಿಲ್ಲ ತಿರುಳು ಇಲ್ಲದ್ದರಿಂದ ತೂರಿಹೋಯಿತು ಎನ್ನುವಹಾಗಿಲ್ಲ ಕವಿಸಾರ್ವಭೌಮನಾದ ಕಾಳಿದಾಸನೇ "ಮಾಳವಿಕಾಗ್ನಿಮಿತ್ರ" ದ ಪ್ರಸ್ತಾವನೆಯಲ್ಲಿ," ಭಾಸ, ಸೌಮಿಲ್ಲ, ಕವಿಪುತ್ರ ಮುಂತಾದ ದೊಡ್ಡ ದೊಡ್ಡ ಪ್ರಾಚೀನಕವಿಗಳಿರುವಾಗ ನನ್ನಂಥ ಹೊಸ ಕವಿಗೆ ಆದರ ಹೇಗೆ ಬಂದೀತು ? " ಎಂದು ಅಧೈರ್ಯಪಟ್ಟುಕೊಂಡು ಕೇಳಿದ್ದಾನೆ. ತನ್ನಲ್ಲಿ ಘನವಾದ ಆತ್ಮವಿಶ್ವಾಸವಿತ್ತೆಂಬುದು ಮುಂದಿನ

---

ಭಾಸನು ೨೩ ನಾಟಕಗಳನ್ನು ಬರೆದನೆಂದು ಪ್ರತೀತಿ ಇರುವಂತೆ ತೋರುತ್ತದೆ ಪ್ರಿಯದರ್ಶಿಕಾ ನಾಟಕದ ಭೂಮಿಕೆ (ಶ್ರೀರಂಗಂ ೧೯೦೯) ಪುಟ XXIII .

"ಶ್ರೀಮತಾಂ ಶ್ರೀನಿವಾಸಶಾಸ್ತ್ರಿಣಾಂ ಪುಸ್ತಕ ಶಾಲಾಯಾಂ ಭಾಸಸ್ಯ ಕಿರಣಾವಳೀ ಮುಕುಟತಾಡಿತಕೋದಾತ್ತರಾಘವಾನಿ ನಾಮ ನಾಟಕಾನಿ ಪೂರ್ವಂ ಕದಾಚಿತ್ಸಂಗೃಹೀತಾನ್ಯಾಸನ್, ಸ್ವಯಂ ಚ ವಿಲೋಕಿತಾನಿ, ತತ್ರ ಉದಾತ್ತರಾಘವಪ್ರಸ್ತಾವನಾಯಾಂ ಭಾಸಕವಿರಾತ್ಮಾನಂತ್ರಯೋವಿಂಶತೇ ರೂಪಕಾಣಾಂ ಕರ್ತಾರಂ ಪ್ರಸ್ತೌತೀತಿ ಶ್ರೀನಿವಾಸಶಾಸ್ತ್ರಿಣಾಮವರಜೈಃ ಶ್ರೀಮದ್ಭಿರ್ನಾರಾಯಣಶಾಸ್ತ್ರಿಭಿರುಚ್ಯತೇ"

ಈ ಹೇಳಿಕೆಯಿಂದ ಭಾಸನು ಕಿರಣಾವಳಿ ಮುಕುಟತಾಡಿತಕ, ಉದಾತ್ತರಾಘವ ಮುಂತಾದ ನಾಟಕಗಳನ್ನು ಬರೆದಿದ್ದನೆಂದಾಗುತ್ತದೆ ಇವು ಮತ್ತೆಲ್ಲೂ ಪ್ರಸಿದ್ಧವಾಗಿಲ್ಲ ಆದ್ದರಿಂದ ಮೇಲೆ ಕಂಡ ಗ್ರಂಥಗಳನ್ನು ನೋಡಿದ ಹೊರತು ನಾರಾಯಣ ಶಾಸ್ತ್ರಿಗಳ ಈ ಹೇಳಿಕೆಗೆ ಪ್ರಾಮಾಣ್ಯಕೊಡಲಾಗುವುದಿಲ್ಲ.

ಪುರಾಣಮಿತ್ಯೇವ ನ ಸಾಧು ಸರ್ವಂ ನ ಚಾಪಿ ಸರ್ವಂ ನವಮಿತ್ಯವದ್ಯಂ|
ಸಂತಃ ಪರೀಕ್ಷ್ಯಾನ್ಯತರದ್ಭಜಂತೇ ಮೂಢಃಪರಪ್ರತ್ಯಯನೇಯಬುದ್ಧಿಃ ।

ಎಂಬ ಶ್ಲೋಕದಿಂದ ಗೊತ್ತಾದರೂ, ಶಾಕುಂತಲ ನಾಟಕದಲ್ಲಿ ಇನ್ನೂ ಗಂಭೀರವಾಗಿ

ಆಪರಿತೋಷಾದ್ವಿದುಷಾಂ ನ ಸಾಧು ಮನ್ಯೇ ಪ್ರಯೋಗವಿಜ್ಞಾನಂ |
ಬಲವದಪಿ ಶಿಕ್ಷಿತಾನಾಂ ಆತ್ಮನ್ಯಪ್ರತ್ಯಯಂ ಚೇತಃ ॥

ಎಂದು ಹೇಳಿರುವಂತೆ, ಇದು ಕಾಳಿದಾಸನಲ್ಲಿದ್ದ ಕೇವಲ ಆತ್ಮಶ್ಲಾಘಾ ವೈಮುಖ್ಯವೆಂದೂ ವಿನಯ ಮಾತ್ರವೆಂದೂ, ಭಾಸಾದಿಗಳಿಗೆ ಅವನ ಕಾಲಕ್ಕೆ ಮಾತ್ರ ಪ್ರಸಿದ್ಧಿಯಿದ್ದು ಆಮೇಲೆ ಹೋಯಿತೆಂದೂ ಹೇಳುವ ಹಾಗಿಲ್ಲ ಏಕೆಂದರೆ—ಸೌಮಿಲ್ಲ ಕವಿಪುತ್ರರ ಮಾತಿರಲಿ, ಭಾಸನಂತೂ ಮುಂದಕ್ಕೂ ಪ್ರಸಿದ್ಧನಾಗಿದ್ದನೆಂಬುದು ಸ್ಪಷ್ಟವಾಗಿದೆ ಬಾಣನು (ಸು ಕ್ರಿ ಶ ೬೨೦) ತನ್ನ ಹರ್ಷಚರಿತ್ರದ ಪೀಠಿಕೆಯಲ್ಲಿ

ಸೂತ್ರಧಾರಕೃತಾರಂಭೈಃ ನಾಟಕೈರ್ಬಹುಭೂಮಿಕೈಃ |
ಸಪತಾಕೈರ್ಯಶೋ ಲೇಭೇ ಭಾಸೋ ದೇವಕುಲೈರಿವ ॥

ಎಂದು ಅವನನ್ನು ಶ್ಲಾಘಿಸಿದ್ದಾನೆ ಮತ್ತೊಂದು ಶತಮಾನ ಈಚೆಗೆ ಇದ್ದ ವಾಕ್ಪತಿರಾಜನು (ಸು ಕ್ರಿ ಶ ೭೫೦) ಕಾಳಿದಾಸನೂ ಜಲಣ ಮಿತ್ತ (ಜ್ವಲನಮಿತ್ರ=ಅಗ್ನಿಸಖ)ನಾದ ಭಾಸನೂ, ಇನ್ನೂ ಒಬ್ಬಿಬ್ಬರೂ ತನಗೆ ಇಷ್ಟರಾದ ಕವಿಗಳು ಎಂದು ಹೇಳಿದ್ದಾನೆ (ಗೌಡ ವಹೋ. ಶ್ಲೋ ೮೦೦) ರಾಜಶೇಖರನು—(ಸು ಕ್ರಿ ಶ ೧೦೦೦? ೧೨೫೦?) ಭಾಸನನ್ನು ಕವಿಶ್ರೇಷ್ಠರಲ್ಲಿ ಪರಿಗಣಿಸಿ—"ಭಾಸನ ನಾಟಕಗಳನ್ನು ಪರೀಕ್ಷೆಮಾಡುವುದಕ್ಕಾಗಿ ವಿದ್ವಾಂಸರು ಅವುಗಳನ್ನು ಬೆಂಕಿಯಲ್ಲಿ ಹಾಕಲು, ಅವುಗಳಲ್ಲಿ ಸ್ವಪ್ನವಾಸವದತ್ತವನ್ನು ಬೆಂಕಿಯು—ಸುಡಲಿಲ್ಲ*"

---

* ಭಾಸನಾಟಕಚಕ್ರೇಽಪಿ ಛೇಕೈಃ ಕ್ಷಿಪ್ತೇ ಪರೀಕ್ಷಿತುಂ |
ಸ್ವಪ್ನವಾಸವದತ್ತಸ್ಯ ದಾಹಕೋಽಭೂನ್ನಪಾವಕಃ ॥ (ಸೂಕ್ತಿಮುಕ್ತಾವಳಿ)

ಜಯನಾಥನ(೧೩ನೆಯ ಶತಮಾನ)ಪೃಥ್ವೀರಾಜ ಚರಿತದಲ್ಲಿಯೂ (I-೩) ಹೇಳಿಕೆಯೊಂದು ಇದೆ —

"ಭಾಸಸ್ಯ ಕಾವ್ಯಂ ಖಲು ವಿಷ್ಣುಧರ್ಮಾನ್ ಸೋಽಪ್ಯಾನನಾತ್ ಭಾರತವನ್ಮುಮೋಚ"—

ಭಾಸನ ಕಾವ್ಯವನ್ನೂ(ವ್ಯಾಸರ)ಭಾರತವನ್ನೂ ಅಗ್ನಿಯು ಬಿಟ್ಟುಬಿಟ್ಟನು.

ಎಂಬ ಒಂದು ವೈಚಿತ್ರ್ಯವನ್ನು ತೋರಿಸಿದ್ದಾನೆ ಇದರಿಂದ ಭಾಸನ ನಾಟಕಗಳಲ್ಲಿಲ್ಲಾ "ಸ್ವಪ್ನವಾಸವದತ್ತ"ಕ್ಕೆ ಅಗ್ರಸ್ಥಾನವನ್ನು ಕೊಟ್ಟಂತಾಗುವುದಲ್ಲದೆ ಆ ನಾಟಕದ ಆದಿಯಲ್ಲಿ ಬರುವ "ದಾಹಕವಾಗದ ಪಾವಕ"ಕ್ಕೂ ಜ್ಞಾಪನವುಂಟಾಗುತ್ತದೆ ಇದರಿಂದಲೇ ವಾಕ್ಪತಿ ರಾಜನು ಭಾಸನನ್ನು "ಜಲಣಮಿತ್ತ" ಎಂದು ಕರೆದಿರುವುದಕ್ಕೂ ಉಪಪತ್ತಿಯನ್ನು ಹೇಳಬಹುದು * ಜಯದೇವನು 'ಭಾಸ' ನನ್ನು ವಾಗ್ದೇವಿಯ 'ಹಾಸ' ಕ್ಕೆ ಹೋಲಿಸಿದ್ದಾನೆ ಸರ್ವಾನಂದನು (ಕ್ರಿ ಶ ೧೧೫೯?) ತನ್ನ 'ಅಮರಕೋಶ ಟೀಕಾ ಸರ್ವಸ್ವ' ದಲ್ಲಿ ಸ್ವಪ್ನವಾಸವದತ್ತದ ಹೆಸರು ಹೇಳಿ ಅದರಿಂದ 'ಕಾಮಶೃಂಗಾರ' ಕ್ಕೆ ಉದಾಹರಣೆಯನ್ನು ಕೊಟ್ಟಿದ್ದಾನೆ ಸುಭಾಷಿತಾವಳಿ (ಸಂಖ್ಯೆ ೧೨೮೬, ೧೩೫೩, ೧೬೧೯, ೧೬೨೮, ೧೮೨೧, ೧೯೯೪), ಸದುಕ್ತಿ ಕರ್ಣಾಮೃತ, ಶಾರ್ಙ್ಗಧರ ಪದ್ಧತಿ (ಸಂಖ್ಯೆ ೩೨೯೨, ೩೩೩೦), ಹರಿಹರಾವಳಿ (ರಾ ಏ ಸೊ ಜ ೧೮೯೧, ಪು ೩೩೧—೩೩೨), ಯಶಸ್ತಿಲಕ ಚಂಪು—ಇವುಗಳಲ್ಲಿ ಭಾಸನದೆಂದು ಶ್ಲೋಕಗಳು ಉದ್ಧೃತವಾಗಿವೆ †

---

* ಸ್ವಪ್ನವಾಸವದತ್ತದ ಕಥೆಯು ಜನಿಸುವುದು "ಲಾವಾಣಕ ವಹ್ನಿ"ಯಿಂದ, ಪಂಚರಾತ್ರವು ಮೊದಲಾಗುವುದು ದಾವಾಗ್ನಿಯ ವರ್ಣನೆಯಿಂದ; ಅಭಿಷೇಕ ನಾಟಕದಲ್ಲಿ ಸೀತೆಯೂ, ಅವಿಮಾರಕದಲ್ಲಿ ಕಥಾನಾಯಕನೂ ಅಗ್ನಿಪ್ರವೇಶಮಾಡುವರು, ಆದರೆ ಅಗ್ನಿಯು ಅವರನ್ನು ಸುಡದು

† ಆದರೆ ಇವುಗಳಲ್ಲಿ ಪ್ರಾಯಶಃ ಯಾವುದೂ ಈಗ ಸಿಕ್ಕಿರುವ ನಾಟಕಗಳಲ್ಲಿ ದೊರೆತಿಲ್ಲ ಇವು, ಈಗ ಸಿಕ್ಕದೇ ಇದ್ದಿರಬಹುದಾದ ಭಾಸನ ಇತರ ನಾಟಕಗಳಲ್ಲಿ ದೊರಕಬಹುದೆಂದೂ, ಸಂಗ್ರಹಕಾರರೇ ತಪ್ಪುಮಾಡಿರಬಹುದಂದೂ ಭಾಸಪಕ್ಷದವರು ವಾದಿಸುತ್ತಾರೆ ಈ ನಾಟಕಗಳು ಭಾಸಕೃತವಲ್ಲವೆಂಬುದಕ್ಕೆ ಇದೇ ನಿದರ್ಶನನೆಂದು ಪ್ರತಿಪಕ್ಷದವರು ವಾದಿಸುತ್ತಾರೆ ಸಂಗ್ರಹಕಾರರು ಇತರ ಕಡೆಗಳಲ್ಲಿ ತಪ್ಪುಮಾಡಿರುವುದು ನಿಜವಾದರೂ, ಈ ಶ್ಲೋಕಗಳು ಇತರ ನಾಟಕಗಳಲ್ಲಿ ಸಿಕ್ಕಬಹುದಾದದ್ದು ಸಂಭವವಾದರೂ ಸಂದೇಹಕ್ಕೇನೋ ಕಾರಣವಾದಂತಾಯಿತು ಈ ಸಂದರ್ಭದಲ್ಲಿ ಭಾಸಪಕ್ಷದವರು ಹೇಳುವುದೇನೆಂದರೆ—(೧) ಯಶಸ್ತಿಲಕ ಚಂಪೂಕಾರನಾದ ಸೋಮದೇವನು "ಪೇಯಾ ಸುರಾ ಪ್ರಿಯತಮಾಮುಖಮೀಕ್ಷಿತವ್ಯಂ ಗ್ರಾಹ್ಯಃ ಸ್ವಭಾವಲಲಿತೋ ವಿಕೃತಶ್ಚ ವೇಷಃ|ಯೇನೇದಮೀದೃಶಮದೃಶ್ಯತ ಮೋಕ್ಷವರ್ತ್ಮ ದೀರ್ಘಾಯುರಸ್ತು ಭಗವಾನ್ ಸ ಪಿನಾಕಪಾಣಿಃ||" ಎಂಬ ಶ್ಲೋಕವನ್ನು ಭಾಸನದೆಂದು ಹೇಳಿದ್ದಾನ ಆದರೆ ಇದು ಮಹೇಂದ್ರವಿಕ್ರಮವರ್ಮನ(೭ನೆಯ ಶತ )ಮತ್ತವಿಲಾಸದಲ್ಲಿದೆ ಆದ್ದರಿಂದ ಈ ವಿಷಯದಲ್ಲಿ

ಭಾಮಹನು (೭ನೆಯ ಶತ) 'ಪ್ರತಿಜ್ಞಾಯೌಗಂಧರಾಯಣ' ದ ವಸ್ತುವನ್ನು 'ನ್ಯಾಯ ವಿರುದ್ಧ'ವೆಂದು ಖಂಡಿಸಿದ್ದಾನೆ ದಂಡಿಯು

---

ಸೋಮದೇವನು ತಪ್ಪು ತಿಳಿದುಕೊಂಡಿರಬಹುದು, ಇಲ್ಲವೇ ಮತ್ತ ವಿಲಾಸಕಾರನು ಈಗ ಸಿಕ್ಕದೇ ಇರುವ ಮತ್ತಾವುದಾದರೂ ಒಂದು ಭಾಸನಾಟಕದಿಂದ ಈ ಶ್ಲೋಕವನ್ನು ತೆಗೆದುಕೊಂಡಿರಬಹುದು ಇದರಂತೆಯೇ ಸುಭಾಷಿತಾವಳಿಯಲ್ಲಿ ಅಶ್ವಘೋಷನದೆಂದು ಉಕ್ತವಾಗಿರುವ ಶ್ಲೋಕಗಳಲ್ಲಿ ಒಂದೂ ಅವನ "ಬುದ್ಧ ಚರಿತ"ದಲ್ಲಿ ದೂರೆಯುವುದಿಲ್ಲ 'ಲಿಂಪತೀವ' ಎಂಬ ಶ್ಲೋಕವು ದಂಡಿಯ ದೆಂದು ಪ್ರತೀಹಾರೇಂದುರಾಜನೂ, ವಿಕ್ರಮಾದಿತ್ಯನದೆಂದು ವಲ್ಲಭದೇವನೂ, ಮೇಂಠನದೆಂದು ಶಾರ್ಙ್ಗದೇವನೂ, ಶೂದ್ರಕನದೆಂದು ಕಾವ್ಯಪ್ರಕಾಶ ವ್ಯಾಖ್ಯಾನ ಕಾರರೂ ಹೇಳುತ್ತಾರೆ ಆದ್ದರಿಂದ ಇವರನ್ನು ಹೇಗೆ ನಂಬುವುದು? (೨) ಅಭಿ ನವಗುಪ್ತ ಕೃತವಾದ ಧ್ವನ್ಯಾಲೋಕಲೋಚನದ ಮೂರನೆಯ ಉದ್ಯೋತದಲ್ಲಿ "ಸ್ವಚಿಂತ ಪಕ್ಷ್ಮಕಪಾಟಂ ನಯನದ್ವಾರಂ ಸ್ವರೂಪತಟತ್ಯೈವ| ಉದ್ಘಾಟ್ಯಸಾ ಪ್ರ ವಿಷ್ಟಾ ಹೃದಯಗೃಹಂ ಮೇ ನೃಪತನೂಜಾ||" ಎಂಬ ಶ್ಲೋಕವು ಸ್ವಪ್ನವಾಸವ ದತ್ತದ್ದೆಂದು ಅನುವಾದಿತವಾಗಿದೆ ಆದರೆ ಈ ಶ್ಲೋಕವು ಸ್ವಪ್ನವಾಸವದತ್ತದ ಯಾವ ಮಾತೃಕೆಯಲ್ಲಿಯೂ ಇಲ್ಲ ಇದು ಸ್ವಪ್ನವಾಸವದತ್ತದಲ್ಲಿ ಇರುವುದಕ್ಕೆ ಔಚಿತ್ಯವಿಲ್ಲದ್ದರಿಂದ ಸೋಮದೇವನಂತೆ ಜನರ ಹೇಳಿಕೆಯನ್ನು ನಂಬಿ ಲೋಚನ ಕಾರನೂ ಭ್ರಾಂತಿಯಿಂದ ಇದು ಭಾಸನದೆಂದು ಹೇಳಿರಬೇಕು, ಅಥವಾ ಈ ನಾಟಕದಲ್ಲಿ ಈ ಶ್ಲೋಕವಿದ್ದು (ಆರನೆಯ ಅಂಕದಲ್ಲಿ ೩ನೆಯ ಪದ್ಯದ ಹಿಂದೆ) ಲೇಖನ ದೋಷದಿಂದ ಬಿಟ್ಟುಹೋಗಿರಬಹುದು, ಇಲ್ಲವೇ, ಪಾಠ ಭೇದವಿರ ಬಹುದು ನಿರ್ಣಯಸಾಗರ ಮುದ್ರಾಲಯದಲ್ಲಿ ಮುದ್ರಿತವಾದ ಶಾಕುಂತಲ ನಾಟಕದಲ್ಲಿಯೇ "ನ ಖಲು ನ ಖಲು ಬಾಣಃ " ಎಂಬ ಶ್ಲೋಕವೂ, "ಕುಲ್ಯಾಂ ಭೋಭಿಃ ಪವನ ಚಪಲೈಃ " ಎಂಬ ಶ್ಲೋಕವೂ ಲುಪ್ತವಾಗಿವೆ (೪೩ನೇ ಪುಟ ವನ್ನೂ ನೋಡಿ) (೩) ಸಾಹಿತ್ಯದರ್ಪಣದ VI, ೭೫ನೆಯ ಶ್ಲೋಕದ ವಿವರಣ ದಲ್ಲಿ "ಉತ್ಸಾಹಾತಿಶಯಂ ವತ್ಸ, ಯುಗಪನ್ಮನಃ" ಎಂಬ ಶ್ಲೋಕವೂ "ಬಾಲಚರಿತ"ದ್ದೆಂದು ಉದ್ಧೃತವಾಗಿದೆ ಇದು ಈಗ ಪ್ರಕಟವಾಗಿರುವ ಬಾಲಚರಿತದಲ್ಲಿಲ್ಲ ಪ್ರಾಯಶಃ ಇದು ರಾಮವಿಷಯಕವಾದ ಮತ್ತೊಂದು "ಬಾಲಚರಿತ"ದ್ದಾಗಿರಬೇಕು ಆದ್ದರಿಂದಲೇ ದರ್ಪಣವ್ಯಾಖ್ಯಾನಕಾರನು 'ದಾಶರಥಿಯನ್ನು ಕುರಿತು ಭಾರ್ಗವನು ಹೇಳಿದ ಮಾತು ಇದು' ಎಂದು ಹೇಳಿ ದ್ದಾನೆ ಭಾಸನು ರಾಮಾಯಣದ ಅಯೋಧ್ಯಾ ಅರಣ್ಯಕಾಂಡಗಳನ್ನು ಪ್ರತಿಮಾ ನಾಟಕದಲ್ಲಿಯೂ, ಕಿಷ್ಕಿಂಧಾ ಸುಂದರ ಯುದ್ಧಕಾಂಡಗಳನ್ನು ಅಭಿಷೇಕ ನಾಟಕದಲ್ಲಿಯೂ ವಿಸ್ತಾರವಾಗಿ ಪ್ರತಿಪಾದಿಸಿದ್ದಾನೆ. ಇನ್ನು ಉಳಿದ ಬಾಲ ಕಾಂಡವನ್ನು ಮೇಲೆ ಊಹಿಸಿರುವಂತೆ ಒಂದು 'ಬಾಲಚರಿತ'ದಲ್ಲಿ ಪ್ರತಿಪಾದಿಸಿರ ಬಹುದು (ಆದರೆ ಎರಡೂ ನಾಟಕಗಳಿಗೂ ಒಂದೇ ಹೆಸರಿದ್ದಿರಬಹುದೇ?)

(೭ನೆಯ ಶತ.) ಬಾಲಚರಿತ (ಅಥವಾ ಚಾರುದತ್ತ)ದಿಂದಲೂ, ವಾಮನನು (೮ನೆಯ ಶತ.) ಚಾರುದತ್ತ ಸ್ವಪ್ನವಾಸವದತ್ತಗಳಿಂದಲೂ ಶ್ಲೋಕಗಳನ್ನು ಅನುವಾದಮಾಡಿದ್ದಾರೆ ಅಭಿನಗುಪ್ತನು (೧೦ನೆಯ ಶತ) 'ಸ್ವಪ್ನವಾಸವದತ್ತಾ' ಮತ್ತು 'ದರಿದ್ರ ಚಾರುದತ್ತ'ಗಳ ಹೆಸರನ್ನು ಹೇಳಿದ್ದಾನೆ ಆದರೆ ಇವರಲ್ಲಿ ಯಾರೂ ಭಾಸನು ಇವುಗಳ ಕರ್ತೃವೆಂದು ಹೇಳಿಲ್ಲ. 'ನಾಟ್ಯದರ್ಪಣ'ದಲ್ಲಿ ಅದರ ಕರ್ತೃಗಳಾದ ರಾಮಚಂದ್ರ ಮತ್ತು ಗುಣಚಂದ್ರ ಎಂಬವರು 'ಭಾಸಕೃತ ಸ್ವಪ್ನವಾಸವದತ್ತ'ದಿಂದ ಒಂದು ಶ್ಲೋಕವನ್ನು ಅನುವಾದಮಾಡಿರುವರು * ಇದರಂತೆಯೇ ದರಿದ್ರಚಾರುದತ್ತ ರೂಪಕದ ಹೆಸರು ಹೇಳಿರುವುದಲ್ಲದೆ ಮೃಚ್ಛಕಟಿಕದಿಂದಲೂ ಅನುವಾದಮಾಡಿದ್ದಾರೆ † ಸೋಮಪ್ರಭನು (ಕ್ರಿ ಶ. ೧೧೮೫) 'ಕುಮಾರಪಾಲ ಪ್ರತಿಬೋಧ'ದಲ್ಲಿ ಪ್ರತಿಜ್ಞಾನಾಟಕದಲ್ಲಿರುವಂತೆ ಉದಯನನ ಕಥೆಯನ್ನು ಹೇಳಿ ಅದರಿಂದ ಒಂದು ಶ್ಲೋಕವನ್ನು (III–೯) ಅನುವಾದ ಮಾಡಿದ್ದಾನೆ

ಈ ಸಂಗತಿಗಳನ್ನೆಲ್ಲಾ ಪರಿಶೀಲಿಸಿದರೆ ಕಾಳಿದಾಸನಿಗಿಂತ ಪ್ರಾಚೀನನಾದ ಭಾಸನೆಂಬ ಒಬ್ಬ ನಾಟಕ ಕರ್ತನಿದ್ದನೆಂದೂ, ಅವನು ಕಾಳಿದಾಸನ ಕಾಲದಿಂದಲೂ ಸುಪ್ರಸಿದ್ಧನಾಗಿದ್ದನೆಂದೂ, ಅವನು ಅನೇಕ ನಾಟಕಗಳನ್ನು ಬರೆದಿದ್ದನೆಂದೂ, ಅವುಗಳಲ್ಲೆಲ್ಲಾ 'ಸ್ವಪ್ನವಾಸವದತ್ತ'ವೇ ಶ್ರೇಷ್ಠವಾಗಿ ಎಣಿಸಲ್ಪಟ್ಟಿತ್ತೆಂದೂ, ಈ ಸ್ವಪ್ನವಾಸವದತ್ತಾದಿ ಗ್ರಂಥಗಳ ಕರ್ತೃವು ಲಕ್ಷಣ ಗ್ರಂಥಗಳಲ್ಲಿ ಉದಾಹರಣೆಗಳನ್ನು ತೆಗೆದುಕೊಳ್ಳುವುದಕ್ಕೆ ತಕ್ಕ ಯೋಗ್ಯತೆಯುಳ್ಳ ಕವಿಯೆಂದು ಅಲಂಕಾರಿಕರಿಂದ ಪರಿಗಣಿಸಲ್ಪಟ್ಟಿದ್ದನೆಂದೂ ಖಂಡಿತವಾಗಿ ತಿಳಿಯಬಹುದು

ಮೇಲೆ ಹೇಳಿದ ಹದಿಮೂರು ರೂಪಕಗಳ ಸಂಬಂಧವಾಗಿ ನಿಶ್ಚಯಿಸಬೇಕಾಗಿರುವ ಅಂಶಗಳು ಯಾವುವೆಂದರೆ —

---

* ಶೇಫಾಲಿಕಾ ಮಂಟಪದಲ್ಲಿರುವ ಶಿಲಾತಲವನ್ನು ನೋಡಿ ವತ್ಸರಾಜನು ಈ ಶ್ಲೋಕವನ್ನು ಹೇಳುವನು ಶೇಫಾಲಿಕಾ ಮಂಟಪವೇನೋ ಸ್ವಪ್ನವಾಸವದತ್ತದ ನಾಲ್ಕನೆಯ ಅಂಕದಲ್ಲಿ ನಿರ್ದಿಷ್ಟವಾಗಿದೆ ಆದರೆ ಈ ಶ್ಲೋಕ ಮಾತ್ರ ಅಲ್ಲಿ ದೊರೆಯುವುದಿಲ್ಲ (ಅನುಬಂಧವನ್ನು ನೋಡಿ)

† ಇದರಿಂದ ನಾಟ್ಯದರ್ಪಣದ ಕಾಲದಲ್ಲಿ (೧೨ನೆಯ ಶತ) ಚಾರುದತ್ತ, ಮೃಚ್ಛಕಟಿಕಗಳೆರಡೂ ಇದ್ದುವೆಂದು ಗೊತ್ತಾಗುತ್ತದೆ

### ೧. ಈ ರೂಪಕಗಳೆಲ್ಲಾ ಒಬ್ಬನೇ ಬರೆದವೇ ?

### ೨. ಒಬ್ಬನೇ ಬರೆದವಾದರೆ, ಅವುಗಳನ್ನು ಬರೆದವನು ಭಾಸನೇ ?

### ೩. ಇವುಗಳ ಕಾಲವಾವುದು ?

## ಗಣಪತಿಶಾಸ್ತ್ರಿಗಳ ಮತ

ಈ ವಿಚಾರವಾಗಿ ಗಣಪತಿಶಾಸ್ತ್ರಿಗಳು ಹೇಳುವುದೇನೆಂದರೆ* —

೧ ಈ ರೂಪಕಗಳು ಒಬ್ಬನೇ ಬರೆದವು ಏಕೆಂದರೆ —

(1) ಈ ರೂಪಕಗಳಲ್ಲೆಲ್ಲಾ ಮೊದಲು 'ನಾಂದ್ಯಂತದಲ್ಲಿ ಬಳಿಕ ಸೂತ್ರಧಾರನು ಪ್ರವೇಶಿಸಿ' ಎಂದು ಇದ್ದು, ಅನಂತರ ಮಂಗಳ ಶ್ಲೋಕವು ಬರುತ್ತದೆ (ಸಾಮಾನ್ಯವಾಗಿ ಇತರ ನಾಟಕಗಳಲ್ಲಿ ಮಂಗಳ ಶ್ಲೋಕವಾದ ಮೇಲೆ 'ಸೂತ್ರಧಾರನು ಪ್ರವೇಶಿಸಿ' ಎಂದು ಹೇಳುವುದು ರೂಢಿ†)

(11) "ಪ್ರಸ್ತಾವನೆ"ಯೆಂಬುದಕ್ಕೆ ಬದಲಾಗಿ ಇವುಗಳಲ್ಲಿ "ಸ್ಥಾಪನೆ" ಎಂಬ ಶಬ್ದವು ಉಪಯೋಗಿಸಲ್ಪಟ್ಟಿದೆ

---

* ಮ|| ಶಾಸ್ತ್ರಿಗಳು ಮೇಲೆ ಹೇಳಿದ ಹದಿಮೂರು ನಾಟಕಗಳಲ್ಲಿ ಸ್ವಪ್ನ ವಾಸವದತ್ತವನ್ನು ಮೊದಲನೆಯ ದಾಗಿ ೧೯೧೨ರಲ್ಲೂ, ಪ್ರತಿಮಾನಾಟಕವನ್ನು ಕೊನೆಯದಾಗಿ ೧೯೧೫ರಲ್ಲೂ ಪ್ರಕಟಿಸಿ ಅವೆರಡಕ್ಕೂ ವಿಸ್ತಾರವಾದ ಉಪೋದ್ಘಾತಗಳನ್ನು ಬರೆದಿದ್ದಾರೆ ಇಲ್ಲಿ ಹೇಳಿರುವ ಅಂಶಗಳು ಈ ಉಪೋದ್ಘಾತ ಗಳಿಂದ ಸಂಗ್ರಹೀತವಾಗಿವೆ

† ಕೊನೆಕೊನೆಗೆ ಮ|| ಶಾಸ್ತ್ರಿಗಳು ಈ ಅಂಶಕ್ಕೆ ಹೆಚ್ಚು ಪ್ರಾಧಾನ್ಯ ವನ್ನು ಕೊಡಲಿಲ್ಲ ಏಕೆಂದರೆ, ಶಾಕುಂತಲ ಮುದ್ರಾರಾಕ್ಷಸ ಮುಂತಾದ ಪ್ರಸಿದ್ಧ ನಾಟಕಗಳೂ ಮಲೆಯಾಳ ಪ್ರತಿಗಳಲ್ಲಿ ಹೀಗೆಯೇ, ಎಂದರೆ "ನಾಂದ್ಯಂತದಲ್ಲಿ ಬಳಿಕ ಸೂತ್ರಧಾರನು ಪ್ರವೇಶಿಸಿ" ಎಂದು ಆರಂಭವಾಗುತ್ತವೆ ಆದರೆ, ಈ ಹದಿಮೂರು ನಾಟಕಗಳೂ "ಮತ್ತ ವಿಲಾಸ" ನಾಟಕವೂ (೭ನೆಯ ಶತ.) ಈ ಅಂಶಗಳಲ್ಲಿ ಒಂದಾಗಿರುವುದರಿಂದ, ಬಾರ್ನೆಟ್‌ರವರು ಅಭಿಪ್ರಾಯಪಡು ವಂತೆ, ಇವೆಲ್ಲಾ ಏಳನೆಯ ಶತಮಾನದಲ್ಲಿ ರಚಿತವಾದವೆಂದು ಹೇಳುವುದು ಅಸಂಗತ ಮತ್ತವಿಲಾಸಾದಿ ಈಚಿನ ನಾಟಕಗಳು ಸುಪ್ರಸಿದ್ಧವಾದ ಹಿಂದಿನ ಸಂಪ್ರದಾಯವನ್ನು ಅನುಸರಿಸಿರಬಹುದು ಅಲ್ಲದೆ "ಮತ್ತ ವಿಲಾಸ"ಕ್ಕೂ ಇವಕ್ಕೂ ಎಷ್ಟೋ ವ್ಯತ್ಯಾಸಗಳಿವೆ _ಅದರ ಪ್ರಸ್ತಾವನೆಯಲ್ಲಿ ಕವಿ ಕಾವ್ಯಗಳ ಹೆಸರು ಹೇಳಿದೆ, ಗದ್ಯಗಳಲ್ಲಿ ದೊಡ್ಡದೊಡ್ಡ ಸಮಾಸಗಳಿವೆ (ಭಾಸನದರಲ್ಲಿ ಇದು ಅಪರೂಪ); ನಾಟಕವೂ ದೊಡ್ಡದು, ಭರತವಾಕ್ಯವು ಬೇರೆ__ಇತ್ಯಾದಿ.

(iii) ಕಾಳಿದಾಸಾದಿಗಳ ನಾಟಕಗಳ ಪ್ರಸ್ತಾವನೆಯಲ್ಲಿ ಕವಿಯ ಮತ್ತು ಗ್ರಂಥದ ಹೆಸರೂ ಕೆಲವು ವೇಳೆ ಅವುಗಳ ಗುಣಾತಿಶಯಗಳೂ ಉಕ್ತವಾಗಿರುವಾಗ ಈ ಸ್ಥಾಪನೆಗಳಲ್ಲಿ ಕವಿಯ ಅಥವಾ ಕಾವ್ಯದ* ಹೆಸರು ಕೂಡ ಬರುವುದಿಲ್ಲ

(iv) ಇವುಗಳನೇಕಗಳಲ್ಲಿ ಭರತವಾಕ್ಯವು 'ನಮ್ಮ ಮಹಾ ರಾಜನು ಭೂಮಿಯನ್ನು ಕಾಪಾಡಲಿ' ಎಂದು ಅರ್ಥಕೊಡುವ ಶ್ಲೋಕವೇ ಆಗಿದೆ —

ಇಮಾಂ ಸಾಗರಪರ್ಯಂತಾಂ ಹಿಮವದ್ವಿಂಧ್ಯಕುಂಡಲಾಂ ।
ಮಹೀಮೇಕಾತಪತ್ರಾಂಕಾಂ ರಾಜಸಿಂಹ† ಪ್ರಶಾಸ್ತು ನಃ ॥

ಎಂಬ ಭರತವಾಕ್ಯ ಶ್ಲೋಕವು 'ಸ್ವಪ್ನವಾಸವದತ್ತ,' 'ಬಾಲಚರಿತ' ಗಳಲ್ಲಿಯೂ,

ಭವಂತ್ವರಜಸೋ ಗಾವಃ ಪರಚಕ್ರಂ ಪ್ರಶಾಮ್ಯತು ।
ಇಮಾಮಪಿ ಮಹೀಂ ಕೃತ್ಸ್ನಾಂ ರಾಜಸಿಂಹಃ† ಪ್ರಶಾಸ್ತು ನಃ ॥

ಎಂಬ ಶ್ಲೋಕವು 'ಪ್ರತಿಜ್ಞಾ ಯೌಗಂಧರಾಯಣ,' 'ಅವಿಮಾರಕ', 'ಅಭಿಷೇಕ ನಾಟಕ'ಗಳಲ್ಲಿಯೂ, ಅದರ ಉತ್ತರಾರ್ಧವು 'ಪಂಚರಾತ್ರ' ದಲ್ಲಿಯೂ ಬರುತ್ತವೆ

(v) ಇವುಗಳನೇಕಗಳಲ್ಲಿ (ಪಂಚರಾತ್ರ-ಪ್ರತಿಮಾನಾಟಕ-ಸ್ವಪ್ನ ವಾಸವದತ್ತ-ಪ್ರತಿಜ್ಞಾ ಯೌಗಂಧರಾಯಣ) ಮಂಗಳ ಶ್ಲೋಕದೊಳಗೆ

---

* ಈ ಕಾವ್ಯಗಳ ಹೆಸರು ಗ್ರಂಥಾದಿಯಲ್ಲೂ ಕಂಡುಬರುವುದಿಲ್ಲ. ಗ್ರಂಥ ಗಳ ಕೊನೆಯಲ್ಲಿ ಇರುವ 'ಸ್ವಪ್ನನಾಟಕವು ಮುಗಿಯಿತು' ಎಂಬಂಥ ವಾಕ್ಯ ಗಳಿಂದ ಅವುಗಳನ್ನು ತಿಳಿದುಕೊಂಡಿರುವುದಾಗಿದೆ

† 'ರಾಜಸಿಂಹ' ಎಂಬುದು ಯಾವ ರಾಜನ ಹೆಸರೂ ಆಗಿರಲಾರದು, ಇದು 'ರಾಜಶ್ರೇಷ್ಠ' ಎಂಬ ಅರ್ಥದಲ್ಲಿ ಉಪಯುಕ್ತವಾಗಿರಬೇಕು ಹಾಗಿಲ್ಲ ದಿದ್ದರೆ ಕೆಲವು ಶ್ಲೋಕಗಳಲ್ಲಿ 'ರಾಜಸಿಂಹ' ಎಂದೂ ಮಿಕ್ಕುವುಗಳಲ್ಲಿ 'ನರಪತಿ', 'ರಾಜ' ಎಂದೂ ಇರುತ್ತಿರಲಿಲ್ಲ ಕಾಳಿದಾಸಾದಿಗಳಿಗಿಂತಲೂ ಪ್ರಾಚೀನನಾದ 'ರಾಜಸಿಂಹ'ನೆಂಬ ಹೆಸರಿನ ದೊರೆಯು ಯಾರೂ ತಿಳಿಯಬಂದಿಲ್ಲ. ಇದು ಮುಂದೆ ಈ ನಾಟಕಗಳನ್ನು ಆಡುವಾಗಲೆಲ್ಲಾ ಆಯಾಕಾಲದ ರಾಜರಿಗೆ ಅನ್ವ ಯಿಸಿ ಆಶೀರ್ವಾದರೂಪವಾಗಿರುವಂತೆ ಸಾಮಾನ್ಯೋಕ್ತಿಯಾಗಿದ್ದಿರಬಹುದು.

'ರಾಜಸಿಂಹ'ನು ಕ್ರಿ ಶ ಎರಡನೆಯ ಶತಮಾನದ ಕೊನೆಯಲ್ಲಿ ಆಳಿದ

ನಾಟಕದ ಮುಖ್ಯ ಪಾತ್ರಗಳನ್ನು ತಂದು ಸೇರಿಸಿ "ಮುದ್ರಾಲಂಕಾರ" ದಿಂದ ಕಥಾವಸ್ತುವನ್ನು ಸೂಚಿಸಿದೆ

(vi) ಭರತವಾಕ್ಯಗಳೇ ಅಲ್ಲದೆ ಇನ್ನು ಕೆಲವು ವಾಕ್ಯಗಳು ಎರಡು ಅಥವಾ ಅನೇಕ ನಾಟಕಗಳಲ್ಲಿ ಬರುವುದುಂಟು ಉದಾಹರಣೆ—

೧ ಏವಮಾರ್ಯಮಿಶ್ರಾನ್ ವಿಜ್ಞಾಪಯಾಮಿ, ಅಯೇ ಕಿನ್ನು ಖಲು ಮಯಿವಿಜ್ಞಾಪನವ್ಯಗ್ರೇ ಶಬ್ದ ಇವ ಶ್ರೂಯತೇ! ಅಂಗ, ಪಶ್ಯಾಮಿ

ಎಂಬ ವಾಕ್ಯವು ಪ್ರತಿಜ್ಞಾಯೌಗಂಧರಾಯಣ, ಚಾರುದತ್ತ, ಅವಿಮಾರಕ, ಪ್ರತಿಮಾನಾಟಕ, ಕರ್ಣಭಾರ ಈ ನಾಟಕಗಳನ್ನು ಬಿಟ್ಟು ಮಿಕ್ಕ ಎಲ್ಲವುಗಳಲ್ಲಿಯೂ ಬರುತ್ತದೆ

೨ ಲಿಂಪತೀವ ತಮೋಽಂಗಾನಿ ವರ್ಷತೀವಾಂಜನಂ ನಭಃ ।
ಅಸತ್ಪುರುಷಸೇವೇವ ದೃಷ್ಟಿರ್ನಿಷ್ಫಲತಾಂ ಗತಾ ॥

ಎಂಬ ಶ್ಲೋಕವು ಚಾರುದತ್ತ, ಬಾಲಚರಿತ ಈ ಎರಡರಲ್ಲಿಯೂ ಬರುತ್ತದೆ

೩ ಕಿಂ ವಕ್ಷ್ಯತೀತಿ ಹೃದಯಂ ಪರಿಶಂಕಿತಂ ಮೇ ॥

ಎಂಬ ಶ್ಲೋಕವು ಸ್ವಪ್ನವಾಸವದತ್ತದ ಆರನೆಯ ಅಂಕದಲ್ಲಿಯೂ, ಅಭಿಷೇಕ ನಾಟಕದ ನಾಲ್ಕನೆಯ ಅಂಕದಲ್ಲಿಯೂ ಬರುತ್ತದೆ

೪ ಧರ್ಮಸ್ಸ್ನೇಹಾಂತರೇ ನ್ಯಸ್ತಾ

ಎಂಬ ಶ್ಲೋಕಭಾಗವು ಪ್ರತಿಮಾನಾಟಕದಲ್ಲಿಯೂ (ಅಂಕ ೨), ಅಭಿಷೇಕನಾಟಕದಲ್ಲಿಯೂ (ಅಂಕ ೬) ಬರುತ್ತದೆ ಇತ್ಯಾದಿ

---

ಒಂದನೆಯ ರುದ್ರಸಿಂಹನೆಂಬ ಕ್ಷತ್ರಪರಾಜನೆಂದೂ (ಆದ್ದರಿಂದ ಭಾಸನು ಕ್ರಿ. ಶ. ಎರಡನೆಯ ಶತಮಾನದಲ್ಲಿದ್ದನೆಂದೂ) ಸ್ಟೆನ್‌ಕೋನೋ ಎಂಬವರು ಹೇಳುತ್ತಾರೆ ಆದರೆ ಮೇಲೆ ಹೇಳಿದಂತೆ ರಾಜಸಿಂಹನೆಂದರೆ ಯಾವ ಒಬ್ಬ ನಿಯತನಾದ ರಾಜನೂ ನಿರ್ದಿಷ್ಟನಾಗದೆ ಸುಮ್ಮನೆ ರಾಜಶ್ರೇಷ್ಠನೆಂದು ಅರ್ಥವಾಗಬಹುದು ಅಲ್ಲದೆ "ಸಿಂಹ"ನೆಂಬ ಉತ್ತರಾರ್ಧವುಳ್ಳ ಹೆಸರು ಭರತಖಂಡದಲ್ಲಿ ಎಷ್ಟೋ ರಾಜರಿಗೆ ಇದ್ದಿತು ನಿಷ್ಕಾರಣವಾಗಿ ಅವುಗಳಲ್ಲಿ ಯಾವುದೋ ಒಂದನ್ನು ಆರಿಸಿಕೊಳ್ಳುವುದು ಪ್ರಮಾಣವಾಗಲಾರದು ಕ್ಷತ್ರಪರಾಜರಲ್ಲಿಯೇ ರುದ್ರಸಿಂಹ, ಸತ್ಯಸಿಂಹ, ಸಿಂಹಸೇನ ಎಂಬ ಮೂರು ಜನ "ಸಿಂಹ"ರಿದ್ದರು ಇವರೆಲ್ಲರೂ ಕ್ರಿ ಶ ೧೮೦ ರಿಂದ ೩೮೮ ರ ವರೆಗೆ ಆಳಿದರು ಇವರಲ್ಲಿ ರಾಜಸಿಂಹನು ಯಾರೆಂದು ಹೇಗೆ ಹೇಳುವುದು ?

ಈ "ರಾಜಸಿಂಹನು" ಕ್ರಿ ಶ. ಆರು ಅಥವಾ ಏಳನೆಯ ಶತಮಾನದಲ್ಲಿದ್ದ ಯಾವನೋ ಒಬ್ಬ ಪಲ್ಲವರಾಜನಾಗಿರಬೇಕೆಂಬುದು ಹೀರಾನಂದಶಾಸ್ತ್ರಿಗಳ ಮತ.

೨ ಇವು ಭಾಸನೇ ಬರೆದವು ಏಕೆಂದರೆ —

(1) ಹಿಂದೆ ಹೇಳಿದಂತೆ ಇವೆಲ್ಲವೂ ಏಕಕರ್ತೃಕಗಳಾದಮೇಲೆ ಇವುಗಳಲ್ಲಿ ಯಾವುದಾದರೂ ಒಂದನ್ನು ಭಾಸನು ಬರೆದದ್ದೆಂದು ತೋರಿಸಿದರೂ ಮಿಕ್ಕವೆಲ್ಲವೂ ಅವನೇ ಬರೆದವು ಎಂದು ಹೇಳಿದಹಾಗಾಯಿತು ಈಗ, ಪೂರ್ವೋಕ್ತ ಅಭಿನವಗುಪ್ತ ರಾಜಶೇಖರಾದಿಗಳ ವಾಕ್ಯಗಳಿಂದ (ಪುಟ ೩-೬) ಭಾಸನು "ಸ್ವಪ್ನವಾಸವದತ್ತ" ವೆಂಬ ಒಂದು ಶ್ಲಾಘ್ಯವಾದ ನಾಟಕವನ್ನು ಬರೆದಿದ್ದನೆಂಬುದು ಗೊತ್ತಿದೆಯಷ್ಟೆ ಈಗ ಸಿಕ್ಕಿರುವ ನಾಟಕ ಚಕ್ರದಲ್ಲಿಯೂ "ಸ್ವಪ್ನನಾಟಕ" ವೆಂಬ ಹೆಸರಿನ ಒಂದು ಶ್ರೇಷ್ಠವಾದ ರೂಪಕವಿದೆ ಈ ಹೆಸರು "ಸ್ವಪ್ನವಾಸವದತ್ತ ನಾಟಕ" ವೆಂಬುದರ ಸಂಗ್ರಹವಿರಬೇಕು ಏಕೆಂದರೆ, ಈ ನಾಟಕದಲ್ಲಿ ಉದಯನನು ವಾಸವದತ್ತೆಯನ್ನು ಸ್ವಪ್ನದಲ್ಲಿ ಕಂಡದ್ದು ಬರುತ್ತದೆ (ಕೆಲವು ಮಾತೃಕೆಗಳ ಕೊನೆಯಲ್ಲಿ "ಸ್ವಪ್ನವಾಸವದತ್ತಾ ಸಮಾಪ್ತಾ" ಎಂಬುದಾಗಿಯೂ ಇದೆ—ರಾ ಏ ಸೊ ಜರ್ನಲ್, ಏಪ್ರಿಲ್ ೧೯೨೬, ಪುಟ ೩೩೭) ಇದರಲ್ಲಿರುವ ಕಥೆಯನ್ನು ನೋಡಿದರೂ ರಾಜಶೇಖರನ ಶ್ಲೋಕದಲ್ಲಿ ಉಕ್ತವಾಗಿರುವುದೂ ಇದೂ ಒಂದೇ ಎಂದು ಹೇಳಬೇಕಾಗುತ್ತದೆ

(11) "ಸ್ಥಾಪನೆ" ಯಲ್ಲಿ ಕವಿಕಾವ್ಯಾದಿಗಳ ಹೆಸರು ಮುಂತಾದವು ಇಲ್ಲದಿರುವುದನ್ನು ನೋಡಿದರೆ, ಈ ಗ್ರಂಥಗಳು, ಪೀಠಿಕೆಯಲ್ಲಿ ಕವಿಯ ಹೆಸರು ಮುಂತಾದವುಗಳನ್ನು ಜೋಡಿಸುವ ಸಂಪ್ರದಾಯವು ರೂಢಿಗೆ ಬರುವುದಕ್ಕೆ ಮುಂಚೆ (ಎಂದರೆ ಕಾಳಿದಾಸಾದಿಗಳಿಗಿಂತ ಹಿಂದೆ) ರಚಿತವಾಗಿರಬೇಕು ಎಂದು ತೋರುತ್ತದೆ

(111) ಈ ಗ್ರಂಥಗಳಲ್ಲಿ ಕಂಡುಬರುವ ಅಪೂರ್ವ ವಾಕ್ಸಂಪತ್ತು, ಅಲಂಕಾರ ಭಾರವಿಲ್ಲದ ರಸಪುಷ್ಟಿ, ರಸಾನುಗುಣವಾದ ರೀತಿ, ನಾನಾ ವಸ್ತುಗಳನ್ನೂ ಅವುಗಳ ಸನ್ನಿವೇಶಗಳನ್ನೂ ಹೃದಯಂಗಮವಾಗುವಂತೆ ಚಿತ್ರಿಸುವ ಸಾಮರ್ಥ್ಯ, ಸುಲಭವಾದ ಪದಗಳು, ಗಂಭೀರವಾದ ಮೃದುಮಧುರ ಶೈಲಿ, ತಿಳಿಯಾದ ಭಾಷೆ—ಇವುಗಳೆಲ್ಲವೂ ಭಾಸನ ಪ್ರಾಚೀನತೆ ಸಾಮರ್ಥ್ಯ ಕೀರ್ತಿ ಇವುಗಳಿಗೆ ಅನುರೂಪವಾಗಿವೆ.

(iv) ಈ ರೂಪಕಗಳ ಸಂಸ್ಕೃತ ಭಾಷೆಯಲ್ಲಿ ಪಾಣಿನೀಯ ವ್ಯಾಕರಣಕ್ಕೆ ವಿರುದ್ಧವಾದ ಕೆಲವು ಪ್ರಯೋಗಗಳು ಸಿಕ್ಕುತ್ತವೆ ಇದೂ ಪ್ರಾಚೀನತೆಗೆ ಒಂದು ಗುರುತು (ಭಾಸನು ಪಾಣಿನಿಗಿಂತಲೂ ಹಿಂದೆ ಇದ್ದನೆಂಬುದು ಶಾಸ್ತ್ರಿಗಳ ಅಭಿಪ್ರಾಯ )

(v) ಕಾಳಿದಾಸ ಶೂದ್ರಕ ಮುಂತಾದವರ ನಾಟಕಾದಿಗಳಲ್ಲಿ ಈ ಗ್ರಂಥಗಳ ವಾಕ್ಯಗಳೂ ಅಭಿಪ್ರಾಯಗಳೂ ಕಂಡುಬರುವುದರಿಂದ ಈ ಗ್ರಂಥಗಳು ಕಾಳಿದಾಸಾದಿಗಳಿಗಿಂತ ಹಿಂದೆ (ಭಾಸನಿಂದಲೇ) ರಚಿತವಾಗಿರಬೇಕು (ಈ ಸಾದೃಶ್ಯಗಳಿಗೆ ಸಂಸ್ಕೃತ ಸ್ವಪ್ನವಾಸವದತ್ತದ ಮತ್ತು ಪ್ರತಿಮಾನಾಟಕದ ಉಪೋದ್ಘಾತಗಳನ್ನು ನೋಡಿ )

೩ ಶಾಸನ ಕಾಲವು ಸುಮಾರು ಕ್ರಿ ಪೂ ಐದು ಅಥವಾ ಆರನೆಯ ಶತಮಾನವಾಗಿರಬೇಕು ಏಕೆಂದರೆ—

(i) ಭಾಮಹನು ಭಾಸನ ಪ್ರತಿಜ್ಞಾಯೌಗಂಧರಾಯಣದ ವಸ್ತುವನ್ನು ವಿಚಾರಮಾಡಿದ್ದಾನೆಯಷ್ಟೆ, ಆದ್ದರಿಂದ ಭಾಸನು ಭಾಮಹನಿಗಿಂತ ಹಿಂದಿನವನಾಗಿರಬೇಕು ಭಾಮಹನು ಬೃಹತ್ಕಥೆಯನ್ನು ಬರೆದ ಗುಣಾಢ್ಯನಿಗಿಂತಲೂ ಹಿಂದಿನವನು (?) ಗುಣಾಢ್ಯನು ಶಕಸ್ಥಾಪಕನಾದ ಶಾಲೀವಾಹನನ ಸಮಕಾಲಿಕನು ಆದ್ದರಿಂದ ಭಾಮಹನು ಕ್ರಿ ಪೂ ಒಂದನೆಯ ಶತಮಾನದವನಾದರೂ ಆಗಿರಬೇಕು ಅವನಿಗಿಂತ ಹಿಂದೆ ಇದ್ದ ಭಾಸನ ಕಾಲವು ಇನ್ನೂ ಒಂದೆರಡು ಶತಮಾನಗಳಿಗಿಂತ ಹಿಂದೆ ಇರಬೇಕು

(ii) ನವಂ ಶರಾವಂ ಸಲಿಲೈಸ್ಸುಪೂರ್ಣಂ ಸುಸಂಸ್ಕೃತಂ
ದರ್ಭಕೃತೋತ್ತರೀಯಂ ॥
ತತ್ತಸ್ಯ ಮಾಭೂನ್ನರಕಂ ಸ ಗಚ್ಛೇತ್ ಯೋ ಭರ್ತೃಪಿಂಡಸ್ಯ ಕೃತೇ
ನ ಯುಧ್ಯೇತ್ ॥

ಎಂಬ ಶ್ಲೋಕವು ಕೌಟಿಲೀಯ ಅರ್ಥಶಾಸ್ತ್ರದಲ್ಲಿಯೂ (ಕ್ರಿ ಪೂ ೪ನೆಯ ಶತ ?) ಪ್ರತಿಜ್ಞಾಯೌಗಂಧರಾಯಣದಲ್ಲಿಯೂ ಬರುತ್ತದೆ ಅರ್ಥಶಾಸ್ತ್ರದಲ್ಲಿ ಇದು ಬಂದಿರುವ ಸನ್ನಿವೇಶವನ್ನು ನೋಡಿದರೆ ಬೇರೊಂದು ಗ್ರಂಥದಿಂದ ಅನುವಾದಮಾಡಿರುವಂತೆ ತೋರುತ್ತದೆ. ಆದ್ದರಿಂದ ಕೌಟಿಲ್ಯನೇ ಈ ಶ್ಲೋಕವನ್ನು ಭಾಸನಿಂದ ತೆಗೆದುಕೊಂಡಿರ

ಬೇಕು—ಎಂದರೆ ಭಾಸನು ಕ್ರಿ ಪೂ ನಾಲ್ಕನೆಯ ಶತಮಾನದಲ್ಲಿದ್ದ ಕೌಟಿಲ್ಯನಿಗಿಂತಲೂ ಹಿಂದಿನವನು.

(III) ಪಾಣಿನೀಯ ವ್ಯಾಕರಣಕ್ಕೆ ವಿರುದ್ಧವಾದ ಕೆಲವು ಪ್ರಯೋಗಗಳು ಭಾಸನಲ್ಲಿ ಇರುವುದನ್ನು ನೋಡಿದರೂ ಅವನು ಪಾಣಿನಿಗಿಂತ ಪ್ರಾಚೀನನೆಂದು ಹೇಳಬೇಕಾಗುತ್ತದೆ ಅವನ ಕಾಲದಲ್ಲಿ ಪಾಣಿನಿ ಇನ್ನೂ ಹುಟ್ಟಿಯೇ ಇರಲಿಲ್ಲ ಏಕೆಂದರೆ ಪಾಣಿನಿಯು ನಂದ ಕೌಟಿಲ್ಯ ಇವರ ಸಮಕಾಲದವನು ಭಾಸನು ಕೌಟಿಲ್ಯನಿಗಿಂತ ಹಿಂದಿನವನು

(ಪ್ರತಿಮಾನಾಟಕದ ಐದನೆಯ ಅಂಕದಲ್ಲಿ 'ನ್ಯಾಯಶಾಸ್ತ್ರ ಕರ್ತ' ನೆಂದು ಒಬ್ಬ 'ಮೇಧಾತಿಥಿ'ಯ ಹೆಸರು ಹೇಳಿದೆ ಈ ಮೇಧಾತಿಥಿಯು ಒಬ್ಬ ಪ್ರಾಚೀನ ಋಷಿಯಾಗಿರಬೇಕು—ಮನುಭಾಷ್ಯಕರ್ತನಾದ ಮೇಧಾತಿಥಿಯಾಗಿರಲಾರನು * ಏಕೆಂದರೆ, ಈ ಮೇಧಾತಿಥಿಯು ಮನು ಮಹೇಶ್ವರ ಬೃಹಸ್ಪತಿ ಪ್ರಚೇತಸ್ಸು ಇವರಿಗ ಸಮಾನಸ್ಕಂಧನಾಗಿ ಉಕ್ತನಾಗಿದ್ದಾನೆ ಆದ್ದರಿಂದ ಭಾಸನು ಮನು ಭಾಷ್ಯಕರ್ತನಾದ ಮೇಧಾತಿಥಿಗಿಂತ ಈಚಿನವನೆಂದೂ ಆದ್ದರಿಂದ ಪ್ರಾಚೀನನಲ್ಲವೆಂದೂ ಹೇಳುವ ಹಾಗಿಲ್ಲ )

(IV) ಭಾಸನು ವ್ಯಾಸ ವಾಲ್ಮೀಕಿಗಳ ಹಾಗೇ ಬಹು ಪ್ರಾಚೀನನಾದ್ದರಿಂದಲೇ ಅವನನ್ನೂ ಒಬ್ಬ ಋಷಿಯೆಂದು ವ್ಯವಹರಿಸುತ್ತಿದ್ದಂತೆ ತೋರುತ್ತದೆ ಏಕೆಂದರೆ ಜಯಾಂಕನ (೧೨ನೆಯ ಶತ) ಪೃಥ್ವೀರಾಜಚರಿತಕ್ಕೆ ಬರೆದಿರುವ ವ್ಯಾಖ್ಯಾನದಲ್ಲಿ ಜೋನರಾಜನು (೧೫ನೆಯ ಶತ)

"ಸೋಗ್ನಿರಪಿ ಭಾಸಮುನೇಃ ಕಾವ್ಯಂ ವಿಷ್ಣುಧರ್ಮಾನ್ಮುಖಾತ್ ತ್ಯಕ್ತವಾನ್ ನ್ಯಾದಹದಿತ್ಯರ್ಥಃ"

ಎಂದು ಹೇಳಿದ್ದಾನೆ ಆದ್ದರಿಂದ ಅವನಲ್ಲಿ ಪ್ರಾಚೀನವಾದ ಆರ್ಷ

* ಮನು ಭಾಷ್ಯಕರ್ತ (೧೦ನೆಯ ಶತ)ನೆಂಬುದು ಬಾರ್ನೆಟ್‌ರವರ ಮತ 'ಮನು ಭಾಷ್ಯ'ವನ್ನು 'ನ್ಯಾಯಶಾಸ್ತ್ರ'ವೆಂದೇಕೆ ಕರೆಯಬೇಕು ? ಅವರ ಅಭಿಪ್ರಾಯವು ತಪ್ಪೆಂದೂ 'ಮೇಧಾತಿಥಿ'ಯೆಂಬುದು ಗೌತಮರ ಹೆಸರೆಂದೂ, ಸತೀಶಚಂದ್ರವಿದ್ಯಾಭೂಷಣರವರೂ ಕೀತ್‌ರವರೂ ತೋರಿಸಿದ್ದಾರ

ಪ್ರಯೋಗಗಳು ಸಿಕ್ಕುವುದು ಉಪಪನ್ನವಾಗಿಯೇ ಇದೆ ಶ್ರವ್ಯಕಾವ್ಯಗಳಿಗೆ ವ್ಯಾಸ ವಾಲ್ಮೀಕಿಗಳು ಹೇಗೋ ದೃಶ್ಯಕಾವ್ಯಗಳಿಗೆ ಭಾಸನು ಹಾಗೆ ಇದ್ದಿರಬೇಕು

(v) ಭಾಸನ ನಾಟಕಗಳು ಅನೇಕ ಕಡೆಗಳಲ್ಲಿ ಈಗ ಇರುವ ಭರತನಾಟ್ಯಶಾಸ್ತ್ರಕ್ಕೆ ವಿರುದ್ಧವಾಗಿವೆ—ಪ್ರಸ್ತಾವನೆಯಲ್ಲಿ ಕವಿಯ ಹೆಸರನ್ನು ಹೇಳದಿರುವುದು, ರಂಗದಲ್ಲಿ ಯುದ್ಧ ವಧ ಮರಣಾದಿಗಳನ್ನು ಪ್ರದರ್ಶಿಸಿರುವುದು, ರಾಜನನ್ನು ರಾಣಿಯೇ ಅಲ್ಲದೆ ಇತರರೂ "ಆರ್ಯಪುತ್ರ" ಎಂದು ಸಂಬೋಧಿಸುವುದು, ಇತ್ಯಾದಿ ಇದನ್ನು ನೋಡಿದರೆ ಅವನು ಬೇರೆ ಯಾವುದೋ ನಾಟ್ಯಶಾಸ್ತ್ರವನ್ನು ಅನುಸರಿಸಿರಬೇಕೆಂದೂ ಭರತನ ನಾಟ್ಯಶಾಸ್ತ್ರವು ಆಗ ಇನ್ನೂ ಹುಟ್ಟಿರಲಿಲ್ಲವೆಂದೂ ತೋರುತ್ತದೆ ಭರತನಾಟ್ಯಶಾಸ್ತ್ರವೆಂದು ಈಗಿರುವ ಗ್ರಂಥವು ಈಚಿನ ನಾಟಕಾದಿಗಳನ್ನು ನೋಡಿ ಅವುಗಳಿಗೆ ಸರಿಹೋಗುವಂತೆ ಪರಿಷ್ಕರಿಸಿದ ಹಳೆಯ ಗ್ರಂಥದಂತೆ ಕಾಣುತ್ತದೆ ಶಿಲಾಲಿ ಕೃಶಾಶ್ವ ಮುನಿಗಳು ಪಾಣಿನಿಗಿಂತ ಮುಂಚೆ ನಟಸೂತ್ರಗಳನ್ನು ಬರದಿದ್ದರೆಂದು ಗೊತ್ತಾಗಿದೆ ಯಷ್ಟೆ, ಆ "ಮುನಿ" ಗಳ ನಟಸೂತ್ರಗಳಿಗೆ ಈ ಭಾಸ "ಮುನಿ" ಯ ರೂಪಕಗಳು ವಿಷಯವಾಗಿರಬಹುದು

(vi) ರಸಪರಿಪುಷ್ಟಿ, ಮೃದು ಮಧುರವಾದ ರೀತಿ, ಸುಲಭವಾದ ಬಿಗಿಯಾದ ಸಣ್ಣ ಸಣ್ಣ ವಾಕ್ಯಗಳು, ಇವುಗಳನ್ನು ನೋಡಿದರೆ ಸಂಸ್ಕೃತವನ್ನು ಎಲ್ಲರೂ ಮಾತನಾಡುತ್ತಿದ್ದ ಕಾಲದಲ್ಲಿ ಭಾಸನು ಇದ್ದಿರಬೇಕೆನ್ನಿಸುತ್ತದೆ ಈ ಕಾಲವು ಪತಂಜಲಿ ಪಾಣಿನಿಗಳಿಗಿಂತಲೂ ಹಿಂದಿನದೇ ಆಗುತ್ತದೆ

ಭಾಸನು ಪ್ರಾಚೀನನೆಂಬುದಕ್ಕೆ ಕೆಲವು ಆಕ್ಷೇಪಣೆಗಳು ಮತ್ತು ಅವುಗಳಿಗೆ ಸಮಾಧಾನ —

(1) ಕಾಳಿದಾಸ ಮತ್ತು ಭಾಸ ಇವರ ಪ್ರಾಕೃತಗಳಿಗೆ ಬಹಳ ಮಟ್ಟಿಗೆ ಸಾದೃಶ್ಯವಿದೆ ಇದರಿಂದ ಭಾಸನು ಸುಮಾರು ಕ್ರಿ ಪೂ. ೪ ನೆಯ ಶತಮಾನದಷ್ಟು ಪ್ರಾಚೀನನಲ್ಲವೆಂದು ಹೇಳಬಹುದು ಆದರೆ ಮ|| ಹರಪ್ರಸಾದಶಾಸ್ತ್ರಿಗಳು ಹೇಳುವಂತೆ, ಪ್ರತಿ ಕರ್ತರು ಹಳೆಯ

ಪ್ರಾಕೃತವನ್ನು ತಮ್ಮ ಕಾಲಕ್ಕೆ ತಕ್ಕಂತೆ ತಿದ್ದಿರಬಹುದು ಅಲ್ಲದೆ ಕಾಳಿದಾಸನ ಕಾಲದಲ್ಲಿ ಜನರು ಪ್ರಾಕೃತವನ್ನು ಆಡುವುದು ನಿಂತು ಹೋಗಿದ್ದುದ್ದರಿಂದ, ಕಾಳಿದಾಸನು ಭಾಸಾದಿಗಳ ಪ್ರಾಚೀನ ಮೇಲ್ಪಂಕ್ತಿಯನ್ನು ಹಿಡಿದು ಅವರು ಸ್ತ್ರೀಪಾತ್ರಗಳಿಗೆ ಗೊತ್ತುಮಾಡಿದ್ದ ಪ್ರಾಕೃತ ಭಾಷಾ ಜಾತಿಯನ್ನೇ ತನ್ನ ನಾಟಕಗಳಲ್ಲಿಯೂ ಪ್ರಯೋಗಿಸಿದನು

(11) ಪ್ರತಿಜ್ಞಾ ಯೌಗಂಧರಾಯಣ, ಅವಿಮಾರಕ, ಚಾರುದತ್ತ ಇವುಗಳಲ್ಲಿ ಶ್ರಮಣರ ಹೆಸರು ಬರುತ್ತದೆ ಇದರಿಂದಲೇ ಭಾಸನು ಬುದ್ಧನಿಗಿಂತ ಈಚೆ ಇದ್ದವನು ಎಂದು ಹೇಳುವಹಾಗಿಲ್ಲ ಏಕೆಂದರೆ ಬುದ್ಧನಿಗಿಂತ ಹಿಂದೆಯೇ ಇದ್ದು ಕಾಯಕ್ಲೇಶಪಡುತ್ತಿದ್ದ ತಪಸ್ವಿಗಳನ್ನು ಶ್ರಮಣರೆಂದು ಕರೆಯುತ್ತಿದ್ದಿರಬಹುದು

ಈ ನಾಟಕಗಳ ಪ್ರಸ್ತಾವನೆಗಳಲ್ಲಿ ಭಾಸನೇ ಕರ್ತೃವೆಂದು ಹೇಳಿಲ್ಲವಾದ್ದರಿಂದ, ಇತರ ಯಾವ ಬಾಹ್ಯಪ್ರಮಾಣಗಳನ್ನು ತಂದು ಒದಗಿಸಿದರೂ ಅವು ಕರ್ತೃವನ್ನು, ಯಾರೂ ಪ್ರತಿಹೇಳದಷ್ಟು ನಿಸ್ಸಂಶಯವಾಗಿಯೂ ನಿಷ್ಕೃಷ್ಟವಾಗಿಯೂ ನಿಶ್ಚಯಮಾಡಲಾರವೆಂಬುದು ಸ್ಪಷ್ಟವಾಗಿದೆ ಕವಿ ಕಾವ್ಯಗಳ ಹೆಸರು ಪ್ರಸ್ತಾವನೆಯಲ್ಲಿ ಸ್ಪಷ್ಟವಾಗಿ ಉಕ್ತವಾಗಿಬಿಟ್ಟಿದ್ದರೆ ಆ ಸಂಬಂಧವಾದ ವಿಚಾರವೇ ಅನಾವಶ್ಯಕವಾಗುತ್ತಿತ್ತು ಹಾಗೆ ಉಕ್ತವಾಗಿಲ್ಲದಿರುವುದರಿಂದಲೇ ವಿಚಾರದ ಆವಶ್ಯಕತೆ ಆದರೆ ಎಷ್ಟು ವಿಚಾರಮಾಡಿ ಊಹಿಸಲಿ, ಊಹೆ ಊಹೆಯೇ! ಅದರಿಂದ ಯಾವುದು ಬಹು ಮಟ್ಟಿಗೆ ಸಂಭವ, ಯಾವುದು ಅಸಂಭವ ಎಂಬುದನ್ನು ಮಾತ್ರ ನಿಶ್ಚಯಿಸಬಹುದು

## ಎರಡು ಪಕ್ಷಗಳು

ಗಣಪತಿಶಾಸ್ತ್ರಿಗಳು ಉಪೋದ್ಘಾತ ಸಹಿತವಾಗಿ ಈ ರೂಪಕಗಳನ್ನು ಪ್ರಕಟಿಸಿದ ಮೇಲೆ ಅವು ಸಂಸ್ಕೃತ ಸಾಹಿತ್ಯದಲ್ಲಿ ಆಸಕ್ತಿ ಇರುವವರೆಲ್ಲರನ್ನೂ ಎಬ್ಬಿಸಿ ಕೂರಿಸಿದುವು ಅವುಗಳನ್ನು ಓದಿದ ಮೇಲೆ ಈ ಕವಿ ಕಾವ್ಯಗಳು ಅವುಗಳ ಕಾಲ ಸ್ವಾರಸ್ಯ ಮುಂತಾದವುಗಳ ಮೇಲೆ ತಮ್ಮ ತಮ್ಮ ಅಭಿಪ್ರಾಯಗಳನ್ನು ಹೇಳದವರೇ ಇಲ್ಲ ಆದರೆ ಇವರಲ್ಲಿ ಯಾರೊಬ್ಬರೂ ಇತರರನ್ನು ಪೂರ್ತಿಯಾಗಿ ಒಪ್ಪುವುದಿಲ್ಲ. ಈ ಪಂಡಿತ

ಮಂಡಲಿಯನ್ನು ಮುಖ್ಯವಾಗಿ ಎರಡುಭಾಗ ಮಾಡಬಹುದು.—(೧) ಗಣಪತಿಶಾಸ್ತ್ರಿಗಳು ಹೇಳುವಂತೆ ಈ ನಾಟಕಗಳು ಭಾಸಕರ್ತೃಕವೇ ಆಗಿರಬೇಕು ಎಂದು ಹೇಳುವವರು, ಅಥವಾ (ಭಾಸಕರ್ತೃಕವೆಂದೇ ಸಾಧಿಸುವುದಕ್ಕಾಗದಿದ್ದರೂ) ಬಹುಶಃ ಭಾಸಕರ್ತೃಕವೇ ಆಗಿರಬೇಕು ಎಂದು ಹೇಳುವವರು, (೨) ಇವು ಭಾಸಕರ್ತೃಕಗಳಲ್ಲ, ಯಾರೋ ನವೀನರು ಮಾಡಿದವು ಎಂದು ಹೇಳುವವರು (ಕರ್ತೃ ಭಾಸನೇ ಹೌದೇ ಅಲ್ಲವೇ ಎಂಬ ನಿರ್ಣಯದ ಮೇಲೆ ಅವುಗಳ ಕಾಲವು ಹೆಚ್ಚು ಕಡಿಮೆಯಾಗುತ್ತದೆ, ಹೌದು ಎನ್ನುವವರಲ್ಲಿಯೂ ಭಿನ್ನಾಭಿಪ್ರಾಯಗಳು ಇವೆ ಆ ವಿಚಾರ ಮುಂದೆ ಬರುತ್ತದೆ) ಇವರಲ್ಲಿ ಭಾಸ ಪಕ್ಷದವರೇ ಹೆಚ್ಚು ಮಂದಿ, ಎಲ್ ಡಿ ಬಾರ್ನೆಟ್‌ರವರ ಹೊರತು* ಪ್ರಾಯಶಃ ಎಲ್ಲಾ ಪಾಶ್ಚಾತ್ಯ ವಿದ್ವಾಂಸರೂ ಭರತಖಂಡದ ಬಹುಜನ ಸಂಸ್ಕೃತ ವಿದ್ವಾಂಸರೂ ಈ ಪಂಗಡಕ್ಕೆ ಸೇರಿರುತ್ತಾರೆ. ಎರಡನೆಯ ಪಂಗಡಕ್ಕೆ ಮುಖ್ಯವಾಗಿ ಎಲ್ ಡಿ ಬಾರ್ನೆಟ್‌ರವರೂ ರಾಮ ಪಿಶರೋಟಿ ಕೃಷ್ಣ ಪಿಶರೋಟಿ ಮ॥ ಕುಪ್ಪಸ್ವಾಮಿಶಾಸ್ತ್ರಿಗಳು ಮುಂತಾದ ಕೆಲವು ಜನ ದ್ರಾವಿಡ ದೇಶದ ವಿದ್ವಾಂಸರೂ ಸೇರಿರುತ್ತಾರೆ ಆದರೆ ಇಂಥ ವಿಷಯಗಳಲ್ಲಿ ನಿಜಾಂಶವು ಯಾವ ಕಡೆಗೆ ಎಷ್ಟು 'ಅಭಿಮತ'ಗಳು ಬರುತ್ತವೆ ಎಂದು ಸಂಖ್ಯಾಬಾಹುಳ್ಯದಿಂದ ನಿಶ್ಚಯವಾಗತಕ್ಕದ್ದಲ್ಲ.

## ಅನುಕೂಲ ಪಕ್ಷದವರು

ಈಗ ಅನುಕೂಲ ಪಕ್ಷದವರು ಗಣಪತಿಶಾಸ್ತ್ರಿಗಳ ಅನುಮೋದನ ರೂಪವಾಗಿಯೂ ಖಂಡನ ರೂಪವಾಗಿಯೂ ಏನು ಹೇಳುತ್ತಾರೆಂದು ನೋಡೋಣ —

(೧) ಈ ರೂಪಕಗಳೆಲ್ಲವೂ ಏಕಕರ್ತೃಕಗಳೇ ಆಗಿರಬೇಕು ಹೀಗೆಂದು ನಿಶ್ಚಯಿಸುವುದಕ್ಕೆ ಮೇಲೆ ಗಣಪತಿಶಾಸ್ತ್ರಿಗಳು

* ಮೆಗ್ಡಾನಲ್‌ರವರು ಬಾರ್ನೆಟ್‌ರವರ ಪಕ್ಷಕ್ಕೆ ಸೇರದಿದ್ದರೂ ಭಾಸ ಪಕ್ಷದವರೆಂದು ಹೇಳುವಹಾಗಿಲ್ಲ ಕರ್ತೃ ಭಾಸನೆಂದು ಹೇಳಲು ಸಧ್ಯದಲ್ಲಿರುವ ಪ್ರಮಾಣಗಳು ಸಾಲವೆಂಬುದು ಅವರ ಅಭಿಪ್ರಾಯ – "*India's Past*" **Page 106**

ಕೊಟ್ಟಿರುವ ಕಾರಣಗಳ ಜೊತೆಗೆ ಮತ್ತೆ ಕೆಲವನ್ನೂ ಹೇಳಬಹುದು, ಅವು ಯಾವುವೆಂದರೆ —

(1) ಈ ರೂಪಕಗಳಿಗೆಲ್ಲಾ ಇನ್ನೂ ಕೆಲವು ಅಂಶಗಳಲ್ಲಿ ಸಾಮ್ಯವಿದೆ—ಈಗ ಪ್ರಸಿದ್ಧವಾಗಿರುವ ಕಾಳಿದಾಸ, ಭವಭೂತಿ ಮುಂತಾದವರ ಸಾಂಪ್ರದಾಯಿಕ ನಾಟಕಗಳಿಗಿಂತಲೂ ಇವೆಲ್ಲವೂ ಚಿಕ್ಕವು, ಇವುಗಳ "ಸ್ಥಾಪನೆ"ಗಳು ಇತರ ನಾಟಕಗಳ "ಪ್ರಸ್ತಾವನೆ"ಗಳಿಗಿಂತಲೂ ಸಣ್ಣವು

ಪ್ರತಿಜ್ಞಾಯೌಗಂಧರಾಯಣ ಸ್ವಪ್ನವಾಸವದತ್ತಗಳು ಏಕಕರ್ತೃಕಗಳೇ ಆಗಿರಬೇಕು ಏಕೆಂದರೆ, ಇವೆರಡೂ ಒಂದೇ ಕಥೆಯ ಎರಡು ಭಾಗಗಳು ಸ್ವಪ್ನವಾಸವದತ್ತವನ್ನು ಅರ್ಥಮಾಡಿಕೊಳ್ಳುವುದಕ್ಕೆ ಪ್ರತಿಜ್ಞಾಯೌಗಂಧರಾಯಣದ ತಿಳಿವಳಿಕೆ ಇರಲೇಬೇಕು ಇದು ಕಥಾಸರಿತ್ಸಾಗರದ ಕಥೆಯಾದ್ದರಿಂದ ಪ್ರಸಿದ್ಧವಾದದ್ದೆನ್ನಬಹುದು, ಆದರೆ ಪ್ರತಿಜ್ಞಾಯೌಗಂಧರಾಯಣದಲ್ಲಿ ಉಕ್ತವಾಗಿರುವ ಕೆಲವು ಸಂಗತಿಗಳು ಕಥಾಸರಿತ್ಸಾಗರದಲ್ಲಿ ಬಂದಿಲ್ಲ ಆದ್ದರಿಂದ ಸ್ವಪ್ನವಾಸವದತ್ತವನ್ನು ಓದುವವರು ಪ್ರತಿಜ್ಞಾಯೌಗಂಧರಾಯಣವನ್ನು ಓದಿದ್ದಾರೆಂದೇ ಕವಿಯು ಭಾವಿಸಿರುವನೆಂದು ಹೇಳಬೇಕು

ರಾಮ ರೂಪಕಗಳಿಗೆ ಹತ್ತಿರದ ಸಾದೃಶ್ಯವಿದೆ—ಎರಡರಲ್ಲಿಯೂ ರಾಮನನ್ನು 'ಆರ್ಯ!' ಎಂದು ಸಂಬೋಧಿಸಿದೆ (ಇಕ್ಷ್ವಾಕುವಂಶದಲ್ಲಿ 'ಆರ್ಯ'ನೆಂದು ಕರೆಯುವುದು ರೂಢಿಯೆಂಬುದಾಗಿ ಭರತನು ಪ್ರತಿಮಾನಾಟಕದಲ್ಲಿ ಹೇಳುತ್ತಾನೆ ಸೀತೆಯು ಅವನನ್ನು 'ಆರ್ಯಪುತ್ರ!' ಎಂದು ಕರೆಯುತ್ತಾಳೆ) ದೂತವಾಕ್ಯ ಬಾಲಚರಿತಗಳಲ್ಲಿ ಕೃಷ್ಣನ ಆಯುಧಗಳು ಒಂದೇ ವಿಧದಲ್ಲಿ ರಂಗಕ್ಕೆ ಇಳಿದುಬರುತ್ತವೆ ಭೀಮನು ಪಾಂಡವರಲ್ಲಿ 'ಮಧ್ಯಮ'ನಾದ್ದರಿಂದ 'ಮಧ್ಯಮ ವ್ಯಾಯೋಗ'ಕ್ಕೆ ಈ ಹೆಸರು ಬಂದಿದೆ ಪಂಚರಾತ್ರದಲ್ಲಿಯೂ ಭೀಮನು 'ಮಧ್ಯಮ'ನೆಂದು ಉಕ್ತನಾಗಿದ್ದಾನೆ ಇವೆರಡಲ್ಲಿಯೂ ಭೀಮನು ತನ್ನ ತೋಳುಗಳೇ ತನ್ನ ಆಯುಧವೆಂದು ಹೇಳಿಕೊಳ್ಳುತ್ತಾನೆ

(11) ಕೆಲವು ಶಬ್ದಗಳು ಈ ರೂಪಕಗಳೊಳಗೆ ಒಂದೇ ಅರ್ಥದಲ್ಲಿ

ಉಪಯೋಗಿಸಲ್ಪಟ್ಟಿವೆ ಹೀಗೆ, 'ಯವನಿಕೆ'ಯೆಂಬುದು ಪ್ರತಿಮಾ ನಾಟಕದೊಳಗೆ ದಶರಥನು ಸಾಯುವಾಗಲೂ, ಊರುಭಂಗ ಸ್ವಪ್ನ ವಾಸವದತ್ತಗಳ ಕೊನೆಯ ಭಾಗಗಳಲ್ಲಿಯೂ ಅವಿಮಾರಕದಲ್ಲಿ ಮೇಘ ಗಳನ್ನು ವರ್ಣಿಸುವಾಗಲೂ (ಸಾಮಾನ್ಯವಾದ 'ತೆರೆ' ಎಂಬ ಅರ್ಥ ದಲ್ಲ) ಉಪಯೋಗಿಸಲ್ಪಟ್ಟಿದೆ ಕೆಲವು ಹೆಸರುಗಳ ಪ್ರಯೋಗವೂ ಹೀಗೆಯೇ—'ವಿಜಯೆ' ಎಂಬುವಳು ಸ್ವಪ್ನವಾಸವದತ್ತ ಪ್ರತಿಜ್ಞಾ ಯೌಗಂಧರಾಯಣ ಮತ್ತು ರಾಮಾಯಣ ನಾಟಕಗಳಲ್ಲಿ ಪ್ರತೀಹಾರಿ ಯಾಗಿಯೋ ಗೌಡಿಯಾಗಿಯೋ ಬರುವಳು, ಮಹಾಸೇನ ದುರ್ಯೋ ಧನ ಇವರಿಬ್ಬರ 'ಕಾಂಚುಕೀಯ'ರ ಹೆಸರೂ, 'ಬಾದರಾಯಣ', ಇವುಗಳಲ್ಲಿ ಅನೇಕ ಕಡೆ ವರ್ಣನಾ ಸಾದೃಶ್ಯವೂ ಕಂಡುಬರುತ್ತದೆ (ಈ ವಿಧವಾದ ಸಾದೃಶ್ಯವು ಕಂಡುಬರುವುದು ಸಾಮಾನ್ಯವಾಗಿ ಏಕ ಕರ್ತೃಕಗಳಾದ ಗ್ರಂಥಗಳಲ್ಲಿಯೇ.) ಉದಾ— ಬಾಲಚರಿತ (I) ಅವಿ ಮಾರಕ (III) ಮತ್ತು ಚಾರುದತ್ತ (I) ಗಳಲ್ಲಿ ಬರುವ ಕತ್ತಲೆಯ ವರ್ಣನೆ

(III) ಇವುಗಳ ಭಾಷೆಯಲ್ಲಿಯೂ ಪ್ರಾಕೃತ ಪ್ರಯೋಗಗಳ ಲ್ಲಿಯೂ ಸಾದೃಶ್ಯವಿದೆ ಈ ಪ್ರಾಕೃತ ರೂಪಗಳು ಪ್ರಸಿದ್ಧ ಸಂಸ್ಕೃತ ನಾಟಕಗಳಲ್ಲಿ ಬರುವ ಪ್ರಾಕೃತ ಶಬ್ದರೂಪಗಳಿಗಿಂತಲೂ ಎಷ್ಟೋ ಪ್ರಾಚೀನ, ಇವು ಅಶ್ವಘೋಷನ (ಅಸಮಗ್ರ) ಬೌದ್ಧ ನಾಟಕಗಳ ಮತ್ತು ಆ ಕಾಲದ ಇತರ ಗ್ರಂಥಗಳ ಭಾಷೆಯನ್ನು ಹೋಲುತ್ತವೆ * ಸಂಸ್ಕೃತವನ್ನು ತೆಗೆದುಕೊಂಡರೆ, ಈ ನಾಟಕಗಳಲ್ಲೆಲ್ಲಾ ಪಾಣಿನಿ ವ್ಯಾಕರಣ ವಿರುದ್ಧವಾದ—ಆದರೆ ಇತಿಹಾಸಗಳಲ್ಲಿ ದೊರಕುವ— ಅನೇಕ ಪ್ರಯೋಗಗಳಿವೆ ಇಂಥ ಪ್ರಯೋಗಗಳಲ್ಲಿ ಕೆಲವು ಈಚಿನ ಕಾವ್ಯಗಳಲ್ಲಿಯೂ ಬರುತ್ತವೆ. ಆದರೆ ಕಾಳಿದಾಸನ ಭಾಷೆಯನ್ನೂ ಈ ನಾಟಕಗಳ ಭಾಷೆಯನ್ನೂ ಹೋಲಿಸಿ ನೋಡಿದರೆ ಭಾಸನ ಭಾಷೆಯು ಎಷ್ಟು ವ್ಯಾಕರಣ ವಿರುದ್ಧವಾಗಿರುವುದೆಂಬುದು ಸ್ಪಷ್ಟವಾಗುತ್ತದೆ ಈ

* ಲೆಸ್ನಿ, ಸುಕ್ತನ್‌ಕರ್, ಸ್ಟೆಂಟ್ಸ್ ಮುಂತಾದ ವಿದ್ವಾಂಸರು ಈ ಭಾಗವನ್ನು ವಿಸ್ತಾರವಾಗಿ ವಿಚಾರಮಾಡಿದ್ದಾರೆ.

ವಿಧವಾದ ಪ್ರಯೋಗವು ಇತಿಹಾಸಗಳಲ್ಲಿ ಹೇಗೋ ಹಾಗೆ ಇಲ್ಲಿಯೂ ಪ್ರಾಚೀನ ಕಾಲದ ಲಕ್ಷಣವೆಂದು ಹೇಳಬಹುದು

(IV) ನಾಟಕ ಲಕ್ಷಣವನ್ನು ತೆಗೆದುಕೊಂಡರೂ ಹೀಗೆಯೇ ಇವು ಪ್ರಸಿದ್ಧ ನಾಟಕಗಳಲ್ಲಿರುವಂತೆ ನಾಟ್ಯಶಾಸ್ತ್ರ ನಿಯಮಗಳನ್ನು ಅಕ್ಷರಶಃ ಅನುಸರಿಸಿರುವುದಿಲ್ಲ —ರಂಗದಲ್ಲಿ ಅಪ್ರದರ್ಶ್ಯಗಳೆಂದು ಹೇಳುವ (ದುರ್ಯೋಧನ, ದಶರಥ, ವಾಲಿ ಇವರ) ಮರಣ, (ಬಾಲ ಚರಿತದಲ್ಲಿ) ಯುದ್ಧ, ಕೊಲೆ, ಇವು ಈ ನಾಟಕಗಳಲ್ಲಿ ಬಂದಿವೆ *

ಈ ನಾಟಕಗಳಲ್ಲೆಲ್ಲಾ ಕಥೆಯು ಬಲು ಬೇಗ ಮುಂದುವರಿದು ಕೊಂಡು ಹೋಗುತ್ತದೆ ಅನೇಕ ಕಡೆ ಪಾತ್ರಗಳು ಹೀಗೆ ಹೋಗಿ ಹಾಗೆ ಬಂದುಬಿಡುತ್ತವೆ † "ಆಕಾಶ ಭಾಷಿತ"ಗಳು ಆಗಾಗ್ಗೆ ಬರುತ್ತಲೇ ಇರುತ್ತವೆ ಯುದ್ಧಾದಿಗಳ ವರ್ಣನೆಗಳಲ್ಲಿಯೂ ಹೀಗೆಯೇ ಒಂದು ವಿಧವಾದ ಸಾಮ್ಯವಿದೆ ಎಂದು ಹೇಳಬಹುದು ರಾಮ ರಾವಣರ ಯುದ್ಧವನ್ನು (ಅಭಿಷೇಕ ನಾಟಕದಲ್ಲಿ VI) ಮೂವರು ವಿದ್ಯಾಧರರೂ, ಯಾಗವನ್ನು (ಪಂಚರಾತ್ರ I) ಮೂವರು ಬ್ರಾಹ್ಮಣರೂ, ಗದಾಯುದ್ಧವನ್ನು(ಊರುಭಂಗ) ಮೂವರು ವಂದಿಗಳೂ ವರ್ಣಿಸುವರು

ಒಟ್ಟಿನಮೇಲೆ ಈ ಹದಿಮೂರು ನಾಟಕಗಳೂ, ರಂಗಭೂಮಿಯ ತತ್ವವನ್ನೂ ದೃಶ್ಯ ಕಾವ್ಯಗಳ ಅಭಿನೇಯತೆಯನ್ನೂ ಬಲ್ಲ, ರೂಪಕ ಗ್ರಥನ ಕುಶಲನಾದ, ಯಾವನೋ ಒಬ್ಬ ಕವಿಯಿಂದ ರಚಿತವಾದವುಗಳೆಂದು ಧಾರಾಳವಾಗಿ ಹೇಳಬಹುದು ಕಾಳಿದಾಸ ಭವಭೂತಿಗಳ ನಾಟಕಗಳು ದೃಶ್ಯಕಾವ್ಯಗಳೆಂದು ಹೇಳಿಕೊಂಡರೂ ಅವುಗಳಲ್ಲಿ ಇಂಥ ದೃಶ್ಯಕಾವ್ಯತ್ವವಿಲ್ಲ. ಅವು ಆಹ್ಲಾದಕರವಾಗಿರಬಹುದು, ಅವು

---

* ಇದರಿಂದ ಏನು ಊಹಿಸಬಹುದು ? ಭಾಸನು ಬೇಕೆಂದು ಭರತನಿಗೆ ವಿರುದ್ಧವಾಗಿ ಹೋದನೆ ? ಅಥವಾ ಭಾಸನ ಕಾಲಕ್ಕೆ ಭರತನ ಗ್ರಂಥವು ಇರಲೇ ಇಲ್ಲವೋ ? ಅಥವಾ ಭರತನಿಗೆ ಭಾಸನ ನಾಟಕಗಳು ಅಪರಿಚಿತವಾಗಿದ್ದುವೋ? ಮಿಕ್ಕ ಲಾಕ್ಷಣೀಕರಾದರೂ ಈ ವಿಷಯವನ್ನು ಏಕೆ ಗಮನಿಸಲಿಲ್ಲ ?

† 'ನಿಷ್ಕ್ರಮ್ಯ-ಪ್ರವಿಶ್ಯ'(ಹೋಗಿ-ಪುನಃ ಬಂದು) ಎಂದು ಪಾತ್ರಗಳಿಗೆ ಕೊಟ್ಟಿರುವ ಅಭಿನಯ ಸೂಚನೆಯು ಅಲ್ಲಲ್ಲೇ ಕಂಡುಬರುತ್ತದೆ.

ಗಳ ಭಾಷೆ ಶೈಲಿ ಅಲಂಕಾರ ಮುಂತಾದವುಗಳು ಚೆನ್ನಾಗಿರಬಹುದು ಆದರೆ ಅವುಗಳಲ್ಲಿ ಆದ್ಯಂತವಾಗಿ ರಂಗಕ್ಕೆ ಹೊಂದಿಕೊಂಡು ಅಭಿನಯದ ಮೂಲಕ ಆನಂದವಡಿಸುವ ಈ ರೂಪಕಗಳ ವಿಶೇಷ ಗುಣವಿರುವುದಿಲ್ಲ, ಅವು ಪಠ್ಯ ರೂಪಕಗಳು, ಇವು ದೃಶ್ಯ ರೂಪಕಗಳು

(೨) "ಸ್ವಪ್ನವಾಸವದತ್ತ" ವೆಂಬ ನಾಟಕವನ್ನು ಭಾಸನು ಬರೆದನೆಂಬುದಕ್ಕೆ ಒಳ್ಳೆಯ ಪ್ರಮಾಣವಿದೆ (ಇದೇ ಹೆಸರಿನ ಇತರ ನಾಟಕಗಳಿರುವುದು ಅಸಂಭವ *) ಭಾಸನು ಈ ನಾಟಕವನ್ನು ಬರೆದನೆಂದು ಒಪ್ಪಿಕೊಳ್ಳುವ ಪಕ್ಷಕ್ಕೆ ಅವನೇ ಮಿಕ್ಕ ಹನ್ನೆರಡು ನಾಟಕಗಳನ್ನೂ ಬರೆದನೆಂದು ಒಪ್ಪಿಕೊಳ್ಳಬೇಕು ಈ ನಾಟಕಗಳು ಕ್ರಿ ಶ. ಮೂರನೆಯ ಶತಮಾನದ ಕೊನೆಯಲ್ಲಿ ಅಥವಾ ನಾಲ್ಕನೆಯ ಶತಮಾನದ ಆದಿಯಲ್ಲಿ ಬರೆದವುಗಳೆಂದು ನಿಶ್ಚಯಿಸಬಹುದು ಆ ಕಾಲದಲ್ಲಿದ್ದ ಮತ್ತಾವ ನಾಟಕಕರ್ತನೂ ನಮಗೆ ತಿಳಿದುಬಂದಿಲ್ಲ ಆದ್ದರಿಂದ ಈ ಸಂಗತಿಯೂ ಭಾಸ ಕರ್ತೃತ್ವಕ್ಕೆ ಉಪಷ್ಟಂಭಕವಾಗುತ್ತದೆ

(೩) ಭಾಸನ ಕಾಲವಿಚಾರದಲ್ಲಿ ಅನುಕೂಲ ಪಕ್ಷದವರೂ ಮ|| ಗಣಪತಿಶಾಸ್ತ್ರಿಗಳು ಹೇಳುವುದನ್ನು ಸಾಮಾನ್ಯವಾಗಿ ಒಪ್ಪುವುದಿಲ್ಲ ಪಾಶ್ಚಾತ್ಯ ವಿದ್ವಾಂಸರು ನಿರ್ದೇಶಿಸುವ ಕಾಲವು ಕ್ರಿ ಶ ೨ ನೆಯ ಶತಮಾನದಿಂದ ೭ ನೆಯ ಶತಮಾನದವರೆಗೂ, ಭಾರತೀಯ ವಿದ್ವಾಂಸರು ನಿರ್ದೇಶಿಸುವುದು ಕ್ರಿ ಪೂ ೫ ನೆಯ ಶತಮಾನದಿಂದ ಕ್ರಿ ಶ. ಹತ್ತನೆಯ ಶತಮಾನದವರಗೂ ಹೋಗುತ್ತದೆ † ಇಂಗ್ಲೆಂಡಿನ ಸುಪ್ರ

---

* ಬಾರ್ನೆಟ್‌ರವರೇನೋ ಇದೇ ವಸ್ತುವಿನ ಮೇಲೆ ಐದಾರು ಇತರ ಕವಿಗಳು ನಾಟಕಗಳನ್ನು ಬರೆದಿದ್ದಾರೆಂದು ಹೇಳುತ್ತಾರೆ. ಆದರೆ ಪೂರ್ತಿಯಾಗಿ ಇದೇ ವಸ್ತುವನ್ನೂ ಹೆಸರನ್ನೂ ಇಟ್ಟುಕೊಂಡು ಬರೆದಿರುವ ಎರಡು ಮೂರು ಗ್ರಂಥಗಳು ಕೂಡ ಇಲ್ಲ. ಸಾಮಾನ್ಯವಾಗಿ ನಮ್ಮ ದೇಶದಲ್ಲಿ ಕವಿಗಳು ಇತರರು ಪ್ರತಿಪಾದಿಸಿದ ವಸ್ತುವನ್ನು ತೆಗೆದುಕೊಂಡಾಗಲೂ ಮೊದಲು ಇದ್ದ ಹೆಸರನ್ನು ಇಡುವುದಿಲ್ಲ

† ಈ ರೂಪಕಗಳ ಕಾಲವಿಚಾರವಾಗಿ ಇರುವ ಭಿನ್ನಾಭಿಪ್ರಾಯಗಳು ಗೊತ್ತಾಗುವಂತೆ ಇಲ್ಲಿ ಕೆಲವರ ಮತಗಳನ್ನು ಸೂಚಿಸಿದೆ :—

| | |
|---|---|
| ಜಯಸ್ವಾಲ್ ಮತ್ತು ಚೌಧುರಿ | .. ಕ್ರಿ ಪೂ. ೧ ನೆಯ ಶತಮಾನ |
| ಕೋನೋ, ಸ್ವಾಲಿ | .. ಕ್ರಿ ಶ. ೨ " |
| ಬಾನರ್ಜಿಶಾಸ್ತ್ರಿ, ಜಾಲಿ, ಯಾಕೋಬಿ | . " ೩—೪ " |

ಸಿದ್ಧ ಸಂಸ್ಕೃತ ವಿದ್ವಾಂಸರಾದ ಮೆಗ್ಡಾನಲ್ ಕೀತ್ ಇವರಿಬ್ಬರಲ್ಲಿ, ಮೆಗ್ಡಾನಲ್‌ರವರು ಸಂದಿಗ್ಧ ಮನಸ್ಕರಾಗಿರುವುದರಿಂದ ಇವುಗಳ ಕಾಲವನ್ನು ಹೇಳಿಲ್ಲ ಕೀತ್‌ರವರು ಸು ಕ್ರಿ ಶ. ೩೦೦ ಇರಬಹುದೆಂದು ಅಭಿಪ್ರಾಯಪಡುತ್ತಾರೆ (Sanskrit Drama, p 95) ಬೇರೆಸಾಧನಗಳಿಂದ ಕಾಳಿದಾಸನು ಸುಮಾರು ಕ್ರಿ ಶ ೪೦೦ ಕ್ಕಿಂತ ಹಿಂದೆ ಇದ್ದಿರಲಾರನೆಂದು ನಿಶ್ಚಯಿಸಿರುವುದು ಇದಕ್ಕೆ ಕಾರಣ ಭಾಸನು ಕಾಳಿದಾಸನಿಗಿಂತ ಒಂದುನೂರು ವರ್ಷ ಹಿಂದೆ ಇದ್ದಿರಬಹುದು ಎಂಬುದು ಆಮೇಲಿನ ಊಹೆ ಇದರ ಜೊತೆಗೆ ಕೊಟ್ಟಿರುವ ಆಂತರ ಪ್ರಮಾಣಗಳಾವುವೆಂದರೆ —

(1) ಪಾಣಿನಿ ವ್ಯಾಕರಣಕ್ಕೆ ವಿರುದ್ಧವಾದ ಮತ್ತು ರಾಮಾಯಣ ಭಾರತಾದಿ ಪುರಾಣಗಳಲ್ಲಿ ಕಂಡುಬರುವ ಪ್ರಾಚೀನ ಪ್ರಯೋಗಗಳು

(11) ರಾಜಾಸ್ಥಾನದ ವರ್ಣನೆಯಲ್ಲಿ ಕಾಳಿದಾಸನ ನಾಟಕಗಳಲ್ಲಿರುವಷ್ಟು ಆಡಂಬರವೂ ವೈಖರಿಯೂ ಇಲ್ಲದಿರುವಿಕೆ ಉದಾ — ದುಷ್ಯಂತ ಬಂದಾಗ ಧನುರ್ಬಾಣಗಳನ್ನು ಹಿಡಿದಿರುವ ಯವನಸ್ತ್ರೀಯರೂ ಇತರ ಪರಿವಾರಗಳೂ ಅವನ ಜೊತೆಯಲ್ಲಿರುತ್ತಾರೆ ಉದಯನನು ಬಂದಾಗ ಅವನ ಜೊತೆಯಲ್ಲಿ ಹೆಚ್ಚು ಪರಿವಾರವಿರುವುದಿಲ್ಲ ಅವನ ಸ್ನೇಹಿತನು ಮಾತ್ರ ಇರುತ್ತಾನೆ ಇದು ಸ್ವಲ್ಪ ಪ್ರಾಚೀನವಾದ ಪರಿಸ್ಥಿತಿಯನ್ನು ಸೂಚಿಸುವಂತೆ ತೋರುತ್ತದೆ

(111) ಈ ನಾಟಕಗಳ ಶೈಲಿಯು ಸುಲಭವೆಂಬುದೇನೋ ನಿಜ, ಆದರೆ ಇವುಗಳ ಕರ್ತೃವಿಗೆ ಸಂಪ್ರದಾಯ ಕಾವ್ಯ ಶೈಲಿಯು ಸುಪರಿಚಿತವಾಗಿತ್ತೆಂಬುದು—ಅದರಲ್ಲಿಯೂ ಊರುಭಂಗ ಅವಿಮಾರಕಗಳಲ್ಲಿ—ಸ್ಪಷ್ಟವಾಗಿದೆ ಅರ್ವಾಚೀನ ಕಾವ್ಯಗಳಲ್ಲಿ ಬರುವಂಥ ಯಮಕ

---

| | | | |
|---|---|---|---|
| ಲೆಸ್ನಿ, ವಿಂಟರ್‌ನಿಟ್ಸ್, | ” | ೪ | ” |
| ಬಾರ್ನೆಟ್ | ” | ೭ | ” |
| ಕಾಣೆ | ” | ೯ | ” |
| ರಾಮಾವತಾರಶರ್ಮ | ” | ೧೦ | ” |
| ರಂಗಾಚಾರ್ಯ ರೆಡ್ಡಿ | ” | ೧೧ | ” |

ಮುಂತಾದ ಶಬ್ದಾಲಂಕಾರಗಳೂ ಪಾಂಡಿತ್ಯ ಸೂಚಕವಾದ ಉಪಮಾನಗಳೂ (ಪಂಚರಾತ್ರ I, ೧೦, ಅವಿಮಾರಕ V, ೧) ಕಂಡು ಬರುತ್ತವೆ ಇವುಗಳ ಮತ್ತು ಇವುಗಳಲ್ಲಿ ಬರುವ ಪ್ರಾಕೃತ ಸ್ವರೂಪದ ಪರಾಮರ್ಶದಿಂದ ಈ ಗ್ರಂಥಗಳ ಕರ್ತೃವು ಕಾಳಿದಾಸನಿಗಿಂತ ಹಿಂದೆ ಇದ್ದನೆಂದೂ, ಆದರೂ ಬಹಳ ಹಿಂದೆ ಇದ್ದಿರಲಾರನೆಂದೂ, ಅಶ್ವಘೋಷನಿಗಿಂತ (ಎರಡನೆಯ ಶತ.) ಈಚೆ ಇದ್ದಿರಬಹುದೆಂದೂ ಹೇಳಬಹುದಾಗಿದೆ

(IV) ಈತನಿಗೆ ಮಹಾಭಾರತವು ಪ್ರಕೃತ ರೂಪದಲ್ಲಿ ಗೊತ್ತಿದ್ದಂತೆ ತೋರುತ್ತದೆ * ಏಕೆಂದರೆ, ಮಹಾಭಾರತ ಕಥೆಗಳನ್ನು ಪ್ರತಿಪಾದಿಸಿರುವ ಆರು ನಾಟಕಗಳ ವಸ್ತುಗಳೂ ಈಗಿನ ಮಹಾಭಾರತದ ಆನುಪೂರ್ವಿಯನ್ನೇ ಅನುಸರಿಸಿರುತ್ತವೆ (ಮಹಾಭಾರತದ ಪ್ರಕೃತ ರೂಪವು ಕ್ರಿಸ್ತ ಪೂರ್ವದ್ದಲ್ಲ)

(V) (ಅಭಿಷೇಕನಾಟಕದಲ್ಲಿ ಉಕ್ತವಾಗಿರುವಂತೆ) ರಾಮನು ವಿಷ್ಣುವಿನ ಅವತಾರವೆಂಬ ಅಂಶವು ಕ್ರಿಸ್ತಶಕಕ್ಕಿಂತ ಹಿಂದಿನ ಶಾಸನಗಳಲ್ಲಿ ಪಠಿಚಿತವಾಗಿಲ್ಲ

## ಪ್ರತಿಪಕ್ಷದವರು

ಪ್ರತಿಪಕ್ಷದವರಲ್ಲಿ, ಬಾರ್ನೆಟ್ ಮತ್ತು ಪಿಶರೋಟಿಗಳು ಈ ಹದಿಮೂರು ನಾಟಕಗಳನ್ನು ಯಾರೋ ಕೇರಳ ಕವಿಗಳು ಏಳನೆಯ ಶತಮಾನದ ಮೇಲೆ ಹತ್ತನೆಯ ಶತಮಾನದ ಒಳಗೆ "ಆಶ್ಚರ್ಯ ಚೂಡಾಮಣಿ"ಯನ್ನು ಅನುಸರಿಸಿ ರಚಿಸಿರಬೇಕೆಂದು ಅಭಿಪ್ರಾಯಪಡುತ್ತಾರೆ. ಅವರು ಹೇಳುವುದೇನೆಂದರೆ:—

---

* ಪಂಡಿತ ಜಯಸ್ವಾಲ್ ಮತ್ತು ಚೌಧುರಿಯವರು ಭಾಸನಿಗೆ ಮತ್ತೊಂದು ಭಾರತವು ಗೊತ್ತಿತ್ತೆಂದೂ, ಆವನು ನಾರಾಯಣನೆಂಬ ಕಾಣ್ವ ರಾಜನ (ಕ್ರಿ ಪೂ ೫೩-೭೧) ಆಸ್ಥಾನದಲ್ಲಿದ್ದನೆಂದೂ ಹೇಳುತ್ತಾರೆ. ಇದು ಚರಿತ್ರೆಗೆ ವಿರುದ್ಧವಾಗಿದ್ದೆ ಮಹಾಭಾರತ ಕಥೆಗೂ ಈ ನಾಟಕಗಳ ಕಥೆಗೂ ವ್ಯತ್ಯಾಸವಿರುವ ಕಡೆ, ಅದಕ್ಕೆ, ರಸದೃಷ್ಟಿಯಿಂದ ಕವಿಯು ಬೇಕೆಂದು ಮಾಡಿದ ಬದಲಾವಣೆಗಳು ಕಾರಣವೇ ಹೊರತು ಮತ್ತೊಂದು ಮಹಾಭಾರತದ ಅನುಸರಣವು ತೋರುವುದಿಲ್ಲ.

ಈ ನಾಟಕಗಳಲ್ಲಿ ಮಾತ್ರ ಕಂಡುಬರುತ್ತವೆಂದು ಹೇಳಿರುವ (ಪು ೭-೮) ವಿಶೇಷ ಲಕ್ಷಣಗಳು ಶಕ್ತಿಭದ್ರನ 'ಆಶ್ಚರ್ಯ ಚೂಡಾ ಮಣಿ', ನೀಲಕಂಠನ 'ಕಲ್ಯಾಣ ಸೌಗಂಧಿಕ', ಕುಲಶೇಖರವರ್ಮನ 'ತಪತೀ ಸ್ವಯಂವರ' ಮತ್ತು 'ಸುಭದ್ರಾ ಧನಂಜಯ' ಮುಂತಾದ ಕೇರಳ ನಾಟಕಗಳಲ್ಲಿಯೂ ಕಂಡುಬರುತ್ತವೆ ಅಷ್ಟೇಕೆ, ಕೇರಳ ದೇಶದ ಒಂದು ಪ್ರತಿಯಲ್ಲಿ ಶಾಕುಂತಲ ನಾಟಕವೂ 'ನಾಂದ್ಯಂತದಲ್ಲಿ ಬಳಿಕ ಸೂತ್ರಧಾರನು ಪ್ರವೇಶಿಸಿ' ಎಂದು ಆರಂಭವಾಗುತ್ತದೆ. ಆದ್ದರಿಂದ ಇವುಗಳಿಂದಲೇ ಭಾಸ ಕರ್ತೃತ್ವವನ್ನಾಗಲಿ ಪ್ರಾಚೀನತೆಯನ್ನಾಗಲಿ ನಿಶ್ಚಯಿಸುವುದಕ್ಕಾಗುವುದಿಲ್ಲ ಭರತನ 'ನಾಟ್ಯಶಾಸ್ತ್ರ'ದಲ್ಲಿ 'ಸ್ಥಾಪನೆ', 'ಪ್ರಸ್ತಾಪನೆ' ಎಂಬ ಎರಡು ಪಾಠಗಳೂ ಇವೆ. ಇವುಗಳಲ್ಲಿ 'ಸ್ಥಾಪನೆ' ಎಂಬ ಪಾಠವೇ ಕೇರಳದಲ್ಲಿ ಪ್ರಚಾರಕ್ಕೆ ಬಂದಿರಬಹುದು ಆದ್ದರಿಂದ ಇದು ಒಂದು 'ವಿಶೇಷ ಲಕ್ಷಣ'ವೇ ಅಲ್ಲ ಹೀಗೆಯೇ ಅಜ್ಞಾತ ಕರ್ತೃತ್ವವೂ ಒಂದು ವಿಶೇಷ ಲಕ್ಷಣವೆಂದೂ ಭಾಸಕರ್ತೃತ್ವ ನಿಶ್ಚಾಯಕವೆಂದೂ ಹೇಳುವುದಕ್ಕಾಗುವುದಿಲ್ಲ ಏಕೆಂದರೆ, ಭಾಸನು ಬರೆದ ನಾಟಕಗಳ ಪ್ರಸ್ತಾವನೆಗಳಲ್ಲಿ ಕರ್ತೃವಿನ ಹೆಸರು ಇರಲಿಲ್ಲ, ಕೇರಳದೇಶದ ನಾಟಕದವುಗಳಲ್ಲಿ ಮಾತ್ರ ಇತ್ತು ಎಂದು ಹೇಳುವುದು ಹೇಗೆ? ಅದಕ್ಕೆ ಪ್ರಮಾಣವೇನು? ಭರತನೇ ಆದಿ ನಾಟಕಕರ್ತನೆಂಬುದು ಕಾಳಿದಾಸನ ಕಾಲದಿಂದಲೂ ಸಂಪ್ರದಾಯಸಿದ್ಧವಾಗಿ ಬಂದಿದೆ ಈ ಸಂಪ್ರದಾಯಕ್ಕೆ ವಿರುದ್ಧವಾಗಿ ಭಾಸನು ಭರತನಿಗಿಂತ ಹಿಂದೆ ಇದ್ದನೆಂದು ಹೇಗೆ ಹೇಳುವುದು? ಒಂದುಪಕ್ಷ ಹಿಂದೆಯೇ ಇದ್ದಿದ್ದರೆ, ತನ್ನ ಹಿಂದೆ ಇದ್ದ ಸುಪ್ರಸಿದ್ಧನಾದ ದೊಡ್ಡ ಕವಿಯ ಗ್ರಂಥವನ್ನು ನೋಡದೆ ಭರತನು ತನ್ನ ಲಕ್ಷಣ ಗ್ರಂಥವನ್ನು ಬರೆದಿರಲಾರನು

ಈಗ ಸಿಕ್ಕಿರುವುದು 'ಸ್ವಪ್ನನಾಟಕ'—'ಸ್ವಪ್ನವಾಸವದತ್ತ'ವಲ್ಲ*

---

* ಆದರೆ ಕೆಲವು ಪ್ರತಿಗಳಲ್ಲಿ ಈ ಹೆಸರೂ ಸಿಕ್ಕಿದೆ. ಪು. ೧೧; ಅಲ್ಲದೆ "ಚಿರಪ್ರಸುಪ್ತಃ ಪ್ರಿಯಾ" ಎಂಬ ಶ್ಲೋಕವು 'ಸ್ವಪ್ನವಾಸವದತ್ತ'ದ್ದೆಂದು ಭಾವಪ್ರಕಾಶಿಕಾಕಾರನು ಅನುವಾದ ಮಾಡಿದ್ದಾನೆ. ಈ ಶ್ಲೋಕವು 'ಸ್ವಪ್ನನಾಟಕ'ದಲ್ಲಿಯೇ (ಅಂಕ ೬) ದೊರೆತಿದೆ

ಇವೆರಡೂ ಒಂದೇ ಎಂದೂ, ‘ ಸ್ವಪ್ನನಾಟಕ ’ವೆಂಬ ಹೆಸರು ‘ ಸ್ವಪ್ನ ವಾಸವದತ್ತ’ ಎಂಬುದರ ಸಂಗ್ರಹವೆಂದೂ ಹೇಳುವುದರಲ್ಲಿ ಪ್ರಮಾಣ ವಿಲ್ಲ ಏಕೆಂದರೆ ಸ್ವಪ್ನವಾಸವದತ್ತದ್ದೆಂದು ಅಭಿನವಗುಪ್ತನು ಹೇಳಿ ರುವ ಶ್ಲೋಕವು (ಪುಟ ೫, ಟಿಪ್ಪಣಿ) ಈ ‘ಸ್ವಪ್ನನಾಟಕ’ದಲ್ಲಿ ಸಿಕ್ಕು ವುದಿಲ್ಲ (‘ಸ್ವಪ್ನನಾಟಕದ ’ದ ಕರ್ತೃವು ತನ್ನ ಹಿಂದೆ ಇದ್ದ ‘ಸ್ವಪ್ನ ವಾಸವದತ್ತ’ಕ್ಕೂ ತನ್ನ ಗ್ರಂಥಕ್ಕೂ ವ್ಯತ್ಯಾಸ ತಿಳಿಸಬೇಕೆಂದೇ ‘ ಸ್ವಪ್ನನಾಟಕ ’ವೆಂಬ ಹೆಸರನ್ನು ಇಟ್ಟಿರಬಹುದು ) ಈ ಸಂದರ್ಭದಲ್ಲಿ ಅಭಿನವಗುಪ್ತನಂಥ ಲಕ್ಷಣ ಗ್ರಂಥಕಾರನು ಭ್ರಾಂತಿಪಟ್ಟನೆಂದು ಹೇಳು ವುದಕ್ಕೆ ಯಾವ ಧೈರ್ಯ ? ಮ॥ ಗಣಪತಿಶಾಸ್ತ್ರಿಗಳು ಮೇಲಿನ ಶ್ಲೋಕಕ್ಕೆ ಈ ಕಥೆಯಲ್ಲಿಯೇ ಸಾಂಗತ್ಯವಿಲ್ಲವೆಂದು ಹೇಳುತ್ತಾರೆ, ಆದರೆ ‘ ಸ್ವಪ್ನನಾಟಕ ’ದಲ್ಲಿಯೇ ಇದಕ್ಕೆ ಉಪಪತ್ತಿಯನ್ನು ಹೇಳ ಬಹುದು ವಾಸವದತ್ತೆಯು ಕಾಣಿಸಿಕೊಂಡು ತಟ್ಟನೆ ಹೊರಟು ಹೋದಮೇಲೆ (ಅಂಕ ೫) ವಿದೂಷಕನಿಗೆ ಇದನ್ನು ಅರಸನು ಹೇಳಿರ ಬಾರದೇನು ? ಅಂಥದರಲ್ಲಿ ಇದು ‘ಸ್ವಪ್ನವಾಸವದತ್ತ’ದಲ್ಲಿ ಏಕೆ ಸಂಗತ ವಾಗಿರಬಾರದು ? ವಸ್ತುಸ್ಥಿತಿ ಏನೆಂದರೆ, ಈ ಶ್ಲೋಕವು ‘ಸ್ವಪ್ನನಾಟಕ’ ದ್ದಲ್ಲವೇ ಅಲ್ಲ; ಆದ್ದರಿಂದ ಅದರಲ್ಲಿ ಕಂಡುಬರುವುದಿಲ್ಲ, ‘ ಸ್ವಪ್ನವಾಸವ ದತ್ತ’ವೇ ದೊರೆತರೆ ಅದರಲ್ಲಿ ಅಭಿನವಗುಪ್ತನು ಹೇಳಿರುವಂತೆ ಕಂಡು ಬಂದೇ ಬರುತ್ತದೆ ಅಮರ ಟೀಕಾ ಸರ್ವಸ್ವಕಾರನು ‘ ಸ್ವಪ್ನವಾಸವ ದತ್ತ ’ದಲ್ಲಿರುವ ‘ ವಾಸವದತ್ತಾ ಪರಿಣಯ ’ವು ಕಾಮಶೃಂಗಾರವಾಗುತ್ತ ದೆಯೆಂದು ಹೇಳಿದ್ದಾನೆ * ಆದರೆ ಈ ‘ ಸ್ವಪ್ನನಾಟಕ ’ದಲ್ಲಿ ‘ ವಾಸವ ದತ್ತಾಪರಿಣಯ’ ವೂ ಇಲ್ಲ, ‘ ಕಾಮಶೃಂಗಾರ ’ವೂ ಇಲ್ಲ

ಭರತವಾಕ್ಯವೂ ಮತ್ತೆ ಕೆಲವು ವಾಕ್ಯಗಳೂ ಎರಡು ಅಥವಾ

* “ ಆದ್ಯೋ ಯಥಾ .. ದ್ವಿತೀಯಃ . ಉದಯನಸ್ಯ ಪದ್ಮಾ ವತೀ ಪರಿಣಯೋ ಅರ್ಥಶೃಂಗಾರಃ ತೃತೀಯಃ —ಸ್ವಪ್ನವಾಸವದತ್ತೇ ತಸ್ಯೈವ ವಾಸವದತ್ತಾ ಪರಿಣಯಃ ಕಾಮಶೃಂಗಾರಃ ” ಈ ಭಾಗವನ್ನು ಗಣಪತಿ ಶಾಸ್ತ್ರಿಗಳು ತಮಗೆ ಅನುಕೂಲವಾಗಿ ಅರ್ಥವಾಗುವಂತೆ ತಿರಿಚಿಕೊಂಡಿದ್ದಾ ರೆಂದು ಪ್ರತಿಪಕ್ಷಿಗಳ ಆಪಾದನೆ.

ಅನೇಕ ನಾಟಕಗಳಲ್ಲಿ ಒಂದೇ ಆಗಿರುವುದರಿಂದ ಅವಕ್ಕೆ ಏಕ ಕರ್ತೃತ್ವ ವನ್ನು ಊಹಿಸಬಹುದೆಂದೂ, ಸ್ವಪ್ನನಾಟಕದ ಭರತವಾಕ್ಯಾದಿಗಳು ಇತರ ಕೆಲವು ನಾಟಕಗಳಲ್ಲಿ ಕಂಡುಬರುವುದರಿಂದ ಈ ಅಂತರ ಪ್ರಮಾಣದ ಮೇಲೆ ಇವೆಲ್ಲಕ್ಕೂ ಭಾಸಕರ್ತೃತ್ವವನ್ನು ಸಾಧಿಸಬಹುದೆಂದೂ ಗಣಪತಿ ಶಾಸ್ತ್ರಿಗಳು ಹೇಳುತ್ತಾರೆಯಷ್ಟೆ (ಪು ೮-೯) ಆದರೆ ಶಕ್ತಿಭದ್ರನ ಆಶ್ಚರ್ಯಚೂಡಾಮಣಿಯಲ್ಲಿ ಸ್ವಪ್ನನಾಟಕಾದಿಗಳ* "ಏವಮಾರ್ಯ ಮಿಶ್ರಾನ್ ವಿಜ್ಞಾಪಯಾಮಿ " ಮುಂತಾದ ವಾಕ್ಯಗಳೂ ಮಧ್ಯಮವ್ಯಾಯೋಗದ ಕೆಲವು ವಾಕ್ಯಗಳೂ ಕಂಡುಬರುತ್ತವೆ ಇದ ರಿಂದ ಆಶ್ಚರ್ಯಚೂಡಾಮಣಿಯೂ ಭಾಸಕೃತವೆಂದು ಹೇಳಬಹುದೇ? ಆಶ್ಚರ್ಯಚೂಡಾಮಣಿಗೂ ಈ ಅಜ್ಞಾತ ಕರ್ತೃಕಗಳಾದ ನಾಟಕಗಳಿಗೂ ಇಷ್ಟೊಂದು ಸಾದೃಶ್ಯವಿರುವಾಗ ಇವೆಲ್ಲವೂ ಶಕ್ತಿಭದ್ರನಿಂದ (ಎಂಟು ಅಥವಾ ಒಂಭತ್ತನೆಯ ಶತಮಾನದಲ್ಲಿ) ರಚಿತವಾದವುಗಳೆಂದು ಹೇಳಿದರೆ ಹೆಚ್ಚು ಸಂಗತವೂ ಸಪ್ರಮಾಣವೂ ಆಗುವುದು ಇವೆಲ್ಲವೂ ಕೇರಳದಲ್ಲಿ ಮಾತ್ರ ಸಿಕ್ಕಿ ಪ್ರಚಾರದಲ್ಲಿರುವ ಸಂಗತಿಯೂ ಇದಕ್ಕೆ ಸಾಧಕವಾಗು ತ್ತದೆ

ಇವೆಲ್ಲವುಗಳ ಶೈಲಿಯೂ ಸರಳವಾಗಿದೆಯೆಂದೂ ಒಂದೇ ಎಂದೂ ಹೇಳುವಹಾಗಿಲ್ಲ ಏಕೆಂದರೆ, ಪಂಚರಾತ್ರ, ಅವಿಮಾರಕ, ಊರು ಭಂಗ ಇವುಗಳ ಶೈಲಿಗೂ, ಸ್ವಪ್ನವಾಸವದತ್ತ, ಪ್ರತಿಮಾನಾಟಕ, ಅಭಿ ಷೇಕನಾಟಕ, ಪ್ರತಿಜ್ಞಾಯೌಗಂಧರಾಯಣ ಇವುಗಳ ಶೈಲಿಗೂ ಸಂಬಂಧವೇ ಇಲ್ಲ ಪಂಚರಾತ್ರಾದಿಗಳಲ್ಲಿ ದೊಡ್ಡ ದೊಡ್ಡ ಸಮಾಸ ಗಳುಳ್ಳ ಗದ್ಯವು ಬರುತ್ತದೆ ಹಲವು ಪದ್ಯಗಳುಳ್ಳ ದೊಡ್ಡ ದೊಡ್ಡ ವಿಷ್ಕಂಭಕಗಳು ಬರುತ್ತವೆ. ಇವೆಲ್ಲಾ ಪ್ರಾಚೀನ ನಾಟಕಗಳ ಲಕ್ಷಣ ಗಳಲ್ಲ ಸಂಸ್ಕೃತವು ವ್ಯವಹಾರದಲ್ಲಿ ನಿಂತುಹೋದಮೇಲೆ ಹಿಂದಿನವರ ಬರವಣಿಗೆಯನ್ನು ನೋಡಿಕೊಂಡು ಮುಂದಿನವರು ಬರೆದರು. ಆದ್ದರಿಂದ ಬರಿಯ ಭಾಷಾಶೈಲಿಸಾದೃಶ್ಯವು ಸರಿಯಾದ ಪ್ರಮಾಣವಾಗಲಾರದು.

* ಮಧ್ಯಮವ್ಯಾಯೋಗ, ದೂತವಾಕ್ಯ, ಕರ್ಣಭಾರ, ಬಾಲಚರಿತ, ಪಂಚರಾತ್ರ.

ಇವುಗಳಲ್ಲಿರುವ ಪ್ರಾಕೃತವು ಪ್ರಾಚೀನವೆಂದು ಕೆಲವರು ಹೇಳುತ್ತಾರೆ ಸಾಮಾನ್ಯವಾಗಿ ಯಾವ ಗ್ರಂಥವನ್ನು ತೆಗೆದುಕೊಂಡು ಅದರ ಉತ್ತರ ದಕ್ಷಿಣ ದೇಶ ಪ್ರತಿಗಳನ್ನು ಹೋಲಿಸಿ ನೋಡಿದರೂ ಅವುಗಳ ಪ್ರಾಕೃತದಲ್ಲಿ ಸ್ವಲ್ಪಮಟ್ಟಿಗೆ ವ್ಯತ್ಯಾಸವಿದ್ದೇ ಇರುತ್ತದೆ ಇದು ಸ್ವಾಭಾವಿಕ ಏಕೆಂದರೆ, ಉತ್ತರದೇಶದಲ್ಲಿ ಪ್ರಚಾರದಲ್ಲಿರುವ ಗೌಡ ಭಾಷೆಗಳೆಲ್ಲಾ ಪ್ರಾಕೃತಜನ್ಯ, ದಕ್ಷಿಣದೇಶದ ದ್ರಾವಿಡ ಭಾಷೆಗಳು ಪ್ರಾಕೃತಜನ್ಯವಲ್ಲ ಈ ನಾಟಕಗಳಲ್ಲಿಯೂ ಅಂಥ ಕೆಲವು ಸಣ್ಣ ವ್ಯತ್ಯಾಸಗಳು ಕಂಡುಬರುತ್ತವೆ ಈ ಭಾಷಾ ವೈಲಕ್ಷಣ್ಯಗಳು ಆಶ್ಚರ್ಯ ಚೂಡಾಮಣಿ ಮುಂತಾದ ಕೇರಳ ನಾಟಕಗಳಲ್ಲಿಯೂ ಕಂಡುಬರುತ್ತವೆ ಆದ್ದರಿಂದ ಈ ಅಲ್ಪ ಸ್ವಲ್ಪ ವ್ಯತ್ಯಾಸಗಳನ್ನು ನೋಡಿ ಇವು ಪ್ರಾಚೀನವೆಂದು ಹೇಳುವುದು ಸಾಧ್ಯವಲ್ಲ

ಪ್ರತಿಮಾನಾಟಕದಲ್ಲಿ ಬಂದಿರುವ ದಿಲೀಪಾದಿಯಾದ ರಘುವಂಶ ರಾಜರ ಕ್ರಮವು ಕಾಳಿದಾಸನ ರಘುವಂಶದಲ್ಲಿ ಉಕ್ತವಾದ ಕ್ರಮವೇ ಆಗಿದೆ ಈ ಕ್ರಮವು ರಾಮಾಯಣ ಭಾಗವತ ವಿಷ್ಣುಪುರಾಣಗಳಲ್ಲೆಲ್ಲಿಯೂ ಕಂಡುಬರುವುದಿಲ್ಲ ಅಲ್ಲದೆ ಪ್ರತಿಮಾನಾಟಕದಲ್ಲಿ ಬಂದಿರುವ ಈ ರಾಜರ ಗುಣಶೀಲಾದಿಗಳ ವರ್ಣನೆಯು ರಘುವಂಶದಲ್ಲಿರುವ ಈ ರಾಜರ ಗುಣಶೀಲಾದಿ ವರ್ಣನೆಯನ್ನೇ ಜ್ಞಾಪಕಕ್ಕೆ ತರುವಂತಿದೆ ಆದ್ದರಿಂದ ಪ್ರತಿಮಾನಾಟಕದ ಕರ್ತೃವು ರಘುವಂಶವನ್ನು ನೋಡಿರಬೇಕು ಕಾಳಿದಾಸನು ಶುಷ್ಕ ಪುರಾಣಗಳನ್ನು ತೆಗೆದುಕೊಂಡು ಅವುಗಳನ್ನು ರಸವತ್ತಾದ ಕಾವ್ಯಗಳನ್ನಾಗಿ ಮಾಡಿದನೆಂಬುದು ಸರ್ವ ವಿದಿತವಾಗಿದೆ ಇಂಥ ಸಮರ್ಥನಾದ ಕವಿಯು ಸಂಕೋಚವಿಲ್ಲದೆ ಇತರರಿಂದ ಪದವಾಕ್ಯಾಭಿಪ್ರಾಯಗಳನ್ನು ತೆಗೆದುಕೊಂಡನೆಂದು ಹೇಳುವುದು ಯುಕ್ತವಾಗಲಾರದು ಸ್ವಪ್ನನಾಟಕಾದಿಗಳ ಸಾದೃಶ್ಯಗಳೂ ಇದರಂತೆಯೇ ಎಂದು ಹೇಳಬೇಕಾಗಿದೆ

ಪ್ರತಿಮಾನಾಟಕದಲ್ಲಿರುವ ಪಟ್ಟಾಭಿಷೇಕ ಸನ್ನಿವೇಶದ ವರ್ಣನೆಯನ್ನು ನೋಡಿದರೆ ಅದರಲ್ಲಿ ರಾಮನೊಬ್ಬನೇ ಸಂಬಂಧಪಟ್ಟಿದ್ದ ಹಾಗೂ ಸೀತೆಯು ಅಂತಃಪುರದಲ್ಲಿ ಗೆಳತಿಯರೊಡನೆ ವಿನೋದವಾಗಿ

ಇದ್ದುಕೊಂಡಿದ್ದ ಹಾಗೂ ತೋರುತ್ತದೆ ರಾಮಾಯಣದ ಅಯೋಧ್ಯಾ ಯುದ್ಧಕಾಂಡಗಳಲ್ಲಿ ಬಂದಿರುವ ಪಟ್ಟಾಭಿಷೇಕದ ವರ್ಣನೆಯನ್ನು ನೋಡಿದರೆ ಅದರಲ್ಲಿ ರಾಮ ಸೀತೆಯರಿಬ್ಬರೂ ಒಟ್ಟಿಗೆ ಇರುತ್ತಾರೆ ಗಂಡ ಹೆಂಡಿರಿಬ್ಬರನ್ನೂ ಕೂರಿಸಿ ಪಟ್ಟಾಭಿಷೇಕಮಾಡುವುದು ಭರತ ಖಂಡದ ಉತ್ತರದೇಶದಲ್ಲಿಯೂ ದಕ್ಷಿಣದೇಶದ ಇತರ ಕಡೆಗಳಲ್ಲಿಯೂ ರೂಢಿಯಾಗಿದೆ ರಾಜನೊಬ್ಬನನ್ನೇ ಕೂರಿಸಿ ಪಟ್ಟಾಭಿಷೇಕ ಮಾಡು ವುದು ಕೇರಳ ಸಂಪ್ರದಾಯ ಇದನ್ನು ನೋಡಿದರೂ ಪ್ರತಿಮಾ ನಾಟಕದ ಕವಿಯು ಕೇರಳದೇಶದವನಾಗಿರಬೇಕೆಂದೂ, ಅದರಲ್ಲಿ ತನ್ನ ದೇಶದ ಸಂಪ್ರದಾಯವನ್ನು ವರ್ಣಿಸಿದ್ದಾನೆಂದೂ ತೋರುವುದು.

ಚಾರುದತ್ತ ಮೃಚ್ಛಕಟಿಕಗಳನ್ನು ಪರಾಮರ್ಶಿಸಿ ನೋಡಿದರೆ ಚಾರುದತ್ತವು ಮೃಚ್ಛಕಟಿಕದ ಮೊದಲಿನ ನಾಲ್ಕು ಅಂಕಗಳ ಆಧಾರದ ಮೇಲೆ, ಒಂದು ಒರಟು ಮಾದರಿಯಲ್ಲಿ ರಚಿತವಾದದ್ದೆಂದು ತೋರು ತ್ತದೆಯೇ ಹೊರತು ಮೃಚ್ಛಕಟಿಕದ ಮೊದಲ ನಾಲ್ಕು ಅಂಕಗಳಿಗೆ ಮೂಲವಾಗಿಯೂ ಅಸಮಗ್ರವಾದ ನಾಟಕವಾಗಿರುವಂತೆಯೂ ತೋರು ವುದಿಲ್ಲ ಮೃಚ್ಛಕಟಿಕದ ಮಿಕ್ಕ ಆರು (೫-೧೦) ಅಂಕಗಳಿಗೆ ಸಂಬಂಧ ಪಡದ ಅಂಶಗಳನ್ನೂ ಕೇರಳ ರಂಗದಲ್ಲಿ ಅಭಿನಯಿಸುವುದಕ್ಕೆ ಕಷ್ಟ ವಾಗಬಹುದಾದ ಅಂಶಗಳನ್ನೂ ಚಾರುದತ್ತಕಾರನು ತನ್ನ ಗ್ರಂಥದಲ್ಲಿ ಕಿತ್ತುಹಾಕಿರುವಂತಿದೆ

ಆದ್ದರಿಂದ ಈ ಹದಿಮೂರು ನಾಟಕಗಳ ಕರ್ತೃವು (ಕರ್ತೃಗಳು ?) ಕಾಳಿದಾಸನಿಗಿಂತ — ಅಷ್ಟೇ ಅಲ್ಲ, ಆಶ್ಚರ್ಯಚೂಡಾಮಣಿಯ ಕರ್ತೃ ವಾದ ಶಕ್ತಿಭದ್ರನಿಗಿಂತ — ಈಚೀನವನಾ(ರಾ)ಗಿರಬೇಕು ಅವರು ಶ್ರೇಷ್ಠ ರಾದ ಹಿಂದಿನ ಕವಿಗಳಿಂದ ಸಂದರ್ಭೋಚಿತವಾದ ಉತ್ತಮ ಭಾಗ ಗಳನ್ನು ಸಂಗ್ರಹಿಸಿಕೊಂಡು ಕೇರಳ ರಂಗಕ್ಕೆ ಅನುಕೂಲವಾಗುವಂತೆ ಈ ನಾಟಕಗಳನ್ನು ರಚಿಸಿರಬೇಕು ಹೀಗೆ ಇವಕ್ಕೆ ಯಾವನಾದರೂ ಒಬ್ಬನೇ ಒಬ್ಬನ ಕರ್ತೃತ್ವವು ಇಲ್ಲದ್ದರಿಂದಲೇ ಇವುಗಳಲ್ಲಿ ಕರ್ತೃವಿನ ಹೆಸರು ಉಕ್ತವಾಗಿಲ್ಲವೆಂದು ತೋರುತ್ತದೆ. ಈ ಊಹೆಗೆ ಉಪಷ್ಟಂಭಕ ವಾಗಿ ಕೆಳಗೆ ಹೇಳಿರುವ ಕಾರಣವೂ ಇದೆ:—

ಸುಮಾರು ಆರು ಅಥವಾ ಏಳನೆಯ ಶತಮಾನದಲ್ಲಿ ಕೇರಳ ದೇಶದೊಳಗೆ ಸಂಸ್ಕೃತ ನಾಟಕಾಭಿನಯವು ಅಭಿವೃದ್ಧಿಗೆ ಬಂದು ಅನೇಕ ಮಾರ್ಪಾಟುಗಳಾದುವು * ಈ ಕಾರ್ಯದಲ್ಲಿ ಕುಲಶೇಖರ ವರ್ಮ ಪೆರುಮಾಳ್,† ಭಾಸ್ಕರ ರವಿವರ್ಮ ಪೆರುಮಾಳ್ ಎಂಬವರು (ಕ್ರಿ ಶ ೧೦೭೩-೧೧೩೧) ‡ ಬಹು ಆಸಕ್ತಿಯನ್ನು ವಹಿಸಿದರು ಇವರಲ್ಲಿ ಕುಲಶೇಖರವರ್ಮನು ತಪತೀಸ್ವಯಂವರ ಸುಭದ್ರಾಧನಂಜಯಗಳನ್ನು ಬರೆದನೆಂದೂ ಅಭಿನೇತೃಗಳ ಆನುಕೂಲ್ಯಕ್ಕಾಗಿ ಅವುಗಳ ರಂಗಪಾಠವನ್ನು (' ಕ್ರಮದೀಪಿಕಾ ' ಮತ್ತು 'ಅಭಿನಯ ರೀತಿ' ಅಥವಾ 'ಆಟ್ಟಪ್ರಕಾರಂ') ಮಾಡಿಟ್ಟನೆಂದೂ ಹೇಳುತ್ತಾರೆ ಪೆರುಮಾಳರ ಕಾಲದಲ್ಲಿ ನಾಟಕಗಳನ್ನು ಆಡುವುದೂ ನೋಡುವುದೂ ಹೆಚ್ಚು ರೂಢಿಗೆ ಬಂದಾಗ ಹೊಸ ನಾಟಕಗಳು ಸಾಲದೆ ಅನುಕ್ತ ಕರ್ತೃಕಗಳಾದ ಪ್ರಾಚೀನ ನಾಟಕ ಸಂಸ್ಕರಣಗಳೂ ಸಂಗ್ರಹಗಳೂ ಬಂದುವು ಇಂಥ ಜನರಂಜಕವಾದ ನಾಟಕಗಳಲ್ಲಿ ' ಆಶ್ಚರ್ಯಚೂಡಾಮಣಿ 'ಯು ಪ್ರಸಿದ್ಧವಾದದ್ದು ಇದರಂತೆಯೇ ಇಂದಿಗೂ ಪ್ರತಿಜ್ಞಾನಾಟಕದಿಂದ 'ಮಂತ್ರಾಂಕ'ವೂ ಸ್ವಪ್ನನಾಟಕದಿಂದ ' ಸ್ವಪ್ನಾಂಕ'ವೂ, ದೂತವಾಕ್ಯ ಘಟೋತ್ಕಚಾದಿಗಳೂ ರಂಜಕವಾಗಿದ್ದು ರಂಗದಲ್ಲಿ ಅಭಿನಯಿಸಲ್ಪಡುತ್ತಿವೆ "ಆಶ್ಚರ್ಯಚೂಡಾಮಣಿ"ಯು ಸುಪ್ರಸಿದ್ಧವಾಗಿದ್ದು ಅದನ್ನು ಮೇಲ್ಪಂಕ್ತಿಯಾಗಿಟ್ಟುಕೊಂಡಿದ್ದದ್ದರಿಂದ ಈ ನಾಟಕಗಳ ಮೊದಲ

---

* ವಿದೂಷಕನು ಪ್ರಾಕೃತಕ್ಕೆ ಬದಲಾಗಿ ಮಲೆಯಾಳದಲ್ಲಿ ಮಾತನಾಡುವುದು, ಸಂಸ್ಕೃತ ಮಲೆಯಾಳಗಳನ್ನು ಬೆರಸಿ ' ಮಣಿಪ್ರವಾಳ ' ಶೈಲಿಯಲ್ಲಿ ಹಾಸ್ಯಾಸ್ಪದವಾಗುವಂತೆ ಮಾತನಾಡುವುದು, ರಾಜನು ಶ್ಲೋಕವನ್ನು ಮೊದಲು ಸಾಮಾನ್ಯವಾದ ರೀತಿಯಲ್ಲಿ ಹೇಳಿ ಆ ಮೇಲೆ ಅದನ್ನೇ ವಿಸ್ತಾರವಾಗಿ ಅಭಿನಯಿಸುವುದು, ಒಂದು ನಾಟಕದ ಮುಖ್ಯ ಮುಖ್ಯವಾದ ಅಂಶಗಳಿಗೆಲ್ಲಾ ವ್ಯಾಖ್ಯಾನರೂಪವಾದ ಪೀಠಿಕೆಯನ್ನು ಸೇರಿಸುವುದು, ಇತ್ಯಾದಿ.

† ಕ್ರಿ ಶ. ೯೩೫-೯೫೫ ಆಶ್ಚರ್ಯಚೂಡಾಮಣಿಗೆ ಕುಪ್ಪುಸ್ವಾಮಿ ಶಾಸ್ತ್ರಿಗಳು ಬರೆದಿರುವ ಉಪೋದ್ಘಾತ, ಪು ೯

‡ ಈ ಭಾಸ್ಕರ ರವಿವರ್ಮರು 'ವಿಚ್ಛಿನ್ನಾಭಿಷೇಕ'ವನ್ನು (ಪ್ರತಿಮಾ ನಾಟಕದ ಮೊದಲನೆಯ ಅಂಕ) ಬರೆದಂತೆ ಮಲಬಾರಿನಲ್ಲಿ ಪ್ರತೀತಿ ಇರುವ ಹಾಗಿದೆ.

ಭಾಗದಲ್ಲಿ "ಏವಮಾರ್ಯಮಿಶ್ರಾನ್ ವಿಜ್ಞಾಪಯಾಮಿ, ಕಿಂನು ಖಲು " ಮುಂತಾದ ವಾಕ್ಯಗಳು ಅನೇಕ ನಾಟಕಗಳಲ್ಲಿ ಕಂಡುಬರುತ್ತವೆ ಆದ್ದರಿಂದ ಇವು 'ಆಶ್ಚರ್ಯಚೂಡಾಮಣಿ'ಯ ಅನಂತರ, ಎಂದರೆ ಕ್ರಿ ಶ ೭ನೆಯ ಶತಮಾನದ ಮೇಲೆ ೧೦ನೆಯ ಶತಮಾನದ ಒಳಗೆ ರಚಿತವಾಗಿರಬೇಕು

ಇವು ಇಷ್ಟು ಅರ್ವಾಚೀನಗಳೆಂದು ಹೇಳಿದರೆ ಇವುಗಳ ಭಾಷೆಯಲ್ಲಿ ಬರುವ ಆರ್ಷಪ್ರಯೋಗಗಳಿಗೆ ಉಪಪತ್ತಿಯನ್ನು ಹೇಳುವುದು ಹೇಗೆ?—ಎಂದು ಕೇಳಬಹುದು ಈ "ಆರ್ಷ" ಪ್ರಯೋಗಗಳು ಅಷ್ಟೇನೂ ಹೆಚ್ಚಾಗಿಲ್ಲ ಕೆಲವು ಲೇಖಕ ಪ್ರಮಾದಗಳಿರಬಹುದು; ಮತ್ತೆ ಕೆಲವನ್ನು ಸ್ವಲ್ಪ ಕ್ಲೇಶಪಟ್ಟರ ಪಾಣಿನಿ ಸೂತ್ರಗಳಿಂದಲೇ ಸಾಧಿಸಬಹುದು ಇನ್ನು ಕೆಲವು ರಾಮಾಯಣ ಭಾರತಾದಿ ಇತಿಹಾಸ ಗ್ರಂಥಗಳಲ್ಲಿ ಕಂಡುಬರತಕ್ಕವುಗಳು, ನಾಟಕ ಕರ್ತರು ಈ ಇತಿಹಾಸ ಪುರಾಣಾದಿಗಳನ್ನು ಓದಿ ಆ ಭಾಷೆಯ ರೂಢಿಯಮೇಲೆ ಈ ರೂಪಗಳನ್ನು ಉಪಯೋಗಿಸಿರಬಹುದು *

ಈಚೆಗೆ, ಮದರಾಸ್ ಪ್ರೆಸಿಡೆನ್ಸಿ ಕಾಲೇಜಿನ ಸಂಸ್ಕೃತ ಮಹೋಪಾಧ್ಯಾಯರಾದ ಮ|| ಎಸ್ ಕುಪ್ಪಸ್ವಾಮಿಶಾಸ್ತ್ರಿಗಳು ಆಶ್ಚರ್ಯಚೂಡಾಮಣಿಯ† ಉಪೋದ್ಘಾತದಲ್ಲಿ ಪಿಶರೋಟಿಗಳನ್ನೇ ಅನುಮೋದಿಸಿರುತ್ತಾರೆ ಅವರು ಹೇಳಿರುವುದೇನೆಂದರೆ—

* ಮೂಲ ಸ್ವಪ್ನ ವಾಸವದತ್ತವು ಹತ್ತು ಅಂಕಗಳ "ಪ್ರಕರಣ"ವಾಗಿದ್ದು, ಅದರ ಆಧಾರದ ಮೇಲೆ ನಾಲ್ಕು ಅಂಕಗಳ ಪ್ರತಿಜ್ಞಾನಾಟಕವೂ ಆರು ಅಂಕಗಳ ಸ್ವಪ್ನ ನಾಟಕವೂ ರಚಿತವಾಗಿರಬಹುದೇ? ಪ್ರತಿಜ್ಞಾ ನಾಟಕದ ಸ್ಥಾಪನದಲ್ಲಿರುವ 'ನಾವು ಪ್ರಕರಣವನ್ನು ಆರಂಭಿಸುತ್ತೇವೆ' ಎಂಬ ವಾಕ್ಯವೂ ಈ ಊಹೆಗೆ ಸಾಧಕವಾಗುತ್ತದೆ "ಪ್ರಕರಣ"ದಲ್ಲಿ ಹತ್ತು ಅಂಕಗಳಿರಬೇಕು. ಪ್ರತಿಜ್ಞಾನಾಟಕದಲ್ಲಿ ಇರುವುದು ನಾಲ್ಕೇ ಅಂಕ_ಎಂದು ಕೃಷ್ಣ ಪಿಶರೋಟಿಗಳು ಸೂಚಿಸಿದ್ದಾರೆ ಸ್ವಪ್ನವಾಸವದತ್ತಾ ಪರಿಣಯವು ಕಾಮಶೃಂಗಾರವಾಗುತ್ತದೆಂಬ ಅಮರಟೀಕಾ ಸರ್ವಸ್ವಕಾರನ ಮಾತೂ ಇದಕ್ಕೆ ಉಪಷ್ಟಂಭಕವಾಗುತ್ತದೆ. (ಪುಟ ೧೬ನ್ನೂ ನೋಡಿ).

† ಬಾಲಮನೋರಮ ಪ್ರೆಸ್, ಮದರಾಸು, ೧೯೨೬.

‘ ಆಶ್ಚರ್ಯಚೂಡಾಮಣಿ ’ ಯಲ್ಲಿ ಸ್ವಪ್ನನಾಟಕಾದಿ ಗ್ರಂಥಗಳ ‘ ವಿಶೇಷ ಲಕ್ಷಣ ’ (ಪು ೭-೮)ಗಳೆಲ್ಲಾ ಇವೆ ಇದಕ್ಕೂ ಅಭಿಷೇಕ ನಾಟಕಕ್ಕೂ ಹಲವು ಅಂಶಗಳಲ್ಲಿ ಸಾದೃಶ್ಯವಿದೆ ಈ ಎರಡು ನಾಟಕಗಳೂ ಪ್ರತಿಮಾನಾಟಕವೂ ಮದರಾಸಿನ ಒಂದು ಹಸ್ತಪ್ರತಿಯಲ್ಲಿ ಒಟ್ಟಿಗೆ ದೊರೆತಿವೆ ಇದನ್ನು ನೋಡಿ ಶಕ್ತಿಭದ್ರನೇ ಈ ಮೂರು ಕಾವ್ಯಗಳಿಗೂ ಕರ್ತೃವೆಂದು ಹೇಳಬಹುದೇ ? ಗಣಪತಿಶಾಸ್ತ್ರಿಗಳು. ಸ್ವಪ್ನನಾಟಕಾದಿ ಹದಿಮೂರು ಗ್ರಂಥಗಳಿಗೆ ಭಾಸ ಕರ್ತೃತ್ವವನ್ನು ಸಾಧಿಸಿರುವುದು ಹೀಗೇ ಅಲ್ಲವೇ ?

ಈ ನಾಟಕಗಳಲ್ಲಿ ಕಂಡುಬರುವ ಅಪಾಣಿನೀಯ ರೂಪಗಳು ಈ ನಾಟಕಗಳನ್ನು ಬರೆದ ಅಥವಾ ತಿದ್ದಿದ ‘ ಶಾಕ್ಯ ’ (ನಟ)ರ ಅಜ್ಞತೆಯಿಂದ ಉಂಟಾಗಿರಬಹುದು (ಬೋಧಾಯನ ಕವಿಯ ‘ ಭಗವದಜ್ಜುಕೀಯ ’ ವನ್ನು ನೋಡಿದರೆ ಇದು ಗೊತ್ತಾಗುತ್ತದೆ.)

ಭಾಮಹನು ಕಾವ್ಯಾಲಂಕಾರದಲ್ಲಿ (ಅಧ್ಯಾ ೪) ನ್ಯಾಯವಿರೋಧಕ್ಕೆ ಉದಾಹರಣೆಯನ್ನು ಮೂಲ ಬೃಹತ್ಕಥೆಯಿಂದ ತೆಗೆದುಕೊಂಡಿರಬಹುದು. ಏಕೆಂದರೆ, ‘ ಪ್ರತಿಜ್ಞಾ ಯೌಗಂಧರಾಯಣ ’ ಕರ್ತೃವು (ಸಾಲವೃಕ್ಷಗಳು ದಟ್ಟವಾಗಿ ಬೆಳೆದು ಮಬ್ಬು ಕವಿದಿರುವ ಕಡೆಯಲ್ಲಿ ಕೃತಕವಾದ ಆನೆಯನ್ನು ಇಟ್ಟು) ಭಾಮಹನು ಹೇಳಿರುವ ದೋಷವನ್ನು ನಿವಾರಣೆಮಾಡಿಕೊಳ್ಳಲು ಪ್ರಯತ್ನಪಟ್ಟಿದ್ದಾನೆ ಆದ್ದರಿಂದ ಭಾಮಹನು ಪ್ರತಿಜ್ಞಾ ಯೌಗಂಧರಾಯಣವನ್ನೇ ದೃಷ್ಟಿಯಲ್ಲಿಟ್ಟುಕೊಂಡಿದ್ದಾನೆಂದು ಹೇಳುವಹಾಗಿಲ್ಲ.

ಮಾಧವಯಜ್ವನ ನಯಚಂದ್ರಿಕೆಯಲ್ಲಿ (ಅರ್ಥಶಾಸ್ತ್ರವ್ಯಾಖ್ಯಾನ) “ ನವಂ ಶರಾವಂ .......” ಎಂಬ ಶ್ಲೋಕವನ್ನು ಕೌಟಿಲ್ಯನು ಮನುಗೀತಿಯಿಂದ ಅನುವಾದಮಾಡಿರುವಂತೆಯೂ ಅದು ಪುರಾಣ ಸದೃಶವೆಂದೂ ತಿಳಿದುಬರುತ್ತದೆ.*

* “ ಮನುಗೀತಾವಪಿ, ಮನುಗೀತತಯಾ ಪುರಾಣೇಪೀತ್ಯರ್ಥಃ ” . — ಇದರಿಂದ ಅರ್ಥಶಾಸ್ತ್ರದಲ್ಲಿನ ಮೂಲವು “ ಮನುಗೀತಾವಪೀಹ ಶ್ಲೋಕೌ ಭವತಃ ಯಾನ್ ಯಜ್ಞಸಂಘೈಃ.. .. .” ಎಂದಿರಬೇಕೆಂದು ಊಹಿಸಬಹುದು.

ಶಾರದಾತನಯನ ಭಾವಪ್ರಕಾಶ ಮತ್ತು ಭೋಜನ ಶೃಂಗಾರ ಪ್ರಕಾಶಗಳನ್ನು ನೋಡಿದರೆ (ರಾ ಏ ಸೊ ಪತ್ರಿಕೆ, ಅಕ್ಟೋಬರ್ ೧೯೨೪ಳ ಅನುಬಂಧವನ್ನು ನೋಡಿ.) ಹನ್ನೊಂದನೆಯ ಶತಮಾನಕ್ಕೆ ಹಿಂದೆ ವಸ್ತುರಚನಾದಿಗಳಲ್ಲಿ ಬಹುಮಟ್ಟಿಗೆ ಈ ಸ್ವಪ್ನನಾಟಕವನ್ನು ಹೋಲುತ್ತಿದ್ದ ಒಂದು ಸ್ವಪ್ನವಾಸವದತ್ತವಿತ್ತೆಂಬುದು ಸ್ಪಷ್ಟವಾಗಿದೆ ಆದರೆ ಭಾವಪ್ರಕಾಶದಿಂದ ನಿರ್ದಿಷ್ಟವಾಗಿರುವ 'ಸ್ವಪ್ನವಾಸವದತ್ತಾ' ಭಾಗಗಳಿಗೂ ಈ 'ಸ್ವಪ್ನವಾಸವದತ್ತ'ದ ಅದೇ ಭಾಗಗಳಿಗೂ ಇರುವ ವ್ಯತ್ಯಾಸಗಳನ್ನೂ, ನಾಟ್ಯದರ್ಪಣ ನಾಟಕಲಕ್ಷಣರತ್ನಕೋಶಗಳಲ್ಲಿ (ಅನುಬಂಧವನ್ನು ನೋಡಿ) ಸ್ವಪ್ನವಾಸವದತ್ತದ ವಿಚಾರವಾಗಿ ಹೇಳಿರುವ ಅಂಶಗಳನ್ನೂ* ವಿಮರ್ಶೆಮಾಡಿದರೆ ಅನಂತಶಯನದ ಸ್ವಪ್ನವಾಸವದತ್ತವು ಈ ಪ್ರಾಚೀನ ಸ್ವಪ್ನವಾಸವದತ್ತಕ್ಕಿಂತ ಭಿನ್ನವೆಂಬುದೂ ಆದರೆ ಆ ಹೆಸರಿನ ಯಾವುದೋ ಒಂದು ಪ್ರಾಚೀನ ಗ್ರಂಥದ 'ರಂಗವಾರ' ವಿರಬಹುದೆಂಬುದೂ ಸ್ಪಷ್ಟವಾಗುತ್ತದೆ.

'ಸ್ವಂಚಿತಪಕ್ಷ್ಮಕವಾಟಂ ' ಎಂಬ ಶ್ಲೋಕವು ಸ್ವಪ್ನವಾಸವದತ್ತದಲ್ಲಿಲ್ಲ ಅದು ಈ ಗ್ರಂಥದಲ್ಲಿದೆಯೆಂದು ಹೇಳಿದಾಗ ಅಭಿನವಗುಪ್ತನಂಥ ಲಕ್ಷಣಗ್ರಂಥಕಾರನು ಪ್ರಮಾದ ಮಾಡಿರಬಹುದೆಂದು ಹೇಳಲು ಎಷ್ಟು ಧೈರ್ಯ? ಆತನಿಗೆ ಭಾಸನ ಗ್ರಂಥಗಳು ಅಪರಿಚಿತವಾಗಿರಲಾರವು 'ಮಹಾಕವಿ ಭಾಸನ ಪ್ರಬಂಧ' ದ್ದೆಂದು "ತ್ರೇತಾಯುಗಂ ವಿತೃಪ್ತಿಗಾಮಿ" ಎಂಬ ಶ್ಲೋಕವನ್ನು ತನ್ನ ಅಭಿನವಭಾರತಿಯಲ್ಲಿ ಅನುವಾದಮಾಡಿದ್ದಾನೆ. ಈ ಶ್ಲೋಕವೂ ಭಾಸನದೆಂದು ಪ್ರಕಟವಾಗಿರುವ ಯಾವ ಗ್ರಂಥದಲ್ಲಿಯೂ ಸಿಕ್ಕಿಲ್ಲ. ಹಾಗೆಯೇ ಆತನು ನಾಟ್ಯಶಾಸ್ತ್ರದ "ಕ್ವಚಿದ್ಧರ್ಮಃ ಕ್ವಚಿತ್ ಕ್ರೀಡಾ ." ಎಂಬ ಶ್ಲೋಕವನ್ನು (I, ೭೪) ವ್ಯಾಖ್ಯಾನ ಮಾಡುತ್ತ ಸ್ವಪ್ನವಾಸವದತ್ತದಲ್ಲಿ 'ಕ್ರೀಡೆ' ಇದೆ ಎಂದು ಹೇಳುತ್ತಾನೆ. ಸ್ವಪ್ನನಾಟಕದಲ್ಲಿ ಈ ಕ್ರೀಡೆ ಎಲ್ಲಿದೆ? ಆದ್ದರಿಂದ ಅಭಿನವಗುಪ್ತನಿಂದ ನಿರ್ದಿಷ್ಟವಾದ ಸ್ವಪ್ನವಾಸವ

---

* ೧೯೨೩ನೆಯ ಅಕ್ಟೋಬರ್ ಮತ್ತು ಡಿಸೆಂಬರ್ ತಿಂಗಳ "ಜೂರ್ನಾಲ್ ಅಸಿಯಾತಿಕ್"ನಲ್ಲಿ ಸಿಲ್ವೇನ್ ಲೆವಿಯವರು ಬರೆದಿರುವ ಲೇಖನವನ್ನು ನೋಡಿ.

ದತ್ತವೇ ಬೇರೆ ಆಗಿರಬೇಕು

ಸಿ. ಆರ್ ದೇವಧರರು ಸಿದ್ಧಾಂತಿಸಿರುವಂತೆ* ಚಾರುದತ್ತವು ರಂಗ ಪ್ರಯೋಗಾರ್ಥವಾಗಿ ಮೃಚ್ಛಕಟಿಕದಿಂದ ಒರಟಾದ ರೀತಿಯಲ್ಲಿ ಮಾಡಿದ ಸಂಗ್ರಹ

ಪ್ರತಿಜ್ಞಾ ಯೌಗಂಧರಾಯಣದಲ್ಲಿ ಮಹಾಸೇನನ ರಾಣಿಯು ಅನೇಕವೇಳೆ ಮಲೆಯಾಳಿ ಹೆಂಗಸಿನ ಹಾಗೆ ನಡೆದುಕೊಳ್ಳುತ್ತಾಳೆ. "**ಸಂಬಂಧ** ನಿಶ್ಚಯವಾಯಿತೇನು?" ಎಂದು ಕೇಳುವಾಗ 'ಸಂಬಂಧ' ಶಬ್ದವನ್ನು ಮದುವೆ ಎಂಬ ಅರ್ಥದಲ್ಲಿ ಪ್ರಯೋಗಿಸಿದ್ದಾಳೆ (ಪು ೬೦–೬೫) ಯೌಗಂಧರಾಯಣನೂ ಮಲೆಯಾಳಿಯಂತೆ "ಏವಂ **ಸಂಬಂಧಂ** ಮನ್ಯತೇ ಮಹಾಸೇನಃ, ತೇನ ಹ್ಯಾನೀಯತಾಂ **ಭೃಂಗಾರಃ**" ಎಂದು ಹೇಳುತ್ತಾನೆ ಹಾಗೇ ಅವಿಮಾರಕದಲ್ಲಿ 'ವಿಚಾರಿತಂ' ಎಂಬ ಶಬ್ದವು ಮಲೆಯಾಳಿ ಅರ್ಥದಲ್ಲಿಯೇ ಉಪಯುಕ್ತವಾಗಿದೆ † ಇದರಲ್ಲಿಯೇ ಅವಿಮಾರಕನು ತನ್ನ ಸೋದರಮಾವನಿಗೆ ವಿಶೇಷ ಗೌರವಕೊಟ್ಟು ಎರಡುಸಾರಿ ನಮಸ್ಕಾರಮಾಡುವುದನ್ನು ನೋಡಿದರೆ ಇದಕ್ಕೆ "ಮರುಮಕ್ಕಟ್ಟಾಯಂ" ಸಂಪ್ರದಾಯವು ಕಾರಣವಾಗಿರಬೇಕೆಂಬುದು ಸ್ಪಷ್ಟವಾಗಿದೆ.

ಆದ್ದರಿಂದ ರಾಮಪಿಶರೋಟಿಗಳು ಹೇಳುವಂತೆ ಈ "ಭಾಸನಾಟಕಚಕ್ರ"ವನ್ನು ಕೇರಳ ನಾಟಕಚಕ್ರವೆಂದೋ, "ಶಾಕ್ಯ ನಾಟಕ ಚಕ್ರ" ವೆಂದೋ ಕರೆಯುವುದು ಯುಕ್ತವಾಗಿದೆ. ‡

---

* ಅನಾಲ್ಸ್ ಆಫ್ ಭಂಡಾರ್ಕರ್ ಇನ್‌ಸ್ಟಿಟ್ಯೂಟ್, ಪೂನಾ, ಸಂ VII, ಭಾಗ ೧–೨, ಪು ೩೪.

† ಇದರಂತೆಯೇ 'ಅವ್' ಎಂಬ ಶಬ್ದವೂ 'ಹೌದು' ಎಂಬ ಅರ್ಥದಲ್ಲಿ ಬಂದಿದೆ. ಇದು ದ್ರಾವಿಡ ಶಬ್ದವೆಂದು (= ಆಮ) ಕೆಲವರ ಅಭಿಪ್ರಾಯ.

‡ ಎಂದರೆ, ಈ ಹದಿಮೂರು ನಾಟಕಗಳು ಆಶ್ಚರ್ಯಚೂಡಾಮಣಿಯ ಅನಂತರ ಕಾಲದಲ್ಲಿ, ಅದರ ಮಾದರಿಯ ಮೇಲೆ, ಕೇರಳ ಗ್ರಂಥಕಾರರಿಂದಲೋ ಶಾಕ್ಯರೆಂಬ ಕೇರಳ ನಟರಿಂದಲೋ ರಚಿತವಾದವುಗಳೆಂದು ಅವರ ಭಾವವಿರಬಹುದು ಏಕೆಂದರೆ ಅವರು ಎಲ್ಲಿಯೂ ಈ ಗ್ರಂಥಗಳ ಕರ್ತೃ ಇಂಥವನೇ ಎಂದಾಗಲಿ ಅವುಗಳ ಕಾಲವು ಇಂಥದೇ ಎಂದಾಗಲಿ ನಿಷ್ಕೃಷ್ಟವಾಗಿ ಹೇಳಿಲ್ಲ.

ಹೀರಾನಂದಶಾಸ್ತ್ರಿಗಳು ಸ್ವಲ್ಪ ಹೆಚ್ಚು ಕಡಿಮೆ ಕುಪ್ಪುಸ್ವಾಮಿ ಶಾಸ್ತ್ರಿಗಳು ಮೇಲೆ ಹೇಳಿರುವಂತೆಯೇ ಹೇಳಿ ಜೊತೆಗೆ, ಆರನೆಯ ಶತಮಾನದಲ್ಲಿ ರಚಿತವಾದ ಮಹಾಬಲಿಪುರದ ಕಲ್ಲುದೇವಾಲಯ ಗಳನ್ನು ನೋಡಿ ಪ್ರತಿಮಾನಾಟಕದ "ಪ್ರತಿಮಾಗೃಹ" ವು ಕವಿಯಿಂದ ಕಲ್ಪಿತವಾಗಿರಬಹುದೆಂದೂ, ಚಾರುದತ್ತವು ಮೃಚ್ಛಕಟಿಕದ ಸಂಗ್ರಹವೇ ಆಗಿರಬೇಕು—ಏಕೆಂದರೆ, ಮಿಕ್ಕ ಅಂಶಗಳನ್ನೆಲ್ಲಾ ಅಷ್ಟು ಸೊಗ ಸಾಗಿ ಬರೆದವನು ಮೊದಲ ನಾಲ್ಕು ಅಂಕಗಳನ್ನು ಮಾತ್ರ ಕದಿಯು ತ್ತಾನೆಯೇ? ಅವುಗಳನ್ನು ತಾನೇ ಬರೆಯಲಾರದೇ ಹೋಗಿದ್ದನೇ?— ಎಂದೂ ಅಭಿಪ್ರಾಯಪಡುತ್ತಾರೆ

## ಪ್ರತಿಪಕ್ಷದ ಖಂಡನೆ

ಇದುವರೆಗೂ ವಿವರಿಸಿದ ಭಾಸ ಪ್ರತಿಪಕ್ಷಿಗಳ ವಾದದಿಂದ ಈ ಹದಿಮೂರು ನಾಟಕಗಳ ಕರ್ತೃವು ಕೇರಳದೇಶಿಯನಾಗಿದ್ದಿರಬಹು ದೆಂಬುದಕ್ಕೆ ಕೆಲವು ಕಾರಣಗಳು ಸಿಕ್ಕಿದಹಾಗಾಯಿತೇ ಹೊರತು, ಅವನು ಭಾಸನಲ್ಲವೆಂದಾಗಲಿ ಈ ಸ್ವಪ್ನವಾಸವದತ್ತಕ್ಕೂ ಭಾಸನು ಬರೆದಿದ್ದನೆಂದು ಗೊತ್ತಿರುವ ಸ್ವಪ್ನವಾಸವದತ್ತಕ್ಕೂ ಯಾವ ಸಂಬಂ ಧವೂ ಇಲ್ಲವೆಂದಾಗಲಿ ನಿರ್ವಿವಾದವಾಗಿ ನಿರ್ಧರಿಸುವುದಕ್ಕೆ ಸಾಕಾದಷ್ಟು ನಿದರ್ಶನಗಳು ಸಿಕ್ಕಿದಂತಾಗಲಿಲ್ಲ ಏಕೆಂದರೆ .—

ಆಶ್ಚರ್ಯಚೂಡಾಮಣಿ ಮುಂತಾದ ಕೇರಳ ನಾಟಕ ಸಾದೃಶ್ಯವು (ಪು ೨೧-೨೮) ಇವೊತ್ತಿಗದ ಕತ್ತಿಯ ಹಾಗೆ ಉಭಯ ಪಕ್ಷಚ್ಛೇದಕ ವಾದದ್ದು ಈ ನಾಟಕಗಳಲ್ಲಿ ಆಶ್ಚರ್ಯಚೂಡಾಮಣಿ ಪ್ರಾಚೀನ ತರವೇ, ಸ್ವಪ್ನವಾಸವದತ್ತಾದಿಗಳು ಪ್ರಾಚೀನತರವೇ ಎಂಬುದನ್ನು ಬೇರೆ ಪ್ರಮಾಣಗಳಿಂದ ಸಿದ್ಧಾಂತಿಸಿದ ಹೊರತು, ಯಾವುದರ ಅನು ಕರಣ ಯಾವುದೆಂದು ಹೇಳುವುದು ಸಾಧ್ಯವಲ್ಲ ಆದ್ದರಿಂದ. ಭಾಸ ಪ್ರತಿಪಕ್ಷದವರು ಸ್ವಪ್ನವಾಸವದತ್ತಾದಿಗಳು ಅನುಕರಣವೆಂದರೆ ಭಾಸ ಪಕ್ಷದವರು ಆಶ್ಚರ್ಯಚೂಡಾಮಣಿ ಮುಂತಾದವುಗಳೇ ಅನುಕರಣ ವೆಂದು ಆ ಮರ್ಯಾದೆಯನ್ನು ಹಿಂತಿರುಗಿಸಬಹುದು ಶಕ್ತಿಭದ್ರ ನೇನೋ ತನ್ನ ಆಶ್ಚರ್ಯಚೂಡಾಮಣಿಯ ಪ್ರಸ್ತಾವನೆಯಲ್ಲಿ ಹೀಗೆಂದು ಹೇಳಿದ್ದಾನೆ .—

ಸೂತ್ರಧಾರ_ಆರ್ಯೆ, ದಕ್ಷಿಣದೇಶದಿಂದ (ಬಂದ) ಅಭಿನಯಾಮ್ರೇಡಿತ ಸೌಭಾಗ್ಯವುಳ್ಳ ಆಶ್ಚರ್ಯಚೂಡಾಮಣಿಯೆಂಬ ನಾಟಕವನ್ನು (ನೋಡಲು) ಅಭಿಲಾಷೆ ಪಡುತ್ತಿದ್ದೇವೆ ಎಂದು ಆರ್ಯಮಿಶ್ರರ ಆಜ್ಞೆಯಾಗಿದೆ

ನಟಿ__ಆರ್ಯ, ಇದು ಅಸಂಬದ್ಧವಾದದ್ದಲ್ಲವೆ? ಆಕಾಶವು ಹೂ ಬಿಟ್ಟೀತು, ಮರಳು ಎಣ್ಣೆಯನ್ನು ಸೂಸೀತು, ದಕ್ಷಿಣದಿಕ್ಕಿನಿಂದ ನಾಟಕರಚನೆಯು ಬಂದರೆ!

ಸೂತ್ರ__ಆರ್ಯೆ, ಹಾಗಲ್ಲ ಗುಣವನ್ನು ಗ್ರಹಿಸು ಹುಟ್ಟಿದ ದೇಶ ವಿರಲಿ, ಬಿಡು ಗುಣಗಳು ಪ್ರಮಾಣವೇ ಹೊರತು ದಿಗ್ವಿಭಾಗವಲ್ಲ

ನಟಿ__ಯುಕ್ತ. ರತ್ನಾಕರವಲ್ಲವೇ ಆ ದೇಶ!

ಸೂತ್ರ__ಆರ್ಯೆ, ಕೇಳು, ಇದು ಉನ್ಮಾದವಾಸವದತ್ತಾ ಮುಂತಾದ ಕಾವ್ಯಗಳ ಕರ್ತೃವಾದ ಶಕ್ತಿಭದ್ರ ಕವಿಯ ಪ್ರಜ್ಞಾವಿಲಾಸ (ಪುಟ ೭-೯)

ಇದರಿಂದ ಆಶ್ಚರ್ಯಚೂಡಾಮಣಿಯು ದಕ್ಷಿಣ ದೇಶದಲ್ಲಿ ಮೊದ ಮೊದಲು ಬರೆದ ನಾಟಕವಾಗಿರಬೇಕೆಂದೂ ಊಹಿಸಿದ್ದಾರೆ (ಉಪೋ. ಪು ೯) ಆದರೆ ಶಕ್ತಿಭದ್ರನೇ ಉನ್ಮಾದವಾಸವದತ್ತಾದಿ ನಾಟಕಗಳನ್ನು ಇದಕ್ಕೆ ಮುಂಚೆ ಬರೆದಿದ್ದನೆಂದು ಈ ವಾಕ್ಯಗಳಿಂದಲೇ ಗೊತ್ತಾಗುತ್ತದೆ. ಹೀಗಿರಲು ಅವನ ಮಾತಿಗೆ ಅಕ್ಷರಶಃ ಅರ್ಥಮಾಡುವುದು ಹೇಗೆ? ಅವನಿಗಿಂತ ಹಿಂದೆ ಭಾಸನ ನಾಟಕಗಳು ಪ್ರಚಾರದಲ್ಲಿದ್ದು ನಿಂತು ಹೋಗಿರಲಿಲ್ಲವೆಂದು ಹೇಗೆ ಗೊತ್ತು? ಕ್ರಿ ಶ ೬-೭ನೆಯ ಶತಮಾನದಲ್ಲಿ ಕೇರಳ ದೇಶದ ಸಂಸ್ಕೃತ ನಾಟಕವು ಪುನರುಜ್ಜೀವಿತವಾಯಿತೆಂದು ಹೇಳುವುದನ್ನು (ಪು ೨೭) ನೋಡಿದರೆ ಇದು ಸಂಭವವಾಗಿರುವಂತೆ ಕಾಣುತ್ತದೆ—

"ಏವಮಾರ್ಯಮಿಶ್ರಾನ್ ವಿಜ್ಞಾಪಯಾಮಿ" ಮುಂತಾದ ಕೆಲವು ವಾಕ್ಯಸಾಮ್ಯಕ್ಕೂ ಹೀಗೆಯೇ ಸಿದ್ಧ ಸಂಪ್ರದಾಯಾನುಕರಣವೇ ಕಾರಣವಿರಬಹುದು ಹೊಸ ಕನ್ನಡದ ಕೆಲವು ನಾಟಕಗಳಲ್ಲಿ ಸೂತ್ರಧಾರನು ನಟಿಯನ್ನು "ಅಲಂಕಾರ ಪೂರ್ತಿಯಾಗಿದ್ದರೆ ಇತ್ತ ಬಾ" ಎಂದು ಕರೆಯುವುದೂ, ನಟಿಯು "ಆರ್ಯ, ಯಾವ ಋತುವನ್ನು ಕುರಿತು ಗಾನಮಾಡಲಿ?" ಎಂದು ಕೇಳುವುದೂ ಹೀಗೆಯೇ ಸಂಪ್ರದಾಯಾನುಕಾರಿಯಾಗಿ ಕಂಡುಬರುತ್ತದೆ. ಗಣಪತಿಶಾಸ್ತ್ರಿಗಳೂ ಈ "ವಿಶೇಷ

ಲಕ್ಷಣ "ಗಳಿಗೆ ಆಮೇಲೆ ಪ್ರಾಮುಖ್ಯತೆಯನ್ನು ಕೊಡುತ್ತಿರಲಿಲ್ಲ (ಪುಟ ೭) ಈ ವಿಶೇಷ ಲಕ್ಷಣಗಳಿಂದಲೂ ಅಜ್ಞಾತ ಕರ್ತೃಕತ್ವದಿಂದಲೂ ಅವರು ಈ ನಾಟಕಗಳಿಗೆ ಭಾಸ ಕರ್ತೃಕತ್ವವನ್ನು ನಿಶ್ಚಯಿಸಿದರೆಂದು ಹೇಳುವುದು (ಪು. ೨೧-೨೮) ಅನ್ಯಾಯ ಅವರು ಮೊದಲು ಸ್ವಪ್ನ ವಾಸವದತ್ತವು ಭಾಸನದಿರಬಹುದೆಂದು ಊಹಿಸಿ ಆಮೇಲೆ ಅದಕ್ಕೂ ಅಂಥ ಇತರ ನಾಟಕಗಳಿಗೂ ಇದ್ದ ಕೆಲವು ಸಾಮ್ಯಗಳನ್ನು ವಿಶೇಷ ಲಕ್ಷಣಗಳಾಗಿ ಸೂಚಿಸಿದರು

ನಾಟ್ಯಶಾಸ್ತ್ರವಿರೋಧದಿಂದಲೇ ಭಾಸ ಭರತರ ಪೌರ್ವಾಪರ್ಯ ವನ್ನು ನಿಶ್ಚಯಿಸುವುದು ಸಾಧ್ಯವಲ್ಲ "ನಾಟ್ಯಶಾಸ್ತ್ರ" ಗ್ರಂಥದ ಪ್ರಕೃತ ಸ್ಥಿತಿಯಲ್ಲಿ ಯಾವುದು ಮೂಲವೋ ಯಾವುದು ಪ್ರಕ್ಷಿಪ್ತವೋ ಹೇಳು ವಂತಿಲ್ಲ ಮೂಲ ಪಾಠವಂತೂ ಹೀಗಿದ್ದಿರಲಾರದು ಭರತನು ಯಾವ ದೇಶದವನೋ, ಯಾವ ದೇಶದ ಸಾಹಿತ್ಯ ಸಂಪ್ರದಾಯಗಳನ್ನು ತನ್ನ ಗ್ರಂಥದಲ್ಲಿ ಸೂತ್ರಿಸಿದ್ದಾನೋ, ಭಾಸ ಭರತರು ಒಬ್ಬರ ಗ್ರಂಥವನ್ನು ಮತ್ತೊಬ್ಬರು ನೋಡಿದ್ದರೋ ಇಲ್ಲವೋ, ನೋಡಿರದಿದ್ದರೆ ಏಕೆ ನೋಡಿರಲಿಲ್ಲವೋ ಹೇಳುವುದು ಕಷ್ಟ ಇದರ ಮೇಲೆ ಮಹಾಕವಿಗಳಿಗೆ ಸಂಕೋಲೆ ತೊಡಿಸುವವರಾರು ? ಲಕ್ಷಣಗ್ರಂಥಕಾರರ ನಿರ್ಜೀವ ನಿಯ ಮಕ್ಕೆ ಗೌರವಕೊಟ್ಟು ಅವರನ್ನು ಅನುಸರಿಸಿದರೊಂದು ಹೋಯಿತು, ಇಲ್ಲದಿದ್ದರೆ ಕವಿಗಳನ್ನು ನಿರ್ಬಂಧಪಡಿಸುವುದು ಸಾಧ್ಯವೇ ? ಅವರೇ ತಮ್ಮ ಕೃತಿಬಲದಿಂದ ಮುಂದೆ ಬರುವ ಸೂತ್ರಕಾರರಿಗೆ ಗುರುಗಳಾಗು ವರು "ಅಥ" ಶಬ್ದ ಪ್ರಯೋಗವೂ, ವಸ್ತು ನಿರ್ದೇಶವೂ, "ಮಂಗಳ" ವೆಂದು ಹೇಳುವ ಸೂತ್ರಕಾರರು ಹೀಗೆ ಮಹಾಕವಿ ನಿರ್ಭರರಾಗಿ ತಮ್ಮ ನಿಸ್ಸಹಾಯತೆಯನ್ನು ಒಪ್ಪಿಕೊಳ್ಳುತ್ತಿಲ್ಲವೇ ? ಆದ್ದರಿಂದ ಭರತನ ಅನು ಸರಣ ಪ್ರತಿಸರಣಾಭಾಸಗಳು ಯಾವ ಪಕ್ಷದವರಿಗೂ ವಿಶೇಷ ಕಾರ್ಯ ಕಾರಿಗಳಾಗುವುವೆಂದು ಹೇಳುವಂತಿಲ್ಲ

ಇವುಗಳ ಶೈಲಿಯೆಲ್ಲವೂ ಒಂದೇ ಆಗಿಲ್ಲ, ಸ್ವಪ್ನವಾಸವದತ್ತಾದಿ ಗುಂಪಿನ ಸರಳ ಶೈಲಿಯೇ ಬೇರೆ, ಪಂಚರಾತ್ರಾದಿಗಳ ಕ್ಲಿಷ್ಟಶೈಲಿಯೇ ಬೇರೆ ಎಂದೂ (ಪು ೨೪), ಆದ್ದರಿಂದ ಇವೆಲ್ಲ ಏಕ ಕರ್ತೃಕಗಳಲ್ಲ

ವೆಂದೂ ಪ್ರಾಚೀನವಲ್ಲವೆಂದೂ ಆಕ್ಷೇಪಿಸುತ್ತಾರೆ ಆದರೆ ಒಬ್ಬ ಕವಿಯು ಒಂದೇ ಶೈಲಿಯನ್ನು ಬರೆಯಬೇಕೆಂಬ ನಿಯಮವೇನು ? ಕಾವ್ಯದ ವಸ್ತುವಿಗೂ ರಸಕ್ಕೂ ಕವಿಯ ಬುದ್ಧಿಪರಿಪಾಕಾದಿಗಳಿಗೂ ಅನುರೂಪವಾಗಿ ಭಾಷಾ ಶೈಲಿ ಸರಳತೆಯು ಹೆಚ್ಚು ಕಡಿಮೆಯಾಗ ಬಹುದು ಷೇಕ್ಸ್‌ಪಿಯರ್‌ನ ನಾಟಕಗಳಲ್ಲಿ ಹೀಗೆ ಸ್ಪಷ್ಟವಾದ ಎರಡು ಗುಂಪುಗಳಿವೆ

ಪ್ರಾಕೃತ ಪ್ರಾಚೀನತೆ ಮತ್ತು ಆರ್ಷ ಪ್ರಯೋಗಗಳು ಎಷ್ಟು ಸ್ವಲ್ಪವೆಂದು ಹೇಳಲಿ (ಪು ೨೫-೨೮), ಅವಕ್ಕೆ ಉಪಪತ್ತಿಯನ್ನು ಹೇಳಬೇಕು ಇವೆಲ್ಲವೂ ಶಾಕ್ಯರ ಅಜ್ಞತೆಯಿಂದ (ಪುಟ ೨೯) ಬಂದಿರ ಲಾರವು ಅಜ್ಞತೆಯಿಂದ ಅಕ್ರಮವಾದ 'ಅಬದ್ಧಕ್ಕೆ ಅಪ್ಪಣೆ' ಬಂದೀತೇ ಹೊರತು ಈ ಸಕ್ರಮವಾದ 'ಅಬದ್ಧ'ಗಳು ಬರಲಾರವು ಇದು ಗೌಡ ದೇಶದ ಪ್ರಾಕೃತವಲ್ಲ, ದ್ರಾವಿಡದೇಶದ ಪ್ರಾಕೃತ ಎನ್ನುವುದಕ್ಕೆ (ಪುಟ ೨೫) ಅರ್ಥವಿಲ್ಲ, ಏಕೆಂದರೆ ಸಂಸ್ಕೃತ ಪ್ರಾಕೃತಗಳಿಗೆ ಇರುವ ವ್ಯತ್ಯಾಸಗಳು ಸಂಸ್ಕೃತವನ್ನು ದ್ರಾವಿಡರು ಉಚ್ಚರಿಸಲಾರದೆ ಬಂದ ವ್ಯತ್ಯಾಸಗಳಲ್ಲ ಕೇರಳ ನಾಟಕಗಳಲ್ಲಿ ಇಂಥ ಪ್ರಯೋಗಗಳು ಕಂಡು ಬಂದರೆ ಅವು ಭಾಸ ನಾಟಕದ ಪ್ರಾಕೃತವನ್ನು ಅನುಸರಿಸಿ ಪ್ರಯುಕ್ತ ವಾದವಾಗಿರಬಹುದು ಇನ್ನು ರಾಮಾಯಣ ಭಾರತಾದಿಗಳನ್ನು ಓದಿ ದವರು ಆ ಭಾಷಾರೂಢಿಯಿಂದ ಈ ಆರ್ಷಪ್ರಯೋಗಗಳನ್ನು ಮಾಡಿದ ರೆಂದು ಹೇಳುವುದರಲ್ಲಿ (ಪು. ೨೮) ಪ್ರಮಾಣವೇನು ? ರಾಮಾಯಣ ಭಾರತಾದಿ ಕಾಲದ ಸುಮಾರಿಗೇ ಇವು ಹುಟ್ಟಿದುವೆಂದೂ ಆಗಿನ ಭಾಷೆಯೇ ಇವುಗಳಲ್ಲಿ ಪ್ರತಿಬಿಂಬಿತವಾಗಿದೆಯೆಂದೂ ಏಕೆ ಹೇಳಬಾ ರದು ? ಮೇಲಿನ ವಾದವನ್ನು ಅನುಸರಿಸಿ ರಾಮಾಯಣಕಾಲದಿಂದ ಹಿಡಿದು ಇಂದಿನವರೆಗೆ ಹುಟ್ಟಿರತಕ್ಕ ಮತ್ತು ಮುಂದೆ ಹುಟ್ಟುವ ಸಂಸ್ಕೃತ ಕಾವ್ಯಗಳಲ್ಲೆಲ್ಲಾ ಇಂಥ ಪ್ರಯೋಗಗಳು ಕಂಡುಬರಬೇಕು ! ಏಕೆಂದರೆ, ರಾಮಾಯಣ ಭಾರತಗಳನ್ನು ಓದದ ಸಂಸ್ಕೃತಕವಿ ಯಾರು?

ದಿಲೀಪಾದಿಯಾದ ರಘುವಂಶ ರಾಜರ ಕ್ರಮವು ರಾಮಾಯಣದ ಲ್ಲಿದ್ದಂತೆ ಪ್ರತಿಮಾನಾಟಕದಲ್ಲಿಲ್ಲವೆಂಬುದು (ಪುಟ ೨೫) ನಿಜ, ಆದರೆ

ಇದು ಕಾಳಿದಾಸ ಕಲ್ಪಿತವೆಂದೂ ಪ್ರತಿಮಾನಾಟಕಕರ್ತೃವು ಅದನ್ನು ಅನುಸರಿಸಿದನೆಂದೂ ಹೇಳುವುದು ಹೇಗೆ? ಇವೆರಡಕ್ಕೂ ಒಂದೇ (ಬೃಹತ್ಕಥೆ ?) ಮೂಲವಿರಬಹುದು ಕಾಳಿದಾಸನು ಕಲ್ಪನಸಮರ್ಥನೇ ಹೌದು, ಆದರೂ ತಾನು 'ಪೂರ್ವಸೂರಿ'ಗಳಿಂದ ಉಪಕೃತನಾಗಿದ್ದ ನೆಂದು ಅವನೇ ಹೇಳಿಕೊಂಡಿಲ್ಲವೇ? ಅಶ್ವಘೋಷನ ಬುದ್ಧಚರಿತ ವನ್ನು ಉಪಯೋಗಿಸಿಕೊಂಡನೋ ಬಿಟ್ಟನೋ—ಉಪಯೋಗಿಸಿ ಕೊಂಡನೆಂದೇ ಬಹು ವಿದ್ವಾಂಸರ ಅಭಿಪ್ರಾಯ—ರಾಮಾಯಣ ಶಿವ ಪುರಾಣಾದಿಗಳನ್ನಾದರೂ ಉಪಯೋಗಿಸಿಕೊಂಡಿಲ್ಲವೇ? ಈ 'ಪೂರ್ವ ಸೂರಿ'ಗಳೆಂದರೆ ವಾಲ್ಮೀಕಿಯೆಂದಾಗಲಿ, ಅವನೊಬ್ಬನೇ ಎಂದಾಗಲಿ ಕಾಳಿದಾಸನು ಪ್ರಮಾಣಮಾಡಿಲ್ಲ, ಆದ್ದರಿಂದ ಈ ಮಾತನ್ನು ಹೇಳಿ ದಾಗ ಅವನು ಇನ್ನಾರಾರನ್ನು ಮನಸ್ಸಿನಲ್ಲಿಟ್ಟುಕೊಂಡಿದ್ದನೋ ಯಾರಿಗೆ ಗೊತ್ತು?

ಚಾರುದತ್ತ ಮೃಚ್ಛಕಟಿಕಗಳದ್ದು (ಪು ೩೧, ೩೨) ಒಂದು ದೊಡ್ಡ ಸಮಸ್ಯೆ ಮೃಚ್ಛಕಟಿಕದ ಕಾಲವು ಗೊತ್ತಿಲ್ಲದೆ* ಈ ಸಮ

---

* ಕಾಳಿದಾಸನಿಗಿಂತ ತುಂಬ ಅರ್ವಾಚೀನವಾಗಿರಲಾರದು ಎಂಬುದು ಮೆಗ್ಡಾನಲ್‌ರವರ ಅಭಿಪ್ರಾಯ ("ಇಂಡಿಯಾಸ್ ಪಾಸ್ಟ್", ಪು ೧೦೪) ಶೂದ್ರಕನು 'ಮಿಥ್ಯೆ' ಯೆಂದೂ ಅವನ ಕಾಲವನ್ನು ನಿಶ್ಚಯಿಸುವುದಕ್ಕಾಗುವು ದಿಲ್ಲವೆಂದೂ ಡಾ|| ಕೀತ್‌ರವರ ಅಭಿಪ್ರಾಯ ("ಸಂಸ್ಕೃತ ನಾಟಕ", ಪುಟ ೧೩೧) ಶೂದ್ರಕನೂ ಭಾಸನೂ ಒಂದೇ, ಆದ್ದರಿಂದ ಭಾಸನು ಮೃಚ್ಛಕಟಿಕವನ್ನೂ (ಶೂದ್ರಕ ವಿರಚಿತವೆಂದು ಹೇಳುವ) ಪದ್ಮಪ್ರಾಭೃತಕವನ್ನೂ ಬರೆದಿರಬೇಕು, ಶೂದ್ರಕನು ಬರೆದಿದ್ದನೆಂದು ತಿಳಿಯುವ ವತ್ಸರಾಜಚರಿತವು ಪ್ರತಿಜ್ಞಾಯೌಗಂಧ ರಾಯಣವೇ ಆಗಿರಬಹುದು, ಆತನು ಮಾಲವ ದೇಶಕ್ಕೆ ರಾಜಧಾನಿಯಾದ ವಿದಿಶಾ ನಗರದಲ್ಲಿ ಸುಮಾರು ಕ್ರಿ ಶ ೪೭೫ ರಿಂದ ಕ್ರಿ.ಶ. ೫೦೦ ರವರೆಗೆ ರಾಜ ನಾಗಿ ಆಳಿರಬಹುದು, ಅವನಿಗೆ ಅಗ್ನಿಮಿತ್ರ (ಜ್ವಲನಮಿತ್ರ ಪು ೩) ಎಂಬ ಮತ್ತೊಂದು ಹೆಸರು ಇತ್ತು, ರಾಜನಾದ ಕೂಡಲೆ ಭಾಸನೆಂಬ ಹೆಸರನ್ನು ತ್ಯಜಿಸಿ 'ಶೂದ್ರಕ' ನೆಂಬ ಹೆಸರನ್ನು ತಾಳಿದನು—ಎಂದು ಕೆ ಜಿ, ಶಂಕರ ಎಂಬವರು ಹೇಳುತ್ತಾರೆ (ಅಶುತೋಷ ಮೆಮೋರಿಯಲ್ ವಾಲ್ಯೂಂ, ಭಾಗ II

ಸ್ಯೆಯು ಮತ್ತೂ ತೊಡಕಾಗಿದೆ ಚಾರುದತ್ತವು ಮೃಚ್ಛಕಟಿಕದಿಂದ ಜನ್ಯವಾದುದ್ದೆಂದು ಹೇಳುವ ವಿದ್ವಾಂಸರಿದ್ದರ, ಅಷ್ಟೇ ಸಕಾರಣವಾಗಿ ಮೃಚ್ಛಕಟಿಕವು ಚಾರುದತ್ತನಿಂದ ಹುಟ್ಟಿದ್ದೆಂದು ತಿಳಿಸುವ (ಡಾ|| ಮಾರ್ಗನ್‌ಸ್ಟರ್ನ್, ಕೀತ್ ಮುಂತಾದ) ವಿದ್ವಾಂಸರೂ ಇದ್ದಾರೆ. ಮೃಚ್ಛಕಟಿಕಕಾರನು ಚಾರುದತ್ತದ ಮೊದಲು ನಾಲ್ಕು ಅಂಕಗಳು ಚೆನ್ನಾಗಿದ್ದದ್ದರಿಂದ ಅವನ್ನು ಹಾಗೆಯೇ ಇಟ್ಟುಕೊಂಡು ಅಲ್ಲಿಂದ ಮುಂದಕ್ಕೆ ತಾನು ಏಕೆ ಬರೆದಿರಬಾರದು ?

ಭಾಮಹನ ವಾಕ್ಯಗಳಿಗೂ ಪ್ರತಿಜ್ಞಾಯೌಗಂಧರಾಯಣದ ವಾಕ್ಯಗಳಿಗೂ ಎಷ್ಟೋ ಶಬ್ದಸಾಮ್ಯವಿದೆ ಹೀಗಿರಲು ಅವನು ಇದನ್ನು ವಿಮರ್ಶಿಸಿರದೆ ಬೃಹತ್ಕಥೆಯನ್ನು ವಿಮರ್ಶಿಸಿದ್ದಾನೆಂದು ಹೇಳುವುದು (ಪು ೨೯) ಹೇಗೆ? ಪ್ರತಿಜ್ಞಾಯೌಂಧರಾಯಣದ ಕರ್ತೃವು ಭಾಮಹೋಕ್ತವಾದ ದೋಷವನ್ನು ನಿವಾರಣೆಮಾಡಿಕೊಳ್ಳಲು 'ಪ್ರಯತ್ನಪಟ್ಟಿದ್ದಾನೆ' ಯೇ ಹೊರತು ಆ ಪ್ರಯತ್ನವು ಸಫಲವಾಗಿದೆಯೇ ? ಭಾಮಹನ ಖಂಡನೆಯನ್ನು ನೋಡಿ ಭಾಸನು ಈ ವ್ಯತ್ಯಾಸವನ್ನು ಮಾಡಿದನೆಂಬುದಕ್ಕೆ ಬೇರೆ ಏನಾದರೂ ಆಧಾರವಿದೆಯೇ ? ಅವನಿಗೇ ಔಚಿತ್ಯ ತೋರಿ ಹೀಗೆ ವ್ಯತ್ಯಾಸ ಮಾಡಿರಬಾರದೇನು ? ಕವಿ ಪ್ರತಿಭೆ, ವಿವೇಕ, ಔಚಿತ್ಯ, ಬುದ್ಧಿ, ಕಲ್ಪನೆ ಇವುಗಳಿಗೂ ಸ್ವಲ್ಪ ಅವಕಾಶ ಬೇಡವೇ ?

"ನವಂ ಶರಾವಂ . " ಎಂಬ ಶ್ಲೋಕವು 'ಮನುಗೀತಿ' ಯದಿರಬಹುದು (ಪುಟ ೨೯). ಅದು 'ಪುರಾಣ' ವೂ ಆಗಿರಬಹುದು. ಆದರೆ ಈ 'ಮನುಗೀತಿ' ಯಿಂದಲೇ ಭಾಸನೂ ಆ ಶ್ಲೋಕವನ್ನು ತೆಗೆದುಕೊಂಡಿಲ್ಲವೆಂದಾಗಲಿ, ಇವೆಲ್ಲಕ್ಕೂ ಆಕರವಾದ, ಗ್ರಂಥ ಬೇರೊಂದಿಲ್ಲವೆಂದಾಗಲಿ ಗೊತ್ತಾಗುವತನಕ ಭಾಸ ಕೌಟಿಲ್ಯರ ಪೌರ್ವಾಪರ್ಯ ವಿಚಾರವನ್ನು ನಿರ್ಧರಿಸುವುದು ಹೇಗೆ? ಅರ್ಥಶಾಸ್ತ್ರ ಗ್ರಂಥಕಾರನು

---

ಪು. ೫೮—೬೪). ಇದಕ್ಕೆ ಅವರು ಕೊಟ್ಟಿರುವ ಕಾರಣಗಳು, ಅನೇಕವಾಗಿದ್ದರೂ, ಮನಸ್ಸಿಗೆ ಒಪ್ಪುವಹಾಗಿಲ್ಲ. ಭಾಸನು, ಭಾಸ ಅಗ್ನಿಮಿತ್ರ ಎಂಬ ಹೆಸರುಗಳನ್ನು ಬಿಟ್ಟು 'ಶೂದ್ರಕ' ಎಂಬ ಹೆಸರನ್ನು ಏಕೆ ತಾಳಬೇಕು?

ಕ್ರಿಸ್ತಪೂರ್ವದವನು ಎಂದೇ ಎಲ್ಲರೂ ನಂಬುವುದಿಲ್ಲ ಅವನನ್ನು ಕ್ರಿ ಶ ನಾಲ್ಕು ಐದನೆಯ ಶತಮಾನದವರೆಗೂ ಎಳೆದುಕೊಂಡು ಬರುತ್ತಾರೆ (ಕೌಟಿಲ್ಯನು ಕ್ರಿಸ್ತಪೂರ್ವದವನಾಗಿದ್ದು ಅವನಿಂದ ಈ ಶ್ಲೋಕವು ತೆಗೆದು ಕೊಂಡದ್ದಾದರೂ, ಅದರಿಂದ ಭಾಸ ಕರ್ತೃತ್ವಕ್ಕೂ ಅವನು ಕ್ರಿ ಶ ಸುಮಾರು ೩೦೦ ರಲ್ಲಿದ್ದನೆಂದು ಹೇಳುವುದಕ್ಕೂ ಏನೂ ಬಾಧಕವಿಲ್ಲ )

ಅಭಿನವಗುಪ್ತನಿಂದ ನಿರ್ದಿಷ್ಟವಾದ " ಕ್ರೀಡೆ " ಯು (ಪುಟ ೩೦) ಪದ್ಮಾವತಿಯ ಚೆಂಡಾಟವಾಗಿರಬಹುದು ಆದ್ದರಿಂದ ಅಭಿನವಗುಪ್ತನು ಹೇಳುವ ಸ್ವಪ್ನವಾಸವದತ್ತವು ಬೇರೆ ಆಗಿರಬೇಕೆಂಬ ನಿರ್ಬಂಧವೇನೂ ಇಲ್ಲ

ಪ್ರತಿಮಾ ನಾಟಕದ ಪ್ರತಿಮಾಗೃಹಕ್ಕೆ ಮಹಾಬಲಿಪುರದ ಕಲ್ಲು ಗುಡಿಗಳೇ (ಪುಟ ೩೨) ಆಧಾರವಾಗಬೇಕಾಗಿಲ್ಲ ಉತ್ತರ ದೇಶದಲ್ಲಿ ಕನಿಷ್ಕ ಮುಂತಾದ ರಾಜರ ಬಹು ಪ್ರಾಚೀನ ಪ್ರತಿಮೆಗಳು ಕಂಡು ಬರುತ್ತವೆ ದಕ್ಷಿಣ ದೇಶದಲ್ಲಿಯೂ ಕ್ರಿಸ್ತಶಕದ ಆದಿ ಶತಮಾನಗಳಿಂದ ಪ್ರತಿಮೆಗಳೂ ಪ್ರತಿಮಾಗೃಹಗಳೂ ಸಾಧಾರಣವಾಗಿ ಕಂಡುಬರುತ್ತವೆ (ಪುಟ ೪೨) ಅಲ್ಲದೆ ಮಹಾಬಲಿಪುರದ ದೇವಾಲಯಗಳು ಆರನೆಯ ಶತಮಾನದಲ್ಲಿ ತಟ್ಟನೆ ಆಕಾಶದಿಂದ ಘುಮ್ಮಿಕ್ಕಿರಲಾರವು ಅದಕ್ಕೆ ಮೇಲ್ಪಂಕ್ತಿಗಳಾಗಿ ಕಲ್ಲಿನವಲ್ಲದಿದ್ದರೆ ಮಣ್ಣಿನವಾದರೂ ಮಾದರಿ ಗಳಿದ್ದಿರಬೇಕು ಪ್ರತಿಮಾಗೃಹವನ್ನು ಕಲ್ಪಿಸಿದಾಗ ಅದರ ಕರ್ತೃವಿನ ದೃಷ್ಟಿಯಲ್ಲಿ ಯಾವ ಕಟ್ಟಡವಿತ್ತೋ ಹೇಗೆ ಹೇಳುವುದು? ಇದರಮೇಲೆ, ಕಾಳಿದಾಸನು ಸಂದೇಶವಾಹಿಯಾದಿ ಮೇಘವನ್ನು ಕಲ್ಪಿಸಿದಂತೆ, ಕವಿಯು ಇದನ್ನೂ ಏಕೆ ಕಲ್ಪಿಸಿರಬಾರದು? ಮೃಚ್ಛಕಟಿಕದಲ್ಲಿ ಆಟದ ಗಾಡಿ ಹೇಗೋ ಪ್ರತಿಮಾನಾಟಕದಲ್ಲಿ ಹಾಗೆ ಈ ಪ್ರತಿಮಾಗೃಹವು ಕಾವ್ಯದ ಹೃದಯಸ್ಥಾನದಲ್ಲಿದ್ದು ಅದರ ಪಾತ್ರ ರಸಪರಿಪೋಷಕ್ಕೆ ಕಾರಣವಾಗಿದೆ ಕಲ್ಲುಮಣ್ಣುಗಳ ಕಟ್ಟಡದಿಂದ ರಸಪ್ರವಾಹವನ್ನು ತೆಗೆಯಬಲ್ಲವನಿಗೆ ಅದನ್ನು ಪ್ರತಿಭೆಯಿಂದ ಕಟ್ಟುವುದು ಅಸಾಧ್ಯವೇ ? ದೇವಾಲಯಗಳೂ ಧರ್ಮಮಂದಿರಗಳೂ ನಮ್ಮ ದೇಶದಲ್ಲಿ ಯಾವಾಗ

ಇಲ್ಲ? ಆದರೆ ಅವುಗಳನ್ನು ಎಷ್ಟು ಜನರು ಹೀಗೆ ಉಪಯೋಗಿಸಿಕೊಂಡು ಕಾವ್ಯವನ್ನು ಕಟ್ಟಿದ್ದಾರೆ?

### ಭಾಸನು ದಕ್ಷಿಣದೇಶದವನೇ?

ಈ ಗ್ರಂಥಗಳು ಕೇರಳದಲ್ಲಿ ಮಾತ್ರ ಸಿಕ್ಕಿ ಅಲ್ಲಿಯೇ ವಿಶೇಷವಾಗಿ ಪ್ರಚುರವಾಗಿದ್ದ ಸಂಗತಿ,* ಪಟ್ಟಾಭಿಷೇಕ ಕಾಲದಲ್ಲಿ ಪ್ರತಿಮಾನಾಟಕದ ರಾಮನು ಸೀತೆಯ ಜೊತೆಯಲ್ಲಿ ಇಲ್ಲದಿರುವಿಕೆ (ಪುಟ ೩೭), "ಸಂಬಂಧ", "ವಿಚಾರ" ಮುಂತಾದ ಶಬ್ದಗಳ ಅರ್ಥ (ಪುಟ ೩೧), ಸೋದರಮಾವನಿಗೆ ಜೋಡಿ ಮರ್ಯಾದೆ (ಪುಟ ೩೧)—ಇವೆಲ್ಲಾ ಈ ಗ್ರಂಥದ ಕರ್ತೃವು ಕೇರಳ ದೇಶೀಯನೆಂದು ಹೇಳುವುದಕ್ಕೆ ಸಾಧನಗಳಾಗಿ ಭಾವಿಸಲ್ಪಟ್ಟಿವೆ. ಆದರೆ, ಇವಿಷ್ಟೇ ಈ ಅಂಶವನ್ನು ನಿಶ್ಚಯ ಮಾಡಲಾರವು ಏಕೆಂದರೆ —

ಕೇರಳದೇಶದ ಭೂಸ್ವರೂಪದಿಂದ ಅಲ್ಲಿ ಯಾವಾಗಲೂ ಹೊರ ಶತ್ರುಗಳ ಕಾಟ ಕಡಮೆ ಆದ್ದರಿಂದ ಮಿಕ್ಕ ಕಡೆಗಳಲ್ಲಿ ನಷ್ಟವಾಗಿರಬಹುದಾದ ಪ್ರಾಚೀನ ಗ್ರಂಥಗಳು ಅಲ್ಲಿ ಇಂದೂ ಸುರಕ್ಷಿತವಾಗಿರಬಹುದು ಹಳೆಯ ಸಂಪ್ರದಾಯಗಳು ಅಲ್ಲಿ ಪ್ರಬಲವಾಗಿರುವುದಕ್ಕೂ ಇದೇ ಕಾರಣ. ಪ್ರತಿಮಾ ನಾಟಕದ ಪಟ್ಟಾಭಿಷೇಕ ಪ್ರಸ್ತಾಪದಲ್ಲಿ ಕವಿಯು ಯಾವ ಕಾಲವನ್ನು ಕುರಿತು ಹೇಳುತ್ತಿದ್ದಾನೋ ಗೊತ್ತಾಗುವುದಿಲ್ಲ ರಾಮನು ತನಗೆ ಪಟ್ಟಾಭಿಷೇಕವಾಗದ ಸಂಗತಿಯನ್ನು ಸೀತೆಯ ಅಂತಃಪುರಕ್ಕೆ ಬಂದು ತಾನೇ ಹೇಳಿದ್ದು ನಿಜ ಆದರೆ ಪಟ್ಟಾಭಿಷೇಕವೇ ನಡೆದಿದ್ದರೆ, ಆ ಕಾಲಕ್ಕೆ ಸರಿಯಾಗಿ ಸೀತೆಗೆ ಹೇಳಿ ಕಳುಹಿಸುತ್ತಿದ್ದರೋ ಏನೋ ಯಾರು ಬಲ್ಲರು? ಇದು ಅಷ್ಟು ತೃಪ್ತಿಕರವಾದ ಸಮಾಧಾನವಲ್ಲದಿರಬಹುದು; ಆದರೆ ಹೀಗೆ ಕೊಕ್ಕೆ ಹಾಕುವುದಕ್ಕೆ ಹೋದರೆ ಈ ಸನ್ನಿವೇಶದಲ್ಲಿ ಸಮಾಧಾನ ಹೇಳಲಾರದ ಬಹು ತೊಂದರೆಗಳು ಬರುತ್ತವೆ. ಉದಾಹರಣೆ—ಕೇರಳದೇಶದಲ್ಲಿ ಪಟ್ಟಾಭಿಷೇಕ

* ಮದರಾಸ್ ಓರಿಯಂಟಲ್ ಲೈಬ್ರರಿಯಲ್ಲಿರುವ ಆಶ್ಚರ್ಯ ಚೂಡಾಮಣಿ, ಅಭಿಷೇಕ ನಾಟಕ, ಪ್ರತಿಮಾನಾಟಕಗಳ ಶ್ರೀತಾಳ ಪ್ರತಿಯೂ ಮಲಬಾರ್ ಪ್ರಾಂತದ್ದೆಂದು ತಿಳಿದು ಬರುತ್ತದೆ (ಆಶ್ಚ. ಚೂಡಾ. ಉಪೋ ಪುಟ ೧೯).

ವಾಗುವ ಮುಹೂರ್ತದವರೆಗೂ ಹೆಂಡತಿಗೆ (ಸೀತೆಗೆ ಆದಂತೆ) ಆ ವರ್ತಮಾನವೇ ತಿಳಿಯುವುದಿಲ್ಲವೇ ? ಇಂಥ ಸಂಗತಿಗಳಿಗೆಲ್ಲಾ "ನಾಟ್ಯಧರ್ಮ"ವೆಂದು ಉಪಪತ್ತಿಯನ್ನು ಹೇಳಬೇಕೆಂದು ತೋರುತ್ತದೆ. "ಸಂಬಂಧ" "ವಿಚಾರ" ಮೊದಲಾದ ಶಬ್ದಗಳಿಗೆ ಈಗ ಮಲೆಯಾಳದಲ್ಲಿ ಈ ಅರ್ಥಗಳು (ಪುಟ ೩೧) ಬಂದಿದ್ದರೂ ಅವಕ್ಕೆ ಸಂಸ್ಕೃತದಲ್ಲಿಯೂ ಈ ಅರ್ಥಗಳ ಛಾಯೆಯಾದರೂ ಒಂದಾನೊಂದು ಕಾಲದಲ್ಲಿ ಇದ್ದೇ ಇರಬೇಕು. ಅರ್ಥವು ಅಸಂಬದ್ಧವಾಗಿ ಎಂದಿಗೂ ಬದಲಾಯಿಸುವುದಿಲ್ಲ ಆದ್ದರಿಂದಲೇ ಕನ್ನಡದಲ್ಲಿಯೂ ಈ ಶಬ್ದಗಳಿಗೆ ಈ ಅರ್ಥಗಳುಂಟು. ಇತರ ಸಂಸ್ಕೃತ ಕಾವ್ಯಗಳಲ್ಲಿಯೂ* ಈ ಅರ್ಥಗಳು ಕಂಡುಬರುತ್ತವೆ. ಬೋಧಾಯನ ಆಪಸ್ತಂಬರ ಕಾಲದಿಂದಲೂ ಸೋದರಮಾವಂದಿರಿಗೆ ಹೆಚ್ಚು ಮರ್ಯಾದೆಯು ಸಲ್ಲಬೇಕೆಂದು ಧರ್ಮಶಾಸ್ತ್ರಗಳಲ್ಲಿ† ವಿಹಿತವಾಗಿದೆ ಆದ್ದರಿಂದ ಜೋಡಿ ಮರ್ಯಾದೆಯು "ಮರುಮಕ್ಕಟ್ಟಾಯಂ" ಪದ್ಧತಿಗೇ (ಪುಟ ೩೧) ಬಂದದ್ದಲ್ಲ

ತಿರುಚುನಾಪಳ್ಳಿ ದೇಶೀಯ ಪಾಠಶಾಲೆಯ ಸಂಸ್ಕೃತಾಧ್ಯಾಪಕರಾದ ವಾಸುದೇವಶರ್ಮರು ದಕ್ಷಿಣದೇಶದ ಪ್ರಾಚೀನ ಸಾಮಾಜಿಕ ಮತ್ತು ಧಾರ್ಮಿಕ ಚರಿತ್ರೆಯ ಆಧಾರದಿಂದ, ಮೇಲೆ ಸೂಚಿತವಾದ ಅಭಿಪ್ರಾಯವನ್ನು ಅನುಮೋದಿಸಿ, ಈ ಕವಿಯು ತಮಿಳು—ಚೇರದೇಶದವನಾಗಿರಬೇಕೆಂದೂ, ಸುಮಾರು "ಶಿಲಪ್ಪದಿಕಾರಂ" ಕಾವ್ಯಕಾಲದ (ಎಂದರೆ ಕ್ರಿ ಶ ಎರಡನೆಯ ಶತಮಾನ ಮಧ್ಯದ)ವನಾಗಿರಬೇಕೆಂದೂ ಹೇಳುತ್ತಾರೆ ‡ ಹೇಗೆಂದರೆ—ಶಿಲಪ್ಪದಿಕಾರದ ಕಾಲಕ್ಕೆ ದಕ್ಷಿಣ ದೇಶದಲ್ಲಿ—(೧) ಶ್ರಮಣರು ಪ್ರಬಲರಾಗುತ್ತಿದ್ದರು. (೨) ಬಲ

* ಕುಮಾರಸಂಭವ VI, ೨೯, ೩೦; ಉತ್ತರರಾಮಚರಿತ, I, ೧೭, ರಘುವಂಶ, VII, ಇತ್ಯಾದಿ

† ಮನು, II, ೧೩೦, ಬೋಧಾಯನ I, ೩. ೪೫, ಆಪಸ್ತಂಬ I, ೧೪, ೧೧, ವಶಿಷ್ಠ XI, ೨, XIII ೪೧, ಗೌತಮ V ೨೭, ಇತ್ಯಾದಿ.

‡ ಹಿಂದೂ ಪತ್ರಿಕೆ, ೯-೨-೧೯೨೭.

ದೇವ ಪೂಜೆಯು ಹೆಚ್ಚಾಗಿತ್ತು (೩) ದೊಡ್ಡ ದೊಡ್ಡ ಬೌದ್ಧ ತಮಿಳು ಗ್ರಂಥಗಳು ರಚಿತವಾದುವು, ಬೃಹತ್ಕಥೆ ಮುಂತಾದ ಸಂಸ್ಕೃತ ಪ್ರಾಕೃತ ಗ್ರಂಥಗಳು ತಮಿಳಿಗೆ ಪರಿವರ್ತಿತವಾದುವು. ಈ ಅಂಶಗಳೇ ಭಾಸ ನಾಟಕಗಳಿಂದಲೂ ತಿಳಿದುಬರುತ್ತವೆ ಪ್ರತಿಜ್ಞಾಯೌಗಂಧರಾಯಣದಲ್ಲಿ (ಅಂಕ ೩) ಬರುವ ಶ್ರಮಣ ಮತ್ತು ವಿದೂಷಕರ ವೃತ್ತಾಂತವು ಶ್ರಮಣ ಪ್ರಾಬಲ್ಯಕ್ಕೆ ಉದಾಹರಣೆ * ಮತ್ತವಿಲಾಸ ಮತ್ತು ಭಗವದಜ್ಜುಕೀಯಗಳ ಕಾಲಕ್ಕೆ ಜೈನರು ಕ್ಷೀಣರಾಗಿ ಶ್ರಮಣರು ಗೌರವವನ್ನು ಕಳೆದುಕೊಂಡಿದ್ದರು ಸ್ವಪ್ನವಾಸವದತ್ತದಲ್ಲಿ ಬರುವ (ಪುಟ ೨೭) 'ಅಧಿಷ್ಠಾನ' ಶಬ್ದವು 'ವ್ರತ' ಎಂಬ ಅರ್ಥದಲ್ಲಿ ಉಪಯುಕ್ತವಾದ ಬೌದ್ಧ ಪಾರಿಭಾಷಿಕ ಶಬ್ದವಾಗಿದೆ ಶಿಲಪ್ಪದಿಕಾರವು ದೇವಸ್ಥಾನಗಳ ಹೆಸರು ಹೇಳಬೇಕಾದ ಸಂದರ್ಭಗಳಲ್ಲೆಲ್ಲಾ ಬಲದೇವ ದೇವಸ್ಥಾನಗಳನ್ನು ಮುಖ್ಯವಾಗಿ ಹೇಳುತ್ತದೆ † ಅಲ್ಲದೆ ಬಲದೇವನು ತಮಿಳು ನಾಟಕಗಳಲ್ಲಿ ರಂಗಾಧಿದೇವತೆಯಾಗಿದ್ದಂತೆ ತೋರುತ್ತದೆ ‡ ಭಾಸನು ಸ್ವಪ್ನವಾಸವದತ್ತದ ಮಂಗಳ ಶ್ಲೋಕದಲ್ಲಿ ಬಲದೇವನನ್ನು ಸ್ತೋತ್ರ ಮಾಡಿರುವುದನ್ನೂ ಸಾರಸಪಕ್ಷಿಗಳ ಸಾಲನ್ನು (ಅಂಕ ೪,

---

* ಆದರೆ ಚಾರುದತ್ತದಲ್ಲಿ ಶ್ರಮಣರಿಗೆ ಈ ಗೌರವವಿಲ್ಲ ಆದ್ದರಿಂದ ಅದು ಎಂಟನೆಯ ಶತಮಾನದ್ದೆಂದೂ, ಮೃಚ್ಛಕಟಿಕದಿಂದ ಮಾಡಿದ ಸಂಗ್ರಹವೆಂದೂ ಕೆ. ಜಿ ಶಂಕರರ ಅಭಿಪ್ರಾಯ (೩೬ ನೆಯ ಪುಟವನ್ನು ನೋಡಿ).

† ಪುಕರ್ ವೆಳ್ಳೈ ನಾಕರ್ ತಂ ಕೊಟ್ಟಂ (ಶಿಲ IX, ೧೦)
ಮೇೞಿವಲನುಯರ್ತ್ತ ವೆಳ್ಳೈ ನಕರಮುಂ (ಶಿಲ XIV, ೯)
ವಾಲ್ವಳೈ ಮೇನಿವಾಲಿಯೋನ್ ಕೋಯಿಲುಂ (ಶಿಲ. V, ೧೭೧).

‡ ಇನಿ ನಾಟಕತ್ತಮಿೞಿಲ್ ದೇವಪಾಣೀವರುಂಗಾಲ್ ಪೆರುಂದೇವಪಾಣೀ ಬಲದೇವರ್ಕೈಯುಂ, ಚಿರುದೇವಪಾಣೀ ವರುಣಪ್ಪೂತರ್ಕೈಯುಂ ಮೂವಡಿ ಮುಕ್ಕಾಲ್ ವೆಣ್ಬಾವಾಲ್ ತುದಿಕ್ಕಿನ್ಱಿ, ಅವರಣಿಯುಂ ತಾರುಂ ಆಡೈಯುಂ ನಿಱನುಂ ಕೊಡಿಯುಂ ತುದಿತ್ತು ಅವರಾಲ್ ಪೆಱು ವೇಣ್ಡುವನವುಂ ತುದಿಕ್ಕಪ್ಪಡುಂ (ಶಿಲ. VI, ೩೫ ರ ಮೇಲೆ ಅಡಿಯಾರ್ಕ್ಕುನಲ್ಲಾರ ವ್ಯಾಖ್ಯಾನ).

ಪುಟ ೬೦) ಬಲದೇವನ ತೋಳಿನಂತೆ ಸುಂದರವಾಗಿದೆಯೆಂದು ವರ್ಣಿಸಿರುವುದನ್ನೂ ನೋಡಿದರೆ ಭಾಸನು ತನ್ನ ಕಾಲದೇಶಗಳಲ್ಲಿ ಬಲರಾಮನಿಗೆ ಇದ್ದ ಪ್ರಾಶಸ್ತ್ಯವನ್ನು ಪ್ರತಿಫಲಿಸುತ್ತಿರುವಂತೆ ತೋರುತ್ತದೆ

ಈ ಕಾಲದಲ್ಲಿಯೇ ಗುಣಾಢ್ಯನ ಬೃಹತ್ಕಥೆಯು (ಪೆರುಂಕತ್ತೈ ಎಂದು) ತಮಿಳಿಗೆ ಪರಿವರ್ತಿತವಾಗಿ ವತ್ಸರಾಜನಾದ ಉದಯನನ ವೃತ್ತಾಂತವು ದಕ್ಷಿಣದೇಶದಲ್ಲೆಲ್ಲಾ ಪ್ರಚಾರಕ್ಕೆ ಬರುತ್ತಿತ್ತು 'ಮಣಿಮೇಕಲೆ' ಯ* ಕೆಲವು ವಾಕ್ಯಗಳು ಪ್ರತಿಜ್ಞಾಯೌಗಂಧರಾಯಣವನ್ನೇ ದೃಷ್ಟಿಯಲ್ಲಿಟ್ಟುಕೊಂಡಿರುವಂತಿದೆ ತನ್ನ ಕಾಲದಲ್ಲಿ ಎಲ್ಲರಿಗೂ ಬೇಕಾಗಿದ್ದ ವತ್ಸನ ಕಥೆಯನ್ನು ಕವಿಯು ಪ್ರತಿಪಾದಿಸುವುದು ಸ್ವಾಭಾವಿಕವೇ ಆಗಿದೆ

ಬಹು ಪ್ರಾಚೀನ ಕಾಲದಿಂದಲೂ ದಕ್ಷಿಣ ದೇಶದಲ್ಲಿ ಗತಿಸಿದವರ ಜ್ಞಾಪಕಾರ್ಥವಾಗಿ ಪ್ರತಿಮೆಗಳನ್ನು ಸ್ಥಾಪಿಸುತ್ತಿದ್ದರು 'ತೋಲಕಾಪ್ಪಿಯ'ದಲ್ಲಿ (ಸೂತ್ರ ೬೦) ಈ ಪದ್ಧತಿಯು ವಿಹಿತವಾಗಿದೆ ಮೊದಮೊದಲು ಈ ಗೌರವವು ಯುದ್ಧದಲ್ಲಿ ಕಾದಿ ಮಡಿದ ವೀರರಿಗೆ ಮಾತ್ರ ಸಲ್ಲುತ್ತಿತ್ತು ಆಮೇಲೆ ಮನೆಯಲ್ಲಿಯೇ ಇದ್ದು ತಿಂದು ಮಲಗಿ ನರಳಿ ಸತ್ತುಹೋದ ನಾಯಕರಿಗೂ ಬರುವಂತಾಯಿತು ಪ್ರತಿಮಾನಾಟಕದ ದಶರಥ ಪ್ರತಿಮಾ ಗೃಹವು ಈ ಸಂಪ್ರದಾಯವನ್ನನುಸರಿಸಿ ರಚಿತವಾದದ್ದು ಇಂಥ ಪ್ರತಿಮೆಗಳಿಗೆ ಪೂಜೆಯು ನಡೆಯುತ್ತಿತ್ತು. (ಅಹನಾನೂರು, ೩೫, ೬೭, ಪುರನಾನೂರು, ೨೬೩, ೨೨೧, ೨೨೩, ೨೩೨, ೨೬೪, ಇತ್ಯಾದಿ) ಪ್ರತಿಮಾಗೃಹವು ದೇವಸ್ಥಾನವೆಂದು ಭರತನೂ ಭ್ರಾಂತಿಪಡುತ್ತಾನೆ ಈ ಗೃಹಗಳಿಗೆ ಪ್ರಾಚೀನ ಗ್ರಂಥಗಳಲ್ಲಿ 'ಕೊಟ್ಟಂ' ಎಂದು ಹೆಸರು 'ಕೊಟ್ಟಂ' ಎಂಬುದು ಒಂದು

---

* ಕೋಡಿಕ್ಕೋಶಂಬಿ ಕ್ಕೋಮಕನಾಕಿಯ ವಡಿತ್ತೇರ್ತಾನೈ ವತ್ತವನ್ ಱನ್ನೈ ವಂಚನ್ ಚೆಯ್ದುೞಿ ವಾನ್ರಟ್ಟೈ ವಿಡೀಯ ವುಂಜ್ಜೈಯಿಲ್ ತೋನಿಯ ಱಿ ಯೂಕಿ ಯನ್ನಣನ್ ವುರುವುಕಕ್ಕೊಳ್ಳಾ ವುೞುನೋಯ್ ಕಂಡು ಪರಿವೞು ಮಾಕ್ಕನಿಲ್ ತಾಂ ಪರಿವೆಯ್ದಿ (ಮಣಿಮೇಕಲೈ, XV, ೬೧–೬೨).

ತರದ ದೇವಾಲಯ ಆದ್ದರಿಂದ ಪ್ರತಿಮಾಗೃಹಗಳೂ ದೇವಾಲಯದ ಮಾದರಿಯಲ್ಲಿಯೇ ಕಟ್ಟಲ್ಪಡುತ್ತಿದ್ದುವೆಂದು ತೋರುತ್ತದೆ *

ಆದ್ದರಿಂದ ಭಾಸನು ತಮಿಳು–ಚೇರದೇಶದಲ್ಲಿ ಹುಟ್ಟಿ ಶಿಲಪ್ಪದಿಕಾರ ಕಾವ್ಯದ ಕಾಲದ ಸುಮಾರಿನಲ್ಲಿ ಜೀವಿಸಿದ್ದನೆಂದು ತೋರುತ್ತದೆ ಈ ನಾಟಕಗಳು "ಶಾಕ್ಯ"ರ ನಾಟಕಗಳಾದ ಮಾತ್ರದಿಂದಲೇ ಇವು ಏಳು ಅಥವಾ ಎಂಟನೆಯ ಶತಮಾನದವಾಗಿರಬೇಕೆಂಬ ನಿರ್ಬಂಧವೇನೂ ಇಲ್ಲ ಏಕೆಂದರೆ ಶಾಕ್ಕಿಯರ ಸಂಸ್ಥೆಯು ಏಳು ಅಥವಾ ಎಂಟನೆಯ ಶತಮಾನದ್ದೇನೂ ಅಲ್ಲ—ಬಹು ಪ್ರಾಚೀನವಾದದ್ದು ಕುಟ್ಟಿಚ್ಚಾಕ್ಕಿಯನ್ ಎಂಬ ಶಾಕ್ಯನು ಶೆಂಗುಟ್ಟುವನ್ ಎಂಬ ಚೇರರಾಜನ ಮುಂದೆ ನಾಟಕವನ್ನು ಪ್ರದರ್ಶಿಸಿದಂತೆ ಶಿಲಪ್ಪದಿಕಾರದಿಂದ ತಿಳಿದುಬರುತ್ತದೆ (XXVIII, ೭೭-೭೭)

ಆದರೆ "ಶಿಲಪ್ಪದಿಕಾರ"ವು ಜೈನಗ್ರಂಥ ಜೈನರಲ್ಲಿ ಬಲದೇವ ವಾಸುದೇವರು ಕಾರಣಪುರುಷರೆಂದು ಪೂಜ್ಯರಾಗಿದ್ದಾರೆ ರಾಮಲಕ್ಷ್ಮಣರಿಗೆ ಈ ಹೆಸರುಗಳಿರುವುದು ಪಂಪರಾಮಾಯಣವನ್ನು ಓದಿದವರೆಲ್ಲರಿಗೂ ತಿಳಿದ ವಿಷಯ ಇದರಿಂದ ಶಿಲಪ್ಪದಿಕಾರದ ಕಾಲದಲ್ಲಿ ಜೈನಪ್ರಾಬಲ್ಯದಿಂದ (ಬಲ)ರಾಮನ ಪೂಜೆಯು ಹೆಚ್ಚಾಗಿತ್ತೆಂದು ಹೇಳಿದ ಹಾಗಾಯಿತು ಬೃಹತ್ಕಥೆಯು ಆ ಕಾಲದಲ್ಲಿಯೇ ತಮಿಳಿಗೆ ಭಾಷಾಂತರವಾಯಿತೆಂದು ಇಟ್ಟುಕೊಳ್ಳೋಣ, ಆದರೆ ಭಾಷಾಂತರವು ಇನ್ನೂ ಬಿಸಿಬಿಸಿಯಾಗಿದ್ದಾಗಲೇ ಕವಿಯು ಅದನ್ನು ಉಪಯೋಗಿಸಿಕೊಂಡನೆಂದು ಹೇಗೆ ಹೇಳುವುದು? ಬೃಹತ್ಕಥೆಯ ವಸ್ತುವನ್ನು ತೆಗೆದುಕೊಂಡು ಇವೊತ್ತು ಯಾರಾದರೂ ಒಂದು ಕಾವ್ಯವನ್ನು ಬರೆಯಬಾರದೇನು? ಅಲ್ಲದೆ ಆಗ ಜೈನ ಪ್ರಾಬಲ್ಯವು ದಕ್ಷಿಣದೇಶದಲ್ಲೆಲ್ಲಾ ಇತ್ತು. ಜೈನಕಾಲವು ತಮಿಳು ಸಾಹಿತ್ಯದಲ್ಲಿ ಕಳೆದುಹೋದನಂತರ ಕನ್ನಡ ಸಾಹಿತ್ಯದಲ್ಲಿ ಆರಂಭವಾಗಿ (?) ಎಷ್ಟೋ ಶತಮಾನಗಳು ನಡೆದುಬಂದಿತು. ಆದ್ದರಿಂದ, ಸ್ವಪ್ನವಾಸವದತ್ತಾದಿ ಗ್ರಂಥಗಳು ಜೈನ ಪ್ರಾಬಲ್ಯಕಾಲದಲ್ಲಿ ಹುಟ್ಟಿದುವೆಂದು ಬೇಕಾದರೆ ಹೇಳಬಹುದು, ಅವುಗಳ ಕರ್ತೃವು

* ಶಿಲಪ್ಪದಿಕಾರಂ IX, ೨೦, ಅಹನಾಸೂರು, ೬೭

ತಮಿಳು ಚೇರದೇಶದವನೆಂದು ಹೇಳಲು (ಪುಟ ೪೦) ಆಧಾರ ಸಾಲದು, ಅಂತೂ ದಕ್ಷಿಣದೇಶದವನಾಗಿದ್ದರೂ ಇರಬಹುದು * ಇನ್ನು ಮುಂದೆ ನಡೆಯುವ ಸಂಶೋಧನೆಯಿಂದ ಇದು ನಿರ್ಧಾರಿತವಾಗಬೇಕು

## ಫಲಿತಾಂಶ

ಇಷ್ಟು ವಿಚಾರಮಾಡಿದರೂ ಸಂಭವವಾಗಿರಬಹುದಾದ ಒಂದೆರಡು ಸಂಗತಿಗಳನ್ನು ಊಹಿಸಬಹುದೇ ಹೊರತು ಯಾವುದನ್ನೂ ನಿರ್ಧರ ಮಾಡುವ ಹಾಗಾಗಲಿಲ್ಲ ಕಾಳಿದಾಸನಿಗಿಂತ ಹಿಂದೆ ಭಾಸನೆಂಬ ನಾಟಕ ಕರ್ತನಿದ್ದನೆಂಬ ಸಂಗತಿಯೂ ಅವನು ಸ್ವಪ್ನವಾಸವದತ್ತವೆಂಬ ನಾಟಕವನ್ನು ಬರೆದಿದ್ದನೆಂಬ ಸಂಗತಿಯೂ ಗಟ್ಟಿ ಇವಕ್ಕೆ ಕಾಳಿದಾಸನ ಮತ್ತು ರಾಜಶೇಖರನ ವಾಕ್ಯಗಳು ಪ್ರಮಾಣಗಳಾಗಿವೆ ಇವುಗಳನ್ನು ಇಟ್ಟುಕೊಂಡು, ಅಲ್ಲಿಂದ ಮುಂದೆ, ತಾವು ಕಂಡುಹಿಡಿದ "ಸ್ವಪ್ನವಾಸವದತ್ತ"ವು ಈ ಭಾಸನದೇ ಇರಬೇಕೆಂದೂ ಅದರ ಸಾದೃಶ್ಯವು ಹದಿಮೂರು ನಾಟಕಗಳಲ್ಲಿಯೂ ಕಂಡುಬರುವುದರಿಂದ ಇವೆಲ್ಲವೂ ಭಾಸಕರ್ತೃಕವೇ ಆಗಿರಬೇಕೆಂದೂ ಗಣಪತಿಶಾಸ್ತ್ರಿಗಳು ಊಹಿಸಿದರು ಅವರು ಕೊಟ್ಟಿರುವ ಇತರ ಸಾಕ್ಷ್ಯಗಳು ಅಷ್ಟು ಪ್ರಯೋಜನಕ್ಕೆ ಬರುವುದಿಲ್ಲ ವಂದ್ಯಘಟೀಯ ಸರ್ವಾನಂದನು ಅಮರಕೋಶ ಟೀಕೆಯಲ್ಲಿ ಸ್ವಪ್ನವಾಸವದತ್ತದ ಹೆಸರು ಹೇಳಿದ್ದಾನೆ,—ಆದರೆ ಅದು ಯಾರದ್ದೆಂದು ಹೇಳಿಲ್ಲ. ಅಭಿನವಗುಪ್ತನು ಭರತಶಾಸ್ತ್ರವ್ಯಾಖ್ಯಾನದಲ್ಲಿ ಸ್ವಪ್ನವಾಸವದತ್ತ ದರಿದ್ರ ಚಾರುದತ್ತಗಳ ಹೆಸರು ಹೇಳಿದ್ದಾನೆ,—ಆದರೆ ಅವು ಯಾರವೆಂದು ಹೇಳಿಲ್ಲ ಧ್ವನ್ಯಾಲೋಕಲೋಚನದಲ್ಲಿ ಸ್ವಪ್ನವಾಸವದತ್ತದ್ದೆಂದು ಒಂದು ಶ್ಲೋಕವನ್ನು ಹೇಳಿದ್ದಾನೆ,—ಇಲ್ಲಿಯೂ ಅದರ ಕರ್ತೃವಿನ ಹೆಸರಿಲ್ಲ ಸಾಲದ್ದಕ್ಕೆ ಈ ಶ್ಲೋಕವು ಅನಂತಶಯನದ ಸ್ವಪ್ನವಾಸವದತ್ತದಲ್ಲಿಲ್ಲ † ವಾಮನನು ಸ್ವಪ್ನವಾಸ

---

* The most plausible view is that he was a poet of the South . (Keith *Sanskrit Drama*, p 105 )

† ಕೆಲವು ಕವಿಗಳು ರಸಕ್ಕೆ ಲಕ್ಷ್ಯಕೊಡದೆ ಅಲಂಕಾರಕ್ಕೆ ಮಾತ್ರ ಕೊಡುತ್ತಾರೆಂಬುದಕ್ಕೆ ಈ ಶ್ಲೋಕವನ್ನು ಉದಾಹರಣೆಯಾಗಿ ಕೊಟ್ಟಿರುವುದ

ವದತ್ತದಿಂದ ಒಂದು (IV, ೭), ಪ್ರತಿಜ್ಞಾಯೌಗಂಧರಾಯಣದಿಂದ ಒಂದು (IV, ೩), ದರಿದ್ರ ಚಾರುದತ್ತದಿಂದ ಒಂದು (I, ೩)—ಈ ರೀತಿ ಮೂರು ಶ್ಲೋಕಗಳನ್ನು ಅನುವಾದಿಸಿದ್ದಾನೆ.—ಆದರೆ ಇವೊಂದಕ್ಕೂ ಆಕರವನ್ನು ಹೇಳಿಲ್ಲ ದಂಡಿಯು—

ಲಿಂಪತೀವ ತಮೋಽಂಗಾನಿ ವರ್ಷತೀವಾಂಜನಂ ನಭಃ |

ಅಸತ್ಪುರುಷಸೇವೇವ ದೃಷ್ಟಿರ್ನಿಷ್ಫಲತಾಂ ಗತಾ ||

ಎಂಬ ಶ್ಲೋಕವನ್ನು ಅನುವಾದಮಾಡಿದ್ದಾನೆ—ಆದರೆ ಅವನೂ ಇದು ಎಲ್ಲಿಯದೆಂದು ಹೇಳಿಲ್ಲ ಭಾಮಹನು ಪ್ರತಿಜ್ಞಾಯೌಗಂಧರಾಯಣದ ವಸ್ತುವನ್ನು ನಿರ್ದೇಶಿಸುತ್ತಾನೆ--ಆದರೆ ಈ ವಿಷಯವಿರುವ ಕಾವ್ಯದ ಹೆಸರೇನು, ಅದರ ಕರ್ತೃ ಯಾರು ಎಂಬುದನ್ನು ಹೇಳುವುದಿಲ್ಲ. ನಾಟ್ಯದರ್ಪಣದಲ್ಲಿ "ಭಾಸಕೃತ ಸ್ವಪ್ನವಾಸವದತ್ತ"ದಿಂದ ತೆಗೆದ ಕೆಲವು ವಾಕ್ಯಗಳಿವೆ. ಇದರಲ್ಲಿ ವತ್ಸರಾಜನು ಶೇಫಾಲಿಕಾ ಮಂಟಪದ ಶಿಲಾತಲವನ್ನು ನೋಡಿ ಒಂದು ಶ್ಲೋಕವನ್ನು ಹೇಳುತ್ತಾನೆ (ಅನುಬಂಧವನ್ನು ನೋಡಿ)—ಈಗ ಸಿಕ್ಕಿರುವ ಸ್ವಪ್ನವಾಸವದತ್ತದಲ್ಲಿ ಶೇಫಾಲಿಕಾ ಮಂಟಪವಿದೆ, ಆದರೆ ಶ್ಲೋಕವಿಲ್ಲ ಹೀಗೆ, ಈ ಸಂಗತಿಗಳನ್ನೆಲ್ಲಾ ದೂರದಿಂದ ನೋಡಿದಾಗ ಅವು ಒಂದಕ್ಕೊಂದು ಅಂಟಿಕೊಂಡು ಸರಪಣಿಯಂತೆ ಕಂಡರೂ ಹಿಡಿದು ಎತ್ತಿದಾಗ ಒಂದೊಂದು ಎರಡೆರಡು ಕೊಂಡಿಗಳು ಬಿಡಿಬಿಡಿಯಾಗಿ ಬರುತ್ತವೆಯೇ ಹೊರತು ಒಟ್ಟಾಗಿ ಸೇರಿಕೊಂಡು ಬರುವುದಿಲ್ಲ ಸಾಲದ್ದಕ್ಕೆ ಕಾವ್ಯಸಂಗ್ರಹಾದಿಗಳಲ್ಲಿ ಭಾಸನದೆಂದು ಹೇಳಿರುವ ಶ್ಲೋಕಗಳಲ್ಲಿ ಒಂದೂ ಈ ನಾಟಕಗಳಲ್ಲಿ ಸಿಕ್ಕುವುದಿಲ್ಲ, ಭಾಸನ ಬೇರೆ ಗ್ರಂಥಗಳಲ್ಲಿ ಸಿಕ್ಕಬಹುದು, ಅಥವಾ ಹೇಳಿದವರು ತಪ್ಪುಮಾಡಿರಬಹುದೆಂದು ಇಟ್ಟುಕೊಳ್ಳೋಣ, ಆದರೂ ಮೊದಲೇ ಸಂದೇಹವಿರುವಾಗ ಅದರ ಜೊತೆಗೆ ಮತ್ತೊಂದು ಸಂದೇಹ ಸೇರಿದರೆ ಅವು ಸುಳ್ಳಿನ ಬಲವನ್ನು ತಾಳುವುವು.

---

ಕಂಬ ಇದು ದಸವತ್ತಾದ ಈ ನಾಟಕದಲ್ಲಿ ಬರುವುದಕ್ಕೆ ಔಚಿತ್ಯವು ಕಾಣುವುದಿಲ್ಲ. (೫ನೆಯ ಪುಟವನ್ನೂ ನೋಡಿ.) ಗಣಪತಿಶಾಸ್ತ್ರಿಗಳು ಈಚೆಗೆ ಈ ಶ್ಲೋಕವನ್ನು ಆರನೆಯ ಅಂಕದಲ್ಲಿ(ಮಿಶ್ರವಿಷ್ಕಂಭಕವಾದ ಮೇಲೆ)ಸೇರಿದ್ದಾರೆ.

ಆದರೂ ರಾಜಶೇಖರನ ವಾಕ್ಯವನ್ನೂ, ಈ ಸ್ವಪ್ನವಾಸವದತ್ತ ದಲ್ಲಿ ಕಂಡುಬರುವ ಪ್ರಾಚೀನ ಶಬ್ದರೂಪ ಶೈಲಿ ಸರಳತೆ ರಸಮಾಧುರ್ಯ ಶೃಂಗಾರಗಾಂಭೀರ್ಯ ಅಪೂರ್ವದೃಶ್ಯತೆಗಳನ್ನೂ ಗಂಟುಹಾಕಿ, ಈ ಗ್ರಂಥವು ಭಾಸನದಿರಬಹುದೆಂದು ತಕ್ಕಮಟ್ಟಿನ ಧೈರ್ಯದಿಂದ ಹೇಳ ಬಹುದು ಅಂತರ ವಾಕ್ಯಸಾಮ್ಯಗಳನ್ನು ಬಿಟ್ಟರೂ ಆದಿ ಶ್ಲೋಕಗಳ ಮುದ್ರಾಲಂಕಾರವೂ ಭರತವಾಕ್ಯವೂ ಏಕಕರ್ತೃಸೂಚಕವೆಂದು ಎಣಿಸ ಬಹುದಾದ್ದರಿಂದ ಈ ಹದಿಮೂರು ನಾಟಕಗಳು ಏಕಕರ್ತೃಕವೆಂದು ಹೇಳಬಹುದು ಸ್ವಪ್ನವಾಸವದತ್ತಾದಿಗಳ ಗುಂಪಾದರೂ* ಶೈಲಿ ಮುಂತಾದವುಗಳ ಸಾಮ್ಯದಿಂದ ಏಕಕರ್ತೃಕಗಳಿರಬಹುದೆಂದು ಭಾಸ ಪ್ರತಿಪಕ್ಷದವರೇ ಒಪ್ಪುವಹಾಗಿದೆ (ಪುಟ ೨೪) ಅಷ್ಟೇ ಅಲ್ಲ, ಈ ಸ್ವಪ್ನವಾಸವದತ್ತವು ಭಾಸನ ಮೂಲಸ್ವಪ್ನವಾಸವದತ್ತದಿಂದ ಶಾಕ್ಯರು ಮಾಡಿಕೊಂಡ ರಂಗಪ್ರತಿಯೆಂದು ಹೇಳುವವುಟ್ಟಿಗೆ ಬಂದಿದ್ದಾರೆ ಅನುವಾದ ಶ್ಲೋಕಗಳು ಇದರಲ್ಲಿ ಕಂಡುಬಾರದಿರುವುದಕ್ಕೆ ಈ ವಾದವು ಒಂದು ವಿಧವಾದ ಉಪಪತ್ತಿಯನ್ನೂ ಕಲ್ಪಿಸಿಕೊಡುತ್ತದೆ ಪ್ರತಿಮಾ ನಾಟಕದಲ್ಲಿ ಸುಮಾರು ೧೫೩ ಪದ್ಯಗಳಿರುವಾಗ ಸ್ವಪ್ನವಾಸವದತ್ತದಲ್ಲಿ ೫೭ ಪದ್ಯಗಳು ಮಾತ್ರ ಇರುವುದೂ ಸ್ವಲ್ಪ ಸಾಧಕವಾಗುತ್ತದೆ ಆದರೂ ಈಗಿರುವ ಸ್ವಪ್ನವಾಸವದತ್ತವು, ಅಲ್ಲಷ್ಟು ಇಲ್ಲಷ್ಟು ಕಿತ್ತುಹಾಕಿ ಹರಕು ಗಳನ್ನು ಗಂಟುಹಾಕಿದ ಹಾಗಿದೆಯೇ? ಅದರಲ್ಲಿ ಯಾವ ಭಾಗದಲ್ಲಿಯೂ ಯಾವ ನ್ಯೂನತೆಯೂ ಕಂಡುಬರುವುದಿಲ್ಲ ಕಸಬುದಾರಿಯ ನಟರು, ಯಾವ ಲೋಪವೂ ಕಾಣದ ಇಂಥ "ಸಂಗ್ರಹ"ವನ್ನು ರಚಿಸುವಷ್ಟು ಬುದ್ಧಿವಂತರಾಗಿರುತ್ತಾರೆಯೇ ? ಮಲೆಯಾಳದಲ್ಲಿ ಮಿಕ್ಕ ಪ್ರಸಿದ್ಧ ನಾಟಕಗಳನೆಲ್ಲಾ ಹಾಗೆಯೇ ಇಟ್ಟು ಭಾಸನ ನಾಟಕಗಳ್ನು ಮಾತ್ರ ಏಕೆ ಸಂಗ್ರಹಿಸಿದರು? ಅಂತೂ, ಏನೇ ಆಗಲಿ, ಸ್ವಪ್ನವಾಸವದತ್ತ

---

* ಸ್ವಪ್ನ, ಪ್ರತಿಜ್ಞಾ, ಅಭಿಷೇಕ, ಪಂಚರಾತ್ರ, ದೂತವಾಕ್ಯ, ಬಾಲ ಚರಿತೆ, ಅವಿಮಾರಕ, ಇವಿಷ್ಟೂ ಭಾಸನವೆಂದು ಕೆ. ಜಿ ಶಂಕರರು ಅಭಿ ಪ್ರಾಯಪಡುತ್ತಾರೆ (ಅಶುತೋಷ ಮೆಮೋರಿಯಲ್ ವಾಲ್ಯೂಂ, ಭಾಗ ೩, ಪು ೪೧, ೬೪.)

ಒಂದರಲ್ಲಿಯಾದರೂ ಬಹುಮಟ್ಟಿಗೆ ಭಾಸನ ಕೃತಿಯು ಕಂಡುಬರುತ್ತದೆ ಎಂದು ಒಪ್ಪಿಕೊಂಡಹಾಗಾಯಿತು ಇದೂ ಅನುಮಾನ ಪ್ರಕರಣ ವಾಯಿತೇ ಹೊರತು ಪ್ರತ್ಯಕ್ಷ ಪರಿಚ್ಛೇದವಾಗಲಿಲ್ಲ ಏಕೆಂದರೆ ಈ ನಾಟಕಗಳೊಂದರಲ್ಲಿಯೂ ಕವಿಯ ಹೆಸರಿಲ್ಲ.

ಇದರ ಕವಿ ಯಾರೇ ಆಗಿರಲಿ, ಅವನು ಯಾವ ನಾಟಕಗಳನ್ನೇ ಬರೆದಿರಲಿ, ಎಷ್ಟನ್ನೇ ಬರೆದಿರಲಿ, ಅಂತೂ ಈ ಹದಿಮೂರು ನಾಟಕ ಗಳನ್ನು ಕಂಡುಹಿಡಿದು ಪ್ರಕಟಿಸಿ ಗಣಪತಿಶಾಸ್ತ್ರಿಗಳು ಸಂಸ್ಕೃತರೂಪಕ ಪ್ರಪಂಚಕ್ಕೂ ಆ ಮೂಲಕ ಇತರ ಸಾಹಿತ್ಯ ಲೋಕಕ್ಕೂ ಅತಿಶಯವಾದ ಉಪಕಾರಮಾಡಿ ನಮ್ಮೆಲ್ಲರನ್ನೂ ಚಿರಋಣಿಗಳನ್ನಾಗಿ ಮಾಡಿದ್ದಾರೆಂಬು ದರಲ್ಲಿ ಸಂದೇಹವಿಲ್ಲ



# ಅ ನು ಬಂ ಧ*

೧. ಭಾವಪ್ರಕಾಶ—ಶಾರದಾತನಯ ವಿರಚಿತ (ಹನ್ನೆರಡನೆಯ ಶತಮಾನ ?)—

ಪ್ರಶಾಂತ ರಸ ಭೂಯಿಷ್ಠಂ ಪ್ರಶಾಂತಂ ನಾಮ ನಾಟಕಂ ।
ನ್ಯಾಸೋ ನ್ಯಾಸಸಮುದ್ಭೇದೋ ಬೀಜೋಕ್ತಿರ್ಬೀಜದರ್ಶನಂ ॥
ತತೋऽನುದ್ದಿಷ್ಟಸಂಹಾರಃ ಪ್ರಶಾಂತೇ ಪಂಚ ಸಂಧಯಃ ।
ಸಾತ್ವತೀ ವೃತ್ತಿರತ್ರಸ್ಯಾದಿತಿ ದ್ರೌಹಿಣಿರಬ್ರವೀತ್ ॥
ಸ್ವಪ್ನವಾಸವದತ್ತಾಖ್ಯಮುದಾಹರಣಮತ್ರ ತು ।
ಆಚ್ಛಿದ್ಯ ಭೂಪಾತ್ ವ್ಯಸನಾತ್ ದೇವೀ ಮಾಗಧಿಕಾಕರೇ ॥
ನ್ಯಸ್ತಾ ಯತಸ್ತತೋ ನ್ಯಾಸಾತ್ ಮುಖಸಂಧಿರಯಂ ಭವೇತ್ ।
ನ್ಯಾಸಸ್ಯ ಚ ಪ್ರತಿಮುಖಂ ಸಮುದ್ಭೇದ ಉದಾಹೃತಮ್ ॥

ಪದ್ಮಾವತ್ಯಾ ಮುಖಂ ವೀಕ್ಷ್ಯ ವಿಶೇಷಕವಿಭೂಷಿತಂ ।
ಚೇವತ್ಯಾವಂತಿಕೇತ್ಯೇತತ್ ಜ್ಞಾತಂ ಭೂಮಿಭುಜೌ ಯಥಾ ॥
ಉತ್ಕಂಠಿತೇನ ಸೋದ್ವೇಗಂ ಬೀಜೋಕ್ತಿರ್ನಾಮ ಕೀರ್ತನಂ ।
ಏಹಿ ವಾಸವದತ್ತೇತಿ ಕ್ವ ಯಾಸೀತ್ಯಾದಿ ದೃಶ್ಯತೇ ॥
ಸಹಾವಸ್ಥಿತಯೋರೇಕಂ ಪ್ರಾಪ್ಯಾನ್ಯಸ್ಯ ಗವೇಷಣಂ ।
ದರ್ಶನಸ್ಪರ್ಶನಾಲಾಪೈರೇತತ್ ಸ್ಯಾತ್ ಬೀಜದರ್ಶನಂ ॥

(ಅತ್ರೋದಾಹರಣಂ)

ಚಿರಪ್ರಸುಪ್ತಃ ಕಾಮೋ ಮೇ ವೀಣಯಾ ಪ್ರತಿಬೋಧಿತಃ ।
ತಾಂ ತು ದೇವೀಂ ನ ಪಶ್ಯಾಮಿ ಯಸ್ಯಾ ಘೋಷವತೀ ಪ್ರಿಯಾ ॥

(VI, ೪೧)

---

* ಈ ಅನುಬಂಧದಲ್ಲಿ ಕೊಟ್ಟಿರುವ ಅನುವಾದ ಶ್ಲೋಕಗಳನ್ನು ವಿಮರ್ಶೆ ಮಾಡಿ ಡಾ|| ಎಫ್ ಡಬ್ಲಿಯು ಥಾಮಸ್‌ರವರು ಬರೆದಿರುವ ಲೇಖನವನ್ನು ನೋಡಿ (ರಾ ಏ. ಸೊ ಪತ್ರಿಕೆ, ಜನವರಿ ೧೯೩೫)

ಕಿಂ ತೇ ಭೂಯಃ ಪ್ರಿಯಂ ಕುರ್ಯಾಮಿತಿ ವಾಕ್ ಯತ್ರ ನೋಚ್ಯತೇ।
ತಮನುದ್ದಿಷ್ಟಸಂಹಾರಮಿತ್ಯಾಹುರ್ಭರತಾದಯಃ ॥ (ಅಧಿಕಾರ ೮)

ಸ್ವಪ್ನವಾಸವದತ್ತದ ವಸ್ತುವನ್ನೂ, ಮೇಲಿನ ಶ್ಲೋಕಗಳಲ್ಲಿ ಹೇಳಿರುವ ಸಂಗತಿಗಳನ್ನೂ ಹೋಲಿಸಿ

೨ **ಶೃಂಗಾರಪ್ರಕಾಶ**—ಭೋಜದೇವ ವಿರಚಿತ (೧೧ನೆಯ ಶತಮಾನ)—

"ಸ್ವಪ್ನವಾಸವದತ್ತೇ ಪದ್ಮಾವತೀಮಸ್ವಸ್ಥಾಂ ದ್ರಷ್ಟುಂ ರಾಜಾ ಸಮುದ್ರಗೃಹಕಂ ಗತಃ। ಪದ್ಮಾವತೀರಹಿತಂ ಚ ತದವಲೋಕ್ಯ ತಸ್ಯಾ ಏವ ಶಯನೀಯೇ ಸುಷ್ವಾಪ ॥ ವಾಸವದತ್ತಾಂ ಚ ಸ್ವಪ್ನೇ ದದರ್ಶ। ಸ್ವಪ್ನಾಯಮಾನಶ್ಚ ವಾಸವದತ್ತಾಮಾಬಭಾಷೇ। ಸ್ವಪ್ನ ಶಬ್ದೇನ ಚೇಹ ಸ್ವಾಪೋ ವಾ ಸ್ವಪ್ನದರ್ಶನಂ ವಾ ಸ್ವಪ್ನಾಯಿತಂ ವಾ ವಿವಕ್ಷಿತಂ ॥"

(೧೨ನೆಯ ಪ್ರಕಾಶ)

ಸ್ವಪ್ನವಾಸವದತ್ತದ ಐದನೆಯ ಅಂಕದ ವಸ್ತುವನ್ನೂ ಇದನ್ನೂ ಹೋಲಿಸಿ ಈ ಗ್ರಂಥದಲ್ಲಿ "ಅವಿಮಾರಕ"ದ ಹೆಸರನ್ನೂ ಹೇಳಿದೆ.

೩ **ನಾಟ್ಯದರ್ಪಣ**—ರಾಮಚಂದ್ರ ಮತ್ತು ಗುಣಚಂದ್ರ ವಿರಚಿತ (೧೨ನೆಯ ಶತಮಾನ)—

"ಲಿಂಗಾದ್ಧೇತೋರ್ನಾಂತರೀಯಕಸ್ಥಲೇ ಲಿಂಗಿನೋ ನಿಶ್ಚಯೋಽನುಮಾನಂ। ನಿಶ್ಚಯರೂಪತ್ವಾದೇವ ಚೋಹರೂಪಾಯಾ ಯುಕ್ತೇರ್ಭಿದ್ಯತೇ। ಯಥಾ ಭಾಸಕೃತೇ ಸ್ವಪ್ನವಾಸವದತ್ತೇ ಶೇಫಾಲಿಕಾ ಮಂಡಪ ಶಿಲಾತಲಮವಲೋಕ್ಯ ವತ್ಸರಾಜಃ —

ಪಾದಾಕ್ರಾಂತಾನಿ ಪುಷ್ಪಾಣಿ ಸೋಷ್ಮ ಚೇದಂ ಶಿಲಾತಲಂ।
ನೂನಂ ಕಾಚಿದಿಹಾಸೀನಾ ಮಾಂ ದೃಷ್ಟ್ವಾ ಸಹಸಾ ಗತಾ ॥

ಇತಿ"

ಸ್ವಪ್ನವಾಸವದತ್ತದ (ಪ್ರವೇಶಕಾನಂತರದ) ನಾಲ್ಕನೆಯ ಅಂಕವನ್ನೂ ಇದನ್ನೂ ಹೋಲಿಸಿ.

---

೪. ನಾಟಕ ಲಕ್ಷಣ ರತ್ನಕೋಶ–ಸಾಗರಾನಂದಿ ವಿರಚಿತ–

" ಯಥಾ ಸ್ವಪ್ನವಾಸವದತ್ತೇ। ನೇಪಥ್ಯೇ ಸೂತ್ರಧಾರಃ ಉತ್ಸಾರಣಾಂ ಶ್ರುತ್ವಾ ಪಠತಿ ॥

ಅಯೇ ಕಥಂ ತಪೋವನೇಽಪ್ಯುತ್ಸಾರಣಾ। (ವಿಲೋಕ್ಯ) ಕಥಂ ಮಂತ್ರೀ ಯೌಗಂಧರಾಯಣಃ ವತ್ಸರಾಜಸ್ಯ ರಾಜ್ಯಪ್ರತ್ಯಾನಯನಂ ಕರ್ತುಕಾಮಃ ಪದ್ಮಾವತೀಯಜನೇನೋತ್ಸಾರ್ಯತೇ ॥ ಇತಿ "

ಸ್ವಪ್ನವಾಸವದತ್ತದ ಮೊದಲ ಭಾಗವನ್ನೂ ಇದನ್ನೂ ಹೋಲಿಸಿ



# ಸ್ವಪ್ನ ವಾಸವದತ್ತ

ಭಾಸನು ಬರೆದವುಗಳೆಂದು ಪ್ರಸಿದ್ಧವಾಗಿರುವ ಹದಿಮೂರು ನಾಟಕಗಳಲ್ಲಿ—ಮಧ್ಯಮ ವ್ಯಾಯೋಗ, ದೂತ ಘಟೋತ್ಕಚ, ಕರ್ಣಭಾರ, ಊರುಭಂಗ, ಪಂಚರಾತ್ರ, ದೂತವಾಕ್ಯ—ಈ ಆರೂ ಮಹಾಭಾರತ ಕಥೆಯನ್ನು ಅನುಸರಿಸಿ ಬರೆದವು, ಪ್ರತಿಮಾನಾಟಕ, ಅಭಿಷೇಕನಾಟಕ ಇವರಡೂ ರಾಮಾಯಣದ ಕಥೆಯನ್ನು ಅನುಸರಿಸಿ ಬರೆದವು, ಬಾಲಚರಿತದಲ್ಲಿರುವುದು ಭಾಗತದ ಕೃಷ್ಣಲೀಲೆಯ ಕಥೆ, ಪ್ರತಿಜ್ಞಾಯೌಗಂಧರಾಯಣ ಸ್ವಪ್ನವಾಸವದತ್ತ ಇವೆರಡರ ವಸ್ತುವೂ ಬೃಹತ್ಕಥೆಯಿಂದ ತೆಗೆದುಕೊಂಡದ್ದು, ಇದರಂತೆಯೇ ಅವಿಮಾರಕ, ಚಾರುದತ್ತ ಇವೆರಡಕ್ಕೂ ಬೃಹತ್ಕಥೆಯೇ ಮೂಲವಾಗಿದ್ದರೂ ಇರಬಹುದು

ಬೃಹತ್ಕಥೆಯು ಈಗ ಇಲ್ಲ ಅದನ್ನು ಗುಣಾಢ್ಯನೆಂಬುವನು ಸುಮಾರು ಕ್ರಿ ಶ ಎರಡು ಅಥವಾ ಮೂರನೆಯ ಶತಮಾನದಲ್ಲಿ ಪೈಶಾಚಿ (ಎಂಬ ಪ್ರಾಕೃತ) ಭಾಷೆಯಲ್ಲಿ * ಬರೆದನೆಂದು ಊಹಿಸಲ್ಪಟ್ಟಿದೆ ಅದರಲ್ಲಿದ್ದ ಕಥೆ ಮಾತ್ರ ಬೃಹತ್ಕಥಾಮಂಜರಿ, ಬೃಹತ್ಕಥಾಶ್ಲೋಕಸಂಗ್ರಹ, ಕಥಾಸರಿತ್ಸಾಗರ (ಕ್ರಿ ಶ ೧೧ ನೆಯ ಶತ) ಎಂಬ ಸಂಸ್ಕೃತ ಗ್ರಂಥಗಳಲ್ಲಿ ಈಗ ಉಳಿದಿದೆ ಈ ಗ್ರಂಥಗಳಲ್ಲಿ (ಸೋಮದೇವಕೃತವಾದ) ಕಥಾಸರಿತ್ಸಾಗರವೇ ವಿಸ್ತಾರವೂ ಪ್ರಸಿದ್ಧವೂ ಆದದ್ದು ಅದರಲ್ಲಿ ಉದಯನನ ಕಥೆಯು, ಸಂಗ್ರಹವಾಗಿ, ಹೀಗಿದೆ .—

ವತ್ಸದೇಶದಲ್ಲಿ ಉದಯನನೆಂಬ ರಾಜನಿದ್ದನು ಆತನಿಗೆ ವೀಣೆ ನುಡಿಸುವುದರಲ್ಲಿಯೂ, ಆ ವೀಣಾಗಾನದಿಂದ ಆನೆಗಳನ್ನು ಮೋಹ

---

* ಇದು ಇಂಡಿಯದ ವಾಯುವ್ಯ ದಿಕ್ಕಿನಲ್ಲಿ ಪ್ರಚಾರದಲ್ಲಿತ್ತೆಂದು ಕೆಲವರೂ, ದ್ರಾವಿಡ ಪ್ರಾಂತದಲ್ಲಿ ಪ್ರಚಾರದಲ್ಲಿದ್ದ ವಿಂಧ್ಯ ಭಾಷಾ ಭೇದವಿರಬೇಕೆಂದು ಕೆಲವರೂ ಊಹಿಸುತ್ತಾರೆ

ಗೊಳಿಸಿ ಅವುಗಳನ್ನು ಹಿಡಿಯುವುದರಲ್ಲಿಯೂ ಬಹು ಆಸಕ್ತಿ ಆದ್ದ ರಿಂದ ತನ್ನ ರಾಜ್ಯಭಾರವನ್ನು ಯೌಗಂಧರಾಯಣನೇ ಮುಂತಾದ ಮಂತ್ರಿಗಳ ಆಡಳಿತಕ್ಕೆ ಒಪ್ಪಿಸಿ ತಾನು ನಿಶ್ಚಿಂತನಾಗಿರುತ್ತ ವೀಣೆಯ ಗಾನ, ಆನೆಯ ಬೇಟೆಗಳಲ್ಲಿದ್ದು ಬಿಟ್ಟಿದ್ದನು

ಇತ್ತ ಉಜ್ಜಯಿನೀ ನಗರದಲ್ಲಿ ಚಂಡಮಹಾಸೇನನೆಂಬ ರಾಜನಿಗೆ ಗೋಪಾಲಕ ಪಾಲಕ ಎಂಬ ಇಬ್ಬರು ಗಂಡು ಮಕ್ಕಳೂ ವಾಸವದತ್ತೆ ಎಂಬ ಒಬ್ಬಳು ಹೆಣ್ಣು ಮಗಳೂ ಇದ್ದರು ವತ್ಸರಾಜನು ಅನುರೂಪ ನಾದ ವರನಾದ್ದರಿಂದ ವಾಸವದತ್ತೆಯನ್ನು ಅವನಿಗೇ ಕೊಟ್ಟು ಮದುವೆ ಮಾಡಬೇಕೆಂದು ಚಂಡಮಹಾಸೇನನು ಯೋಚಿಸಿದನು ಆದರೆ ತನಗೂ ವತ್ಸರಾಜನಿಗೂ ಬದ್ಧದ್ವೇಷ ಆದ್ದರಿಂದ, ವಾಸವದತ್ತೆಯನ್ನು ಏನಾದರೂ ಉಪಾಯದಿಂದ ಅವನಿಗೆ ಮದುವೆ ಮಾಡಿಕೊಟ್ಟುಬಿಟ್ಟರೆ ಒಳ್ಳೆಯ ಅಳಿಯನನ್ನು ಸಂಪಾದಿಸಿದ ಹಾಗೂ ಆಯಿತು, ಶತ್ರುವನ್ನು ಜಯಿಸಿ ಸ್ವಾಧೀನಪಡಿಸಿಕೊಂಡ ಹಾಗೂ ಆಯಿತು—ಎಂದು ಯೋಚಿಸಿ, ಒಬ್ಬ ದೂತನ ಮೂಲಕ, "ವಾಸವದತ್ತೆಯು ತಮ್ಮಲ್ಲಿ ಶಿಷ್ಯವೃತ್ತಿಮಾಡಬೇಕೆಂದಿರುವುದರಿಂದ ತಾವು ಇಲ್ಲಿಗೆ ಬಂದು ಅವಳಿಗೆ ವೀಣೆಯನ್ನು ಕಲಿಸಿಕೊಡಬೇಕು" ಎಂದು ವತ್ಸರಾಜನಿಗೆ ಹೇಳಿ ಕಳುಹಿಸಿದನು ಅದಕ್ಕೆ ಪ್ರತಿಯಾಗಿ ವತ್ಸರಾಜನು, "ತಮ್ಮ ಮಗಳು ನನ್ನ ಶಿಷ್ಯಳಾಗಬೇಕೆಂಬ ಅಪೇಕ್ಷೆಯಿದ್ದರೆ, ಇಲ್ಲಿಗೇ ಆಕೆ ಯನ್ನು ಕಳುಹಿಸಿಕೊಡೋಣಾಗಲಿ" ಎಂದು ದರ್ಪದಿಂದ ಹೇಳಿ ಕಳುಹಿಸಿದನು ಹೀಗೆ ಮಾಡುವುದು ತನ್ನ ಗೌರವಕ್ಕೆ ಕಡಮೆಯೆಂದು ಚಂಡಮಹಾಸೇನನು ಅದಕ್ಕೆ ಒಪ್ಪದೆ, ತಾನಿದ್ದ ಸ್ಥಳಕ್ಕೇ ವತ್ಸರಾಜ ನನ್ನು ಬರಮಾಡಿಕೊಳ್ಳುವುದಕ್ಕೆ ಒಂದು ತಂತ್ರವನ್ನು ಹೂಡಿದನು ಅವನಿಗೆ ಆನೆಯ ಬೇಟೆಯಲ್ಲಿ ತುಂಬ ಆಸೆಯೆಂಬುದು ಗೊತ್ತು, ಆದ್ದರಿಂದ ತನ್ನ ಆನೆಯಂತೆಯೇ ಇದ್ದ ಒಂದು ಸೊಗಸಾದ ಯಂತ್ರದ ಆನೆಯನ್ನು ಮಾಡಿಸಿ ಅದರ ಒಳಗೆ ಗುಟ್ಟಾಗಿ ಶೂರರಾದ ಕೆಲವು ಭಟರು ಇರುವಂತೆ ಏರ್ಪಡಿಸಿ, ಅದನ್ನು ವಿಂಧ್ಯಪರ್ವತದ ಕಾಡಿನಲ್ಲಿ ಓಡಾಡಿಸುತ್ತಿದ್ದನು

ಇದನ್ನು ನೋಡಿ ಮೋಸಹೋದ ಭೃತ್ಯರು "ವಿಂಧ್ಯಾರಣ್ಯಕ್ಕೆ ಒಂದು ದೊಡ್ಡ ಆನೆಯು ಬಂದಿದೆ" ಎಂದು ರಾಜನಿಗೆ ತಿಳಿಸಲು ಅವನು ಅದನ್ನು ಹಿಡಿಯುವುದಕ್ಕೋಸ್ಕರ ವೀಣೆ ತೆಗೆದುಕೊಂಡು ಹೋಗಿ ಅದರ ಮುಂದೆ ನುಡಿಸುತ್ತ ಅದಕ್ಕನುಸಾರವಾಗಿ ಇಂಪಾದ ಧ್ವನಿಯಿಂದ ಹಾಡುತ್ತ ಮೆಲ್ಲ ಮೆಲ್ಲಗೆ ಅದರ ಸಮೀಪಕ್ಕೆ ಹೋದನು (ಆದರೆ ಮನಸ್ಸೆಲ್ಲವೂ ಸಂಗೀತದಲ್ಲಿಯೇ ಸೇರಿದ್ದುದರಿಂದಲೂ ಸಂಜೆಯು ಮಬ್ಬುಗತ್ತಲೆ ಕವಿದಿದ್ದುದರಿಂದಲೂ ಅದು ಮಾಯಾಗಜವೆಂಬುದು ರಾಜನಿಗೆ ಗೊತ್ತಾಗಲಿಲ್ಲ) ಆ ಮಾಯಾಗಜವು ಸಂಗೀತವನ್ನು ಕೇಳುವುದಕ್ಕೋ ಎಂಬಂತೆ ಕಿವಿಯನ್ನು ನೆಟ್ಟಗೆ ಮಾಡಿಕೊಂಡು ಆತನ ಸಮೀಪಕ್ಕೆ ಬಂದು ಬಂದು ಹಿಂದಕ್ಕೆ ಹೋಗುತ್ತಾ ರಾಜನನ್ನು ಬಹು ದೂರವಾಗಿ ತೆಗೆದುಕೊಂಡು ಹೋಯಿತು ಹೀಗೆ ಬಹುದೂರ ಹೋದ ಮೇಲೆ ಒಳಗೆ ಅಡಗಿಕೊಂಡಿದ್ದ ವೀರಪುರುಷರು ತಟ್ಟನೆ ಹೊರಕ್ಕೆ ಬಂದು ರಾಜನನ್ನು ಮುತ್ತಿ ಉಜ್ಜಯನಿಗೆ ಸೆರೆಹಿಡಿದುಕೊಂಡು ಹೋದರು. ಅಲ್ಲಿ ರಾಜನು ಚಂಡಮಹಾಸೇನನ ಅಪ್ಪಣೆಯಂತೆ ಅವನ ಅರಮನೆಯಲ್ಲಿದ್ದುಕೊಂಡು ವಾಸವದತ್ತೆಗೆ ಸಂಗೀತವನ್ನು ಹೇಳಿಕೊಡುತ್ತ ಆಕೆಯಲ್ಲಿ ಅನುರಕ್ತನಾದನು ವಾಸವದತ್ತೆಯೂ ಅವನಲ್ಲಿಯೇ ಆಸಕ್ತಳಾಗಿ ಅವನನ್ನು ಎಡಬಿಡದೆ ಉಪಚರಿಸುತ್ತಿದ್ದಳು

ವತ್ಸರಾಜನು ಸೆರೆಸಿಕ್ಕಿದ ವರ್ತಮಾನವು ಅವನ ರಾಜಧಾನಿಯಾದ ಕೌಶಾಂಬಿಗೆ ತಲಪಲು, ಯೌಗಂಧರಾಯಣನು "ಕುಳ್ಳನಾದ ಬೋಳದಲೆಯ ಮುದಿ ಹುಚ್ಚನಂತೆ"ಯೂ, ವಸಂತಕನು "ನರಗಳುಬ್ಬಿ, ಡೊಳ್ಳುಹೊಟ್ಟೆಯ ಕೆಟ್ಟಮುಸುಡಿಯ ಹಲ್ಲುಬೀರ"ನಂತೆಯೂ ವೇಷಹಾಕಿಕೊಂಡು ಉಜ್ಜಯಿನಿಗೆ ಹೋಗಿ ಅಲ್ಲಿ ನಾನಾ ವಿನೋದಗಳನ್ನು ಮಾಡತೊಡಗಿದರು. ಇವರ ವಿನೋದಗಳ ಸಮಾಚಾರವು ಅಂತಃಪುರಕ್ಕೂ ತಲಪಲು ವಾಸವದತ್ತೆಯು ಅದನ್ನು ತಾನೂ ನೋಡಬೇಕೆಂದು ಅವರನ್ನು ನಾಟ್ಯಶಾಲೆಗೆ ಬರಮಾಡಿಕೊಂಡಳು. ಅಲ್ಲಿ ಯೌಗಂಧರಾಯಣನು ಸಂದರ್ಭ ನೋಡಿಕೊಂಡು ತಮ್ಮ ಅರಸನನ್ನು ಕಂಡು, ಸಂಕೋಲೆಗಳನ್ನು ಮುರಿಯುವಹಾಗೂ, ವಾಸವದತ್ತೆಯು

ವೀಣೆಯ ತಂತಿಗಳಿಗೆ ಹಚ್ಚುವುದರಿಂದಲೇ ಆಕೆಯನ್ನು ಸ್ವಾಧೀನಪಡಿಸುವ ಹಾಗೂ ವಶೀಕರಣ ಔಷಧಿಗಳನ್ನು ಕೊಟ್ಟು ಹೊರಟು ಹೋದನು ವಸಂತಕನು ಅಲ್ಲಿಯೇ ಇದ್ದುಕೊಂಡು ರಾಜಪುತ್ರಿಯ ಮನೋರಂಜನೆಯಾಗುವಂತೆ ಹಾಸ್ಯ ಮತ್ತು ಅದ್ಭುತ ರಸಗಳಿಂದ ಕೂಡಿದ ಮನೋಹರವಾದ ಕಥೆಗಳನ್ನು ಹೇಳುತ್ತ ಕಾಲ ಕಳೆಯುತ್ತಿದ್ದನು ಒಂದು ದಿನ ರಾತ್ರಿ ಯೌಗಂಧರಾಯಣನು ಮಾಡಿದ ಏರ್ಪಾಡಿನಂತೆ ವಾಸವದತ್ತೆಯ ಭದ್ರಾವತಿಯೆಂಬ ಆನೆಯನ್ನು ತರಿಸಿ ಅದರ ಮಾವುತನ ಸಹಾಯದಿಂದ ವತ್ಸರಾಜ, ವಾಸವದತ್ತೆ, ಅವಳ ಸಖಿಯಾದ ಕಾಂಚನಮಾಲೆ ಈ ಮೂವರೂ ತಪ್ಪಿಸಿಕೊಂಡು ಹೊರಟು ಹೋದರು ಚಂಡಮಹಾಸೇನನಿಗೆ ಬೇಕಾದದ್ದೂ ಅದೇಯೆ ಆದ್ದರಿಂದ ಎಲ್ಲರೂ ಕೌಶಾಂಬಿಯಲ್ಲಿ ಸೇರಲು ವಿಧಿವಿಹಿತವಾಗಿ ಮದುವೆ ನಡೆಯಿತು

ಕೆಲವು ಕಾಲದಮೇಲೆ ಒಂದಾನೊಂದು ದಿನ ವತ್ಸರಾಜನು ಚಾಪಲ್ಯದಿಂದ, ಪೂರ್ವಪರಿಚಿತಳಾದ ವಿರಚಿಕೆಯೆಂಬ ಅಂತಃಪುರ ಚಾರಿಣಿಯೊಂದಿಗೆ ಏಕಾಂತದಲ್ಲಿ ಇದ್ದದ್ದನ್ನು ಕಂಡು ವಾಸವದತ್ತೆಯು ಸಿಟ್ಟುಕೊಂಡಳು ಆಗ ವತ್ಸರಾಜನು ತನ್ನ ಹೆಂಡತಿಗೆ ಶರಣಾಗತನಾಗಿ ಆಕೆಯ ಕ್ಷಮಾಪಣೆಯನ್ನು ಬೇಡಿಕೊಳ್ಳಬೇಕಾಯಿತು. ಮತ್ತೊಂದು ಸಾರಿ, ತನ್ನ ಉದ್ಯಾನವನದ ಲತಾಗೃಹದಲ್ಲಿ ಮಂಜುಲಿಕೆ ಎಂಬ ಒಬ್ಬ ಹುಡುಗಿಯನ್ನು ಕಂಡನು ಸೌಂದರ್ಯ ಸಮುದ್ರದಲ್ಲಿ ಹುಟ್ಟಿದ ಎರಡನೇ ಲಕ್ಷ್ಮಿಯೋ ಎಂಬಂತೆ ಅತಿಮನೋಹರಳಾಗಿದ್ದ ಆಕೆಯನ್ನು ಕಂಡ ಮಾತ್ರದಿಂದಲೇ ಮೋಹಪರವಶನಾದ ಆ ರಾಜನು ವಸಂತಕನ ಸಹಾಯದಿಂದ ಆಕೆಯನ್ನು ಗಾಂಧರ್ವ ವಿಧಿಗನುಸಾರವಾಗಿ ಗುಟ್ಟಿನಲ್ಲಿ ಮದುವೆ ಮಾಡಿಕೊಂಡನು. ಮಂಜುಲಿಕೆಯು ಒಬ್ಬ ರಾಜಪುತ್ರಿ; ಆಕೆಯನ್ನು ವಾಸವದತ್ತೆಯ ಅಣ್ಣನಾದ ಗೋಪಾಲಕನು ಗೆದ್ದು ತಂದು ತನ್ನ ತಂಗಿಗೆ ಬಳುವಳಿಯಾಗಿ ಕೊಟ್ಟಿದ್ದನು ಆದ್ದರಿಂದ ಈ ಸಂಗತಿಯು ವಾಸವದತ್ತೆಗೆ ತಿಳಿದು ಆಕೆಗೆ ಪತಿಯ ಮೇಲೆ ತುಂಬ ಆಗ್ರಹವುಂಟಾಯಿತು ಈ ಕೋಪವನ್ನು ಶಮನಮಾಡುವುದಕ್ಕಾಗಿ ರಾಜನು ಆಕೆಯ

ಸಖಿಯಾದ ಮತ್ತು ಆಕೆಗೆ ಬಳುವಳಿಯಾಗಿ ಬಂದಿದ್ದ ಸಾಂಕೃತ್ಯಾಯನಿ ಎಂಬ ಸಂನ್ಯಾಸಿನಿಯನ್ನು ಆಶ್ರಯಿಸಿದನು ಆ ಸಾಂಕೃತ್ಯಾಯನಿಯು ಹೇಗೋ ದೇವಿಯನ್ನು ಸಮಾಧಾನಗೊಳಿಸಿ ಆಕೆಯ ಅಪ್ಪಣೆಯಂತೆ ರಾಜನಿಗೆ ಆ ಮಂಜುಲಿಕೆಯನ್ನರ್ಪಿಸಿದಳು

ಹೀಗೆ ವಿಷಯಾಸಕ್ತನಾಗಿದ್ದ ರಾಜನನ್ನು ನೋಡಿ ಯೌಗಂಧರಾಯಣನು ತನ್ನ ಬುದ್ಧಿಶಕ್ತಿಯಿಂದ ಅವನ ರಾಜ್ಯವನ್ನು ವಿಸ್ತರಿಸಬೇಕೆಂದು ಯೋಚಿಸಿ ಅದಕ್ಕಾಗಿ ಮಗಧದೇಶದ ರಾಜನಾದ ಪ್ರದ್ಯೋತನ ಮಗಳು ಪದ್ಮಾವತಿಯನ್ನು ವತ್ಸರಾಜನಿಗೆ ಮದುವೆಮಾಡಿಸಬೇಕೆಂದು ನಿಶ್ಚಯಿಸಿದನು ಆದರೆ ವಾಸವದತ್ತೆಯ ಮೇಲಿನ ಪ್ರೀತಿಯಿಂದ ಇದಕ್ಕೆ ವತ್ಸರಾಜನು ಒಪ್ಪುವಂತಿರಲಿಲ್ಲ, ಹೆಣ್ಣಿನಮೇಲೆ ಹೆಣ್ಣು ಕೊಡುವುದಕ್ಕೆ ಪ್ರದ್ಯೋತನೂ ಒಪ್ಪುತ್ತಿರಲಿಲ್ಲ ಆದ್ದರಿಂದ ಮಂತ್ರಿಯು ವಾಸವದತ್ತೆ ಗೋಪಾಲಕರೊಡನೆ ಯೋಚಿಸಿ ಇದಕ್ಕೆ ಒಂದು ಉಪಾಯವನ್ನು ಹೂಡಿದನು. ಮೃಗಯಾವಿಹಾರಕ್ಕೆ ಅತಿ ರಮಣೀಯವಾಗಿ ತಮ್ಮ ದೇಶದ ಕೊನೆಯ ಸರಹದ್ದಿನಲ್ಲಿಯೂ ಮಗಧದೇಶಕ್ಕೆ ಹತ್ತಿರದಲ್ಲಿಯೂ ಇರುವ ಲಾವಾಣಕವೆಂಬ ಪ್ರಾಂತಕ್ಕೆ ವಾಸವದತ್ತಾ ಸಮೇತನಾದ ವತ್ಸರಾಜನನ್ನು ಉಪಾಯದಿಂದ ಕರೆದೊಯ್ದು ಬೇಟೆಯ ನೆಪದಿಂದ ಆತನನ್ನು ದೂರನಾಡಿ, ಅಂತಃಪುರಕ್ಕೆ ಬೆಂಕಿಯನ್ನು ಹತ್ತಿಸಿ ವಾಸವದತ್ತೆಯು ಸುಟ್ಟುಹೋದಳೆಂಬ ವರ್ತಮಾನವನ್ನು ಹರಡಿದನು ಅನಂತರ ತಾನು ವೃದ್ಧ ಬ್ರಾಹ್ಮಣನಂತೆಯೂ, ಆಕೆಯು ಬ್ರಾಹ್ಮಣ ಸ್ತ್ರೀಯಂತೆಯೂ, ವಸಂತಕನು ಒಕ್ಕಣ್ಣಿನ ವಟುವಂತೆಯೂ ವೇಷ ಮರಸಿಕೊಂಡು ಮಗಧ ರಾಜನ ಪಟ್ಟಣವನ್ನು ಸೇರಿದರು. ಆ ಸಮಯದಲ್ಲಿ ಉದ್ಯಾನವನದಲ್ಲಿದ್ದ ಮಗಧರಾಜನ ಪುತ್ರಿಯಾದ ಪದ್ಮಾವತಿಯು ಸಮೀಪಕ್ಕೆ ಹೋಗುತ್ತಿರುವಾಗ ದ್ವಾರಪಾಲಕರು ಅಲ್ಲಿಗೆ ಹೋಗದಂತೆ ಅಡ್ಡಿಮಾಡುತ್ತಿರಲು 'ಒಳಗಿದ್ದ ಪದ್ಮಾವತಿಯು ಬ್ರಾಹ್ಮಣ ವೇಷದಲ್ಲಿರುವ ಆ ರಾಜಸುತೆಯನ್ನು ಕಂಡ ಮಾತ್ರದಿಂದಲೇ ಆನಂದವನ್ನು ಹೊಂದಿ ದ್ವಾರಪಾಲಕರಿಂದ ಅವರನ್ನು ತನ್ನ ಸಮೀಪಕ್ಕೆ ಕರೆಯಿಸಿಕೊಂಡು ಅವರು

ಯಾರೆಂದು ವಿಚಾರಿಸಿದಳು ಯೌಗಂಧರಾಯಣನು, “ಆವಂತಿಕೆ ಯೆಂಬ ಈ ಹುಡುಗಿಯು ನನ್ನ ಮಗಳು ಈಕೆಯ ಗಂಡನು ಎಲ್ಲಿಯೋ ಹೊರಟುಹೋಗಿದ್ದಾನೆ ಆತನನ್ನು ಹುಡುಕಿ ತರುವ ವರೆಗೂ ಇವಳನ್ನು ನಿನ್ನಲ್ಲಿ ಬಿಟ್ಟುಹೋಗಿರುತ್ತೇನೆ ನೀನೀಕೆಯನ್ನು ದಯವಿಟ್ಟು ನಿನ್ನ ಸಮೀಪದಲ್ಲಿಟ್ಟುಕೊಂಡಿರಬೇಕು ಈ ಕುರುಡ ಹುಡುಗನು ಅವಳ ತಮ್ಮ ಅವಳಿಗೆ ಒಬ್ಬಳೇ ಇರಬೇಕೆಂಬ ವ್ಯಥೆ ಯಾಗದಂತೆ, ಇವನೂ ಜೊತೆಯಲ್ಲಿರುವನು” ಎಂದು ಹೇಳಿ, ಪದ್ಮಾವತಿಯು ಹಾಗೇ ಆಗಲೆಂದು ಅಂಗೀಕರಿಸಿದಮೇಲೆ ಹೊರಟು ಹೋದನು ವಾಸವದತ್ತೆಯ ದೊಡ್ಡ ಗುಣವನ್ನು ನೋಡಿ ಅವಳು ಯಾರೋ ಉತ್ತಮ ಸ್ತ್ರೀಯೇ ಆಗಿರಬೇಕೆಂದು ಪದ್ಮಾವತಿಯು ಆಕೆ ಯನ್ನು ತನ್ನ ಸರಿಸಮಾನವಾಗಿಯೇ ಉಪಚರಿಸುತ್ತಿದ್ದಳು ಹೀಗಿರಲು ಒಂದು ದಿವಸ ವಾಸವದತ್ತೆಯು ಆ ಪದ್ಮಾವತಿಗೆ ತಾನು ಹಿಂದೆ ವತ್ಸರಾಜನಿಂದ ಕಲಿತಿದ್ದ ಅಳಿಸಿಹೋಗದಿರುವ ತಿಲಕವನ್ನು ಇಟ್ಟು ಬಾಡದಿರುವ ಒಂದು ಮಾಲಿಕೆಯನ್ನು ಮಾಡಿಕೊಟ್ಟಳು ಇದು ಪದ್ಮಾವತಿಯ ತಾಯಿಗೆ ತಿಳಿದು ಆ ಮೂಲಕ ಅವಳ ಪ್ರಸಿದ್ಧಿ ಹೆಚ್ಚಿತು

ಯೌಗಂಧರಾಯಣನು ನೆನಸಿದ್ದಂತೆಯೇ ಎಲ್ಲವೂ ನಡೆಯಿತು ಮಗಧದೇಶದ ರಾಜನು ಹೆಣ್ಣು ಕೊಡುವುದಾಗಿ ಹೇಳಿಕಳುಹಿಸಿದನು ವತ್ಸರಾಜನೂ ಒಪ್ಪಿದನು ಗೋಪಾಲಕ ಯೌಗಂಧರಾಯಣ ಮುಂತಾದವರ ಇರುವಿಕೆಯನ್ನು ನೋಡಿ ಅವನಿಗೆ ವಾಸವದತ್ತೆಯ ಮರಣವು ಅನುಮಾನವಾಗಿತ್ತು ಈ ಮದುವೆಯ ಮೂಲಕ ಆಕೆ ಯನ್ನು ಪುನಃ ಪಡೆಯಬಹುದೆಂಬ ದೂರದ ಆಶೆಯೂ ಇತ್ತು ಇಲ್ಲದಿದ್ದರೆ ಅವನು ಈ ಲಗ್ನಕ್ಕೆ ಸಮ್ಮತಿಸುತ್ತಿರಲಿಲ್ಲ ವಾಸವದತ್ತೆಯು ತನ್ನ ಚಿಂತೆ ಕಳವಳಗಳನ್ನು ನುಂಗಿಕೊಂಡಿರುತ್ತ, ಮದುವೆ ಹತ್ತಿರಕ್ಕೆ ಬಂದಾಗ ಹಿಂದಿನಂತೆ ಪದ್ಮಾವತಿಗೆ ಅಳಿಸಿಹೋಗದ ತಿಲಕವನ್ನೂ ಬಾಡದಿರುವ ಪುಷ್ಪಮಾಲಿಕೆಯನ್ನೂ ರಚಿಸಿದಳು. ಮದುವೆಗೆ ಬಂದ ವತ್ಸರಾಜನಿಗೆ ಈ ತಿಲಕ ಮಾಲಿಕೆಗಳನ್ನು ನೋಡಿ ತನ್ನ ಸಂಶಯವು

ಇನ್ನೂ ದೃಢಪಟ್ಟಿತು ಅಂತೂ ಮದುವೆಯೇನೋ ನಡೆದು ಹೋಯಿತು. ಇಲ್ಲಿ ಹೆಚ್ಚು ದಿನವಿದ್ದರೆ ರಾಜನು ಅಂತಃಪುರದಲ್ಲಿ ವಾಸವದತ್ತೆಯನ್ನು ಕಂಡು ಅವಾಂತರವಾದೀತೆಂದು ಯೌಗಂಧ ರಾಯಣನು ಕೂಡಲೆ ಊರಿಗೆ ಹಿಂದಿರುಗುವುದಕ್ಕೆ ಏರ್ಪಾಡುಮಾಡಿ ದನು ವಸಂತಕನೂ ವಾಸವದತ್ತೆಯೂ ಯಾರಿಗೂ ಗೊತ್ತಾಗದಂತೆ ಪರಿವಾರದೊಡನೆ ಹಿಂದೆ ಬರುತ್ತಿದ್ದರು ಹೀಗೆ ಪ್ರಯಾಣಮಾಡು ತ್ತಿರುವ ವತ್ಸರಾಜನು ಲಾವಾಣಕಕ್ಕೆ ಬರಲು ಅವನ ಮನಸ್ಸು ವಾಸವದತ್ತೆಯನ್ನು ನೆನೆಯತೊಡಗಿತು ಇತ್ತ ವಾಸವದತ್ತೆಯೂ ಮನಸ್ಸು ತಡೆಯಲಾರದೆ ತನ್ನ ಜೊತೆಯಲ್ಲಿದ್ದ ಪ್ರಧಾನರನ್ನೆಲ್ಲಾ ಹೊರಗೇ ನಿಲ್ಲಿಸಿ ಅರ್ಧರಾತ್ರಿ ಸಮಯದಲ್ಲಿ ತಾನೊಬ್ಬಳೇ ಗೋಪಾ ಲಕನ ಮನೆಯೊಳಗೆ ಪ್ರವೇಶಿಸಿ ಅಲ್ಲಿ ಅಣ್ಣನನ್ನು ಕಂಡು ಅಳ ಲಾರಂಭಿಸಿದಳು. ಈ ಮಧ್ಯೆ ಅವಳ ಜೊತೆಯಲ್ಲಿದ್ದ ಪ್ರಧಾನರು ಪದ್ಮಾವತಿಯ ಹತ್ತಿರಕ್ಕೆ ಹೋಗಿ, "ಏನು ಕಾರಣದಿಂದಲೋ ಆವಂತಿಕೆಯು ನಮ್ಮನ್ನು ಬಿಟ್ಟು ತಾನೊಬ್ಬಳೇ ಗೋಪಾಲಕ ರಾಜನ ಮನೆಗೆ ಹೋದಳು" ಎಂದು ತಿಳಿಸಿದರು. ಇದನ್ನು ಕೇಳಿ ಪದ್ಮಾ ವತಿಯು ಸಂಶಯಪಟ್ಟು ಗಂಡನ ಸಮಕ್ಷಮದಲ್ಲಿಯೇ ಅವರನ್ನು ಕುರಿತು "ನೀವೀಗಲೇ ಆವಂತಿಕೆಯಲ್ಲಿಗೆ ಹೋಗಿ ನಿನ್ನನ್ನು ಬ್ರಾಹ್ಮಣನು ನನ್ನಲ್ಲಿ ನ್ಯಾಸವಾಗಿಟ್ಟಿರುವುದರಿಂದ ನಿನಗಲ್ಲೇನು ಕೆಲಸ? ನಾನಿದ್ದ ಲ್ಲಿಗೆ ಬರಬೇಕು ಎಂದು ನಾನು ಹೇಳಿದೆನೆಂದು ತಿಳಿಸಿ" ಎಂದು ಆಜ್ಞೆ ಮಾಡಿದಳು. ಇದನ್ನು ಕೇಳಿ ವತ್ಸರಾಜನು ಅವರು ಹೋದ ಮೇಲೆ ಗುಟ್ಟಾಗಿ ಆ ತಿಲಕ ಮತ್ತು ಮಾಲಿಕೆಗಳನ್ನು ರಚಿಸಿದವರಾರೆಂದು ಪದ್ಮಾವತಿಯನ್ನು ಕೇಳಲು ಆಕೆಯು ಆವಂತಿಕೆಯೆಂಬ ಒಬ್ಬ ಹುಡುಗಿಯನ್ನು ಒಬ್ಬ ಬ್ರಾಹ್ಮಣನು ತನ್ನ ಹತ್ತಿರ ಬಿಟ್ಟು ಹೋಗಿರು ವುದಾಗಿಯೂ ಅವುಗಳು ಆಕೆ ರಚಿಸಿದವೆಂದೂ ಹೇಳಿದಳು ವತ್ಸ ರಾಜನು ಇದನ್ನು ಕೇಳಿದ ಕೂಡಲೆ ಗೋಪಾಲಕನ ಮನೆಯಲ್ಲಿ ವಾಸವದತ್ತೆ ಇರಬಹುದೆಂದು ಯೋಚಿಸಿ ಆಕ್ಷಣವೇ ಅಲ್ಲಿಗೆ ಹೋಗಿ ಗೋಪಾಲಕ, ವಾಸವದತ್ತೆ, ತನ್ನ ಮಂತ್ರಿಗಳು, ವಸಂತಕ ಎಲ್ಲರೂ

ವಿವೇಕವನ್ನು ಅರಿಯುವುದು ಕಷ್ಟ. ಇದರ ಜೊತೆಗೆ ಎಂಥ ಸನ್ನಿವೇಶಗಳನ್ನು ಕಲ್ಪಿಸಿದರೆ ಅದರಲ್ಲಿ ತಿಳಿಯಬೇಕಾದ ವೃತ್ತಾಂತಗಳೆಲ್ಲಾ ತಿಳಿದು, ಪಾತ್ರಗಳ ಗುಣಾವಗುಣಗಳು ಪ್ರಕಾಶಕ್ಕೆ ಬಂದು ಅವುಗಳ ನಡೆನುಡಿಗಳು ಆನಂದಗೊಳಿಸಿ, ನಮ್ಮ ಮನಸ್ಸಿನ ಮೇಲೆ ಉದ್ದಿಷ್ಟ ಪರಿಣಾಮವನ್ನು ಉಂಟುಮಾಡುವುವೆಂಬುದನ್ನು ಕಂಡುಕೊಳ್ಳಬೇಕು. ಇದಕ್ಕೆ ನಾಟಕವನ್ನು ರಚಿಸಬಲ್ಲ ನೈಪುಣ್ಯ ವಿಶೇಷವನ್ನು ಪಡೆದ ಕವಿಯಾಗಬೇಕು, "ಸ್ವಪ್ನವಾಸವದತ್ತ" ನಾಟಕದಲ್ಲಿ ಎಲ್ಲಿ ನೋಡಿದರೂ ಇಂಥ ನೈಪುಣ್ಯವು ಕಂಗೊಳಿಸುತ್ತದೆ.

ನಾಟಕಕ್ಕೆ ಬರುವುದಕ್ಕಿಂತ ಮುಂಚೆ ಅದರ "ಸ್ಥಾಪನೆ"ಯ ವಿಚಾರವಾಗಿ ಒಂದು ಮಾತು. "ಸ್ಥಾಪನೆ"ಯೂ ಮುಂದಿನ ನಾಟಕದಂತೆ ಬಹು ಸಂಗ್ರಹವಾಗಿದೆ. ಇದರಲ್ಲಿ ನಟಿ ಇಲ್ಲ. ಅವಳ ಋತುವರ್ಣನೆ ಇಲ್ಲ, ಕವಿ ಕಾವ್ಯ ವಿವರಣೆಯಂತೂ ಇಲ್ಲವೇ ಇಲ್ಲ. ಸೂತ್ರಧಾರನು ಇನ್ನೂ ಸಭಿಕರಲ್ಲಿ ವಿಜ್ಞಾಪಿಸಿಕೊಳ್ಳುತ್ತಿರುವಷ್ಟರಲ್ಲಿಯೇ ಒಳಗೆ ಗದ್ದಲ, ಅದನ್ನು ಕೇಳಿ, ಮಗಧರಾಜನ ಭೃತ್ಯರು ತಪೋವನದಲ್ಲಿ ಒಬ್ಬ ಕನ್ಯೆಯನ್ನು ಕರೆದುಕೊಂಡು ಹೋಗುತ್ತ ಅಲ್ಲಿದ್ದ ಜನರನ್ನು ದಾರಿ ಬಿಡಿಸುತ್ತಿದ್ದರೆಂದು ತಿಳಿದು ಅವನು, ಹೆಚ್ಚು ಮಾತನ್ನಾಡದೆ, ಹೇಳದೆ ಕೇಳದೆ ಹೊರಟುಹೋಗುವನು. ಆದರೂ ಈ ಕಥೆ ಯಾವುದು, ಎಲ್ಲಿಂದ ಮೊದಲಾಗಿದೆ ಎಂದು ತಿಳಿಯುವುದಕ್ಕೆ ಇಷ್ಟು ಸಾಕಾಗಿದೆ. ಇದಕ್ಕಿಂತ ಸಂಗ್ರಹವಾದ ಸ್ಥಾಪನೆಯಿಲ್ಲ. ಕೆಲವು ಪ್ರಸ್ತಾವನೆಗಳನ್ನು ನೋಡಿದರೆ ನಾಟಕಕರ್ತರು, ತಾವು ಬರೆಯುತ್ತಿರುವುದು ಆತ್ಮ ಚರಿತ್ರೆಯೆಂದು ಭ್ರಮಿಸಿರುವ ಹಾಗೆ ತೋರುತ್ತದೆ. ಅಂಥ ಉದ್ಬುದ್ಧವಾದ ಕವಿಚರಿತ್ರೆಯನ್ನೂ, ಅಕಾಲ ಋತು ವರ್ಣನೆಯನ್ನೂ ಕೇಳಿ ಕೇಳಿ ಬೇಜಾರಾಗಿ ಗದ್ದಲಮಾಡುತ್ತ ನಾಟಕದ ಆರಂಭವನ್ನು ಎದುರುನೋಡುವ ಸಭಿಕರಿಗೆ ಈ ಸಂಕೋಚವು ಬಹು ಸಂತೋಷವನ್ನುಂಟುಮಾಡುತ್ತದೆ.

ಮೊದಲನೆಯ ಅಂಕದಲ್ಲಿ ಯೌಗಂಧರಾಯಣನು ವಾಸವದತ್ತೆಯನ್ನು ಆವಂತಿಕೆ ಎಂಬ ಹೆಸರಿನಿಂದ ಪದ್ಮಾವತಿಯಲ್ಲಿ ನ್ಯಾಸ

ವಾಗಿಟ್ಟು ಹೋಗುವನು ಇದು ವಿಸ್ತಾರವಾಗಿ ಪ್ರತಿಪಾದಿತವಾಗಿದೆ "ಪುಷ್ಪಕ ಭದ್ರಕ ಮೊದಲಾದ ದೈವಜ್ಞರು" ಹೇಳಿದ ಮಾತು ಆಪತ್ತಿನ ವಿಚಾರದಲ್ಲಿ ನಿದರ್ಶನಕ್ಕೆ ಬಂದದ್ದರಿಂದ ಅದು ಸಂಪತ್ತಿನಲ್ಲಿಯೂ ನಿಜವಾಗುವುದೆಂಬ ನಂಬಿಕೆಯ ಮೇಲೆ ಯೌಗಂಧರಾಯಣನು ಮಂತ್ರಿಗಳೊಡನೆ ಆಲೋಚಿಸಿ ಲಾವಾಣಕವಹ್ನಿಯನ್ನು ಕಲ್ಪಿಸಿದ್ದು, ವಾಸವದತ್ತೆಯನ್ನು ಒಡಂಬಡಿಸಿದ್ದು ಮುಂತಾದ ಪೂರ್ವ ಕಥೆ ಪರಿಕರ ವೃತ್ತಾಂತಗಳೆಲ್ಲಾ ಸೂಚಿಸಲ್ಪಟ್ಟಿವೆ

ಈ ಹಣ್ಣು ಒಪ್ಪಿಸುವ ಕೆಲಸ ನಡೆಯುವುದು ಅಧಿಕಾರ ದರ್ಪವುಳ್ಳ ಅರಮನೆಯ ಹತ್ತಿರದಲ್ಲಲ್ಲ, ಶಾಂತವಾದ ತಪೋವನದಲ್ಲಿ, ಕಲ್ಪವೃಕ್ಷದಿಂದ ಕಳಿತ ಹಣ್ಣುಗಳು ಬೀಳುತ್ತಿರುವಂತೆ "ಯಾರಿಗೇನು ಬೇಕು?" ಎಂದು ಒಬ್ಬೊಬ್ಬರನ್ನೂ ಔದಾರ್ಯದಿಂದ ಧಾರಾಳವಾಗಿ ಕೇಳಿಸುತ್ತಿರುವ ಪದ್ಮಾವತಿಯಂಥ "ಉದಾರಶೀಲೆ" ಯಾದ ರಾಜಕುಮಾರಿಯ ಸಾನ್ನಿಧ್ಯದಲ್ಲಿ, ('ಯಾವನೋ ಆಗಂತುಕನು' ಹೊರತು) ನಿತ್ಯತೃಪ್ತರೂ ವೈರಾಗ್ಯಶಾಲಿಗಳೂ ಸಂಯಮಿಗಳೂ ಇರುವ ಶಾಂತವಾದ ಋಷ್ಯಾಶ್ರಮಗಳ ಮಧ್ಯದಲ್ಲಿ ಈ ಸನ್ನಿವೇಶ ಕಲ್ಪನೆಯಿಂದ, ಇನ್ನೂ ಮದುವೆಯೇ ಆಗದೆ ತಾನೇ ಪರಾಧೀನಳಾಗಿರುವ ಪದ್ಮಾವತಿಯಂಥ "ಕನ್ಯೆ"ಯು ಅಪರಿಚಿತಳಾದ ಹೆಂಗಸನ್ನು ತನ್ನ ಹತ್ತಿರ ಇಟ್ಟುಕೊಳ್ಳಲು ಒಪ್ಪಿದ್ದು ಹೇಗೆ, ಅವಳನ್ನು ಯೌಗಂಧರಾಯಣನು ಒಡಂಬಡಿಸಿದ್ದು ಹೇಗೆ ಎಂದು ಮುಂತಾದ ಪ್ರಶ್ನೆಗಳು ಬರುವುದಕ್ಕೆ ಅವಕಾಶವಿಲ್ಲದಂತಾಗಿದೆ ಪದ್ಮಾವತಿಯು ತನ್ನ ಮಾತಿಗೆ ತಾನೇ ಕಟ್ಟುಬಿದ್ದು "ನ್ಯಾಸರಕ್ಷೆ ಎಂಬುದು ಕಷ್ಟ," ಯೌಗಂಧರಾಯಣನ ಪ್ರಾರ್ಥನೆ "ದುಸ್ಸಾಧ್ಯ" ಎಂದು ಕಂಚುಕಿಯು ಹೆದರಿ ಎಚ್ಚರ ಕೊಟ್ಟರೂ, ಆವಂತಿಕೆಯನ್ನು ತನ್ನಲ್ಲಿ ಇರಿಸಿಕೊಳ್ಳುವಳು. ಇದು "ಸತ್ಯಸಂಧಳಾದ" ಅವಳ ಗುಣಕ್ಕೆ ತಕ್ಕ ಕಾರ್ಯ. ಇದು ಹೀಗಾಯಿತಲ್ಲ ಎಂದು ಪಶ್ಚಾತ್ತಾಪಪಡುತ್ತಾಗಲಿ, ಇಷ್ಟವಿಲ್ಲದೆ ಅರ್ಧ ಅರ್ಧ ಮನಸ್ಸಿನಿಂದಾಗಲಿ ಮಾಡಿದ್ದಲ್ಲ ಅವಳ ಸ್ವಭಾವವೇ ಅಂಥದು. ಮೇಲಾಗಿ, ಅವಳಿಗೆ ತಪೋಜನಗಳಲ್ಲಿ ತುಂಬ ಭಕ್ತಿ, ಅವರು ತನ್ನನ್ನು

ಏನಾದರೂ ಕೇಳಿದರೆ ಅದು ಒಂದು "ಅನುಗ್ರಹ" ವೆಂದೂ ಆಗ ತಾನು ಆ "ತಪೋವನಕ್ಕೆ ಬಂದುದು ಅದೃಷ್ಟವಶದಿಂದ ಸಾರ್ಥಕ" ವಾಗುವುದೆಂದೂ ಅವಳ ಭಾವನೆ ಈ ತಪೋವನ ಪಕ್ಷಪಾತವು ಅವಳಿಗೆ ಪಿತ್ರಾರ್ಜಿತವಾದದ್ದು ಆಗಲೂ ಅವಳ ತಾಯಿಯು ಆ ಆಶ್ರಮದಲ್ಲಿ ವಾಸಿಸುತ್ತಿದ್ದಳು

ವಾಸವದತ್ತೆಯನ್ನು ಕಂಡರೆ ಅವಳಿಗೆ ಆಗಲೇ ಎಷ್ಟೋ ಮಮತೆ! "ಬಾರಮ್ಮ! ಬಾ! ಈಗ ನಮ್ಮವಳಾದೆ!" ಎಂದು, ಗುಣವತಿಯರಾದ ಅತ್ತೆಯರು ಮನೆತುಂಬಿಸಿಕೊಂಡಾಗ ಪುಟ್ಟ ನೊಸೆಯನ್ನು ಬರಮಾಡಿಕೊಳ್ಳುವಂತೆ, ಅಂತಃಕರಣದಿಂದ ಆದರಿಸುವಳು; ಪರ ಪುರುಷರು ಬಂದರೆ ಎಲ್ಲಿ ಸಂಕೋಚಪಟ್ಟುಕೊಳ್ಳುವಳೋ, ತನ್ನ ಅಣ್ಣನನ್ನು ಕಾಣದೆಹೋದರೆ ಎಲ್ಲಿ ಕೊರಗುವಳೋ ಎಂದು ಆಗಲೇ ಅವಳ ಯೋಗಕ್ಷೇಮವು ಹತ್ತಿಕೊಳ್ಳುವುದು ಎಂದೂ ನೋಡದ, ಇನ್ನೂ ಯಾವ ಸಂಬಂಧವೂ ಇಲ್ಲದ, ವತ್ಸರಾಜನು "ಮೂರ್ಛೆ ಬಿದ್ದನೆಂದು ಕೇಳಿದೊಡನೆ" ಅವಳ "ಹೃದಯವು ಶೂನ್ಯಪ್ರಾಯವಾಗಿತ್ತು" ವಾಸವದತ್ತೆಯು ಸಂಚಿಗೆ ಸೇರಿದ್ದರೂ ತನ್ನನ್ನು ಯೌಗಂಧರಾಯಣನು ಪದ್ಮಾವತಿಯ ಹತ್ತಿರ ಬಿಟ್ಟುಹೋಗುತ್ತಾನೆಂದು ತಿಳಿದಿರಲಿಲ್ಲ ಪಟ್ಟದ ರಾಣಿಯಾಗಿ ಎದುರಿಲ್ಲದೆ ದವಲತ್ತು ಮಾಡುತ್ತಿದ್ದವಳು ಯೌಗಂಧರಾಯಣನ ವಿವೇಕ ಬುದ್ಧಿ ದೂರಾಲೋಚನೆಗಳ ಮೇಲೆ ಭರವಸೆಯಿಟ್ಟು, ಮನಸ್ಸಿನಲ್ಲಿ ಮನಸ್ಸಿಲ್ಲದೆ ತನ್ನ ಮೋಹದ ಗಂಡನನ್ನು ಆಗತಾನೆ ಅಗಲಿ, ಒಬ್ಬ ಸಾಮಾನ್ಯ ಬ್ರಾಹ್ಮಣ ಹೆಂಗಸಿನಂತೆ ಅವನ ಹಿಂದೆ ಬಂದಿದ್ದಳು ಇನ್ನೂ ಬರುತ್ತಿರುವಾಗಲೇ "ಅತಿಥಿಗಳಿಗೆ ಸ್ವಗೃಹದಂತೆ" ಇರಬೇಕಾದ ಋಷ್ಯಾಶ್ರಮದಲ್ಲಿ ಜನರನ್ನು ಒತ್ತರಿಸುತ್ತಿರುವುದನ್ನು ನೋಡಿ ತಾನೂ "ರಾಜಭಟರ ಕೈಯಿಂದ ನೂಕಿಸಿಕೊಳ್ಳಬೇಕಾದ ಸ್ಥಿತಿಗೆ ಬಂದೆ" ನೆಂದು ಸಂಕಟಪಟ್ಟುಕೊಳ್ಳುವಳು ಯೌಗಂಧರಾಯಣನೇನೋ ಅವಳನ್ನು ಸಮಾಧಾನಪಡಿಸುವುದಕ್ಕೋಸ್ಕರ "ನಿಜಸ್ಥಿತಿಯನ್ನು ಮರೆಸಿಕೊಂಡಿದ್ದಾಗ ದೇವತೆಗಳಿಗೂ ಇಂತಹ ತಿರಸ್ಕಾರಗಳು ತಪ್ಪಿದುವಲ್ಲ," "ಇವೆಲ್ಲಾ

ನೀನು ಮೊದಲು ಅನುಭವಿಸಿಬಿಟ್ಟ ವೈಭವಗಳೇ," "ಭಾಗ್ಯವಿತಾನಂ ಚಕ್ರಾರ ಪಂಕ್ತಿಯಂತಿರೆ ಪೊರಳ್ಗುಂ" ಎಂದು ಪುರಾಣ ಪುಣ್ಯಕಥೆ ನೀತಿ ವೇದಾಂತಗಳನ್ನೆಲ್ಲಾ ಓದುವನು. ಆದರೂ ಯಾವನೋ ದುರ್ಮದೋದ್ಧತನು ಚಲ ಭಾಗ್ಯದಿಂದ ಬೀಗಿ ಋಷ್ಯಾಶ್ರಮದಲ್ಲಿಯೂ ಜನರನ್ನು ನಿಷ್ಠುರಾಜ್ಞೆಯಿಂದ, ತಳ್ಳಿಸುತ್ತ ಪಾವನಾಶ್ರಮವನ್ನು ಪೋಲೆವಳ್ಳಿಗೆ ಸಾಟಿಮಾಡುತ್ತಿದ್ದನೆಂದು ಯೌಗಂಧರಾಯಣನಿಗೂ, ಹೀಗೆ ಪರಾಭವವಾಯಿತಲ್ಲ ಎಂದು ವಾಸವದತ್ತೆಗೂ ಮನಸ್ಸಿನಲ್ಲಿ ವ್ಯಥೆಯು ಇದ್ದೇ ಇತ್ತು ಈ ಸ್ಥಿತಿಯಲ್ಲಿ ಅವರು "ಧರ್ಮ ಪ್ರಿಯೆ"ಯಾದ ಪದ್ಮಾವತಿಯ ವಿಚಾರವನ್ನು ಕೇಳುವರು ಇವರ ನೈಸರ್ಗಿಕವಾದ ಸತ್ಸ್ವಭಾವವೂ, ನೈಮಿತ್ತಿಕವಾದ ಆತ್ಮೀಯತೆಯೂ ಕೂಡಲೆ ಅವಳಲ್ಲಿ "ಮಮತೆ"ಯನ್ನೂ, "ಸೋದರೀಸ್ನೇಹವನ್ನೂ" ಉಂಟುಮಾಡುವುವು ಹೀಗೆ ಮನಸ್ಸು ಸುಮುಖವಾಗಿದ್ದಾಗ ಪದ್ಮಾವತಿಯು ಪ್ರವೇಶಿಸುವಳು ಅವಳ ರೂಪು ಕುಲೋನ್ನತಿಗೆ ತಕ್ಕಂತೆ ಇದ್ದು ವಾಸವದತ್ತೆಯಂಥ ಸ್ತ್ರೀಯೂ ಮೆಚ್ಚುವಷ್ಟು ಶ್ಲಾಘ್ಯವಾದದ್ದು, ಮಧುರವಾದ ರೂಪಕ್ಕೆ ತಕ್ಕಂತೆ ಪ್ರಿಯವಾದ ಮಾತು, ಆದ್ದರಿಂದ ಅವಳಲ್ಲಿ ವಿಶ್ವಾಸವು ಹೆಚ್ಚುವುದು ಈಗ ಆಶ್ರಮದಲ್ಲಿದ್ದ ತಾಪಸಿಯು ಅವಳನ್ನು ಆದರಿಸಿ ಅವಳ ಮದುವೆಯ ಪ್ರಸ್ತಾಪವನ್ನೆತ್ತುವಳು ಚೇಟಿಯು "ಪ್ರದ್ಯೋತರಾಜನು ತನ್ನ ಮಗನಿಗಾಗಿ ದೂತರ ಮುಖದಿಂದ ಹೇಳಿ ಕಳುಹಿಸುತ್ತಿರುವನು" ಎಂದು ಹೇಳುವಳು ಪ್ರದ್ಯೋತನು ವಾಸವದತ್ತೆಯ ತಂದೆ, ಆದ್ದರಿಂದ ಅವಳಿಗೆ ಪದ್ಮಾವತಿಯು ತನ್ನ ಕುಟುಂಬಕ್ಕೆ ಸೇರಿದಂತೆ ಅನುರಾಗವುಂಟಾಗುತ್ತದೆ. ಆದ್ದರಿಂದ "ಮಂದಭಾಗ್ಯಳಾದ ನನಗೆ (ಪದ್ಮಾವತಿಯ ಹತ್ತಿರಕ್ಕೆ) ಹೋಗದಿದ್ದರೆ ಗತಿ ಏನು?" ಎಂದು ಗೊಣಗಿದರೂ ಅವಳಿಗೆ ಪದ್ಮಾವತಿಯ ಜೊತೆಯಲ್ಲಿರಲು ಮನಸ್ಸು ಒಡಂಬಡುವಂತಾಗುತ್ತದೆ

ಈಗ, ಲಾವಾಣಕದಲ್ಲಿ ಅಧ್ಯಯನಮಾಡುತ್ತಿದ್ದು ಹೊರಟು ಬಂದು ಬ್ರಹ್ಮಚಾರಿಯೊಬ್ಬನು ಅಲ್ಲಿಗೆ ಬಂದು ಆ ಗ್ರಾಮಕ್ಕೆ ಬೆಂಕಿ ಬಿದ್ದ ವೃತ್ತಾಂತವನ್ನು ವಿವರಿಸುವನು ಈತನೇನೋ, ಕೇಳಿದ್ದಕ್ಕೆ

ತಕ್ಕಷ್ಟು ಸಮಂಜಸವಾದ ಉತ್ತರವನ್ನು ಕೊಡುವ ವಿವೇಕಿ ಘಂತೆಯೂ, ನಮಗೆ ಆವಶ್ಯಕವಾದಷ್ಟೇ ವೃತ್ತಾಂತಗಳನ್ನು ತಿಳಿಸುವ ಆದರ್ಶ ವರ್ತಮಾನ ಪತ್ರಿಕೆಯಂತೆಯೂ ಪ್ರಕೃತಕ್ಕೆ ಬೇಕಾದಷ್ಟನ್ನು ಸಂಗ್ರಹವಾಗಿ ಹೇಳುವನು ಇದರಿಂದ ವಾಸವದತ್ತಾ ವತ್ಸರಾಜರಿಗಿದ್ದ ಗಾಢಪ್ರೇಮವೂ, ಯೌಗಂಧರಾಯಣ ರುಮಣ್ವಂತ ಮುಂತಾದವರ ಪ್ರಭುಭಕ್ತಿಯೂ ಗೊತ್ತಾಗುತ್ತವೆ ತನ್ನ ಪ್ರಿಯಪತ್ನಿಯು ಸತ್ತು ಹೋದಳೆಂದು ತಿಳಿದು ವತ್ಸರಾಜನು ದಗ್ಧಶೇಷವಾದ ಒಡವೆಗಳನ್ನು ಎದೆಗೆ ಒತ್ತಿಕೊಂಡು, ಹೊರಳಿ, ಅತ್ತು ಕರೆದು, ಮೂರ್ಛೆಹೋಗಿ ರುಮಣ್ವಂತ ಮುಂತಾದವರ ಉಪಚಾರವನ್ನು ಲಕ್ಷ್ಯಮಾಡದೆ " ತನ್ನ ಪ್ರಿಯೆ ಭಾರ್ಯೆಯು ಮತ್ತು ಇಷ್ಟಮಂತ್ರಿಯು ವಿಯೋಗವನ್ನು ಸಹಿಸ ಲಾರದೆ ತಾನೂ ಅದೇ ಬೆಂಕಿಯಲ್ಲಿ ಬಿದ್ದು ಪ್ರಾಣವನ್ನು ಕಳೆದು ಕೊಳ್ಳಲು ಯತ್ನಿಸಿ "ದ್ದನ್ನು ಕೇಳಿ ವಾಸವದತ್ತೆಯು, ತಾನು ಎಲ್ಲಿ ದ್ದೇನೆಂಬುದನ್ನೇ ಮರೆತು ಸಂಕಟಪಡುವಳು ಆದರೆ, ಆ ವಿಚಾರ ವಾಗಿ ಬಹಿರಂಗದಲ್ಲಿ ಸಂಕಟಪಡುವುದಕ್ಕುಂಟೇ, ಮತ್ತೊಬ್ಬರಿಗೆ ಹೇಳಿಕೊಳ್ಳುವುದಕ್ಕುಂಟೇ, ಮಾತನಾಡುವುದಕ್ಕಾದರೂ ಉಂಟೇ? ಹೀಗೆ ಅವಳು ಮೂಕನೋವನ್ನು ಅನುಭವಿಸುತ್ತಿರುವಾಗ, ಬ್ರಹ್ಮ ಚಾರಿಯ ಮೂಲಕ ವತ್ಸರಾಜನ ಗುಣಕಥನವನ್ನು ಕೇಳಿ, ತಾಪಸಿ ಚೇಟಿ ಪದ್ಮಾವತಿ ಮುಂತಾದವರೆಲ್ಲರಿಗೂ ಅವನಲ್ಲಿ ಪಕ್ಷಪಾತವು ಹುಟ್ಟಿ, ಅವನನ್ನು ಪುನಃ " ಬೇರೆ ಯಾವ ಪುಣ್ಯವತಿಯು ಕೈಹಿಡಿ ಯುವಳೋ " ಎಂದು ಯೋಚನೆಗೆ ಮೊದಲಾಗುತ್ತದೆ ಸ್ವಲ್ಪ ಹೊತ್ತಿಗೆ ಮುಂಚೆ ಪದ್ಮಾವತಿಯ ಮದುವೆಯ ಪ್ರಸ್ತಾಪ ಬಂದಿದ್ದು ಈ ಸಂದರ್ಭದಲ್ಲಿ ಅವಳಿಗೂ ಮನಸ್ಸು ವತ್ಸರಾಜನನ್ನು ಮದುವೆ ಮಾಡಿಕೊಳ್ಳುವುದರ ಕಡೆಗೆ ಹೋಗುತ್ತದೆ ಆದರೆ ಕವಿಯು ಇದನ್ನು ಬಹು ಗಂಭೀರವಾಗಿ ತೋರಿಸಿದ್ದಾನೆ ಮೊದಲು ತಾಪಸಿಯಿಂದ

> " ಆಹಾ! ಆ ಗ್ರಾಮಕ್ಕೆ ಅಗಂತುಕನಾಗಿ ಬಂದ ಈ ಬ್ರಹ್ಮ ಚಾರಿಯೂ ಹೀಗೆ ಪ್ರಶಂಸೆಮಾಡಬೇಕಾದರೆ, ಆ ರಾಜನು ಬಹಳ ಉತ್ತಮ ಗುಣವುಳ್ಳವನಾಗಿರಬೇಕಲ್ಲವೆ ? "

ಎಂದು ಅವನನ್ನು ಹೊಗಳಿಸಿ, ಅನಂತರ ಚೇಟಿಯಿಂದ

"ರಾಜಪುತ್ರಿ! ಅಂತಹ ಮಹನೀಯನನ್ನು ಬೇರೆ ಯಾವ ಪುಣ್ಯವತಿಯು ಕೈಹಿಡಿಯುವಳೊ?"

ಎಂದು ಪ್ರಶ್ನೆಮಾಡಿಸಿ, ಆಮೇಲೆ ಪದ್ಮಾವತಿಯಿಂದ

"ನನ್ನ ಹೃದಯವೂ ಇದನ್ನೇ ಆಲೋಚಿಸುತ್ತಿರುವುದು"

ಎಂದು "ಆತ್ಮಗತ"ವಾಗಿ ಹೇಳಿಸಿದ್ದಾನೆ ಹೀಗೆ, ಮೊದಲನೆಯ ಅಂಕದಲ್ಲಿ ನಾಯಕನನ್ನು ನೋಡುವುದಕ್ಕೆ ಮುಂಚೆಯೇ ಕವಿಯು ನಾಯಿಕೆಯ ಹೃದಯಭೂಮಿಯನ್ನು ಸರಿಮಾಡಿ ಅದರಲ್ಲಿ ಅನುರಾಗ ವನ್ನು ನೆಟ್ಟಿದ್ದಾನೆ ಕೊನೆಗೆ ಪದ್ಮಾವತಿ ವಾಸವದತ್ತೆಯರು ತಾಪ ಸಿಗೆ ನಮಸ್ಕರಿಸಲು, ಆಕೆ "ಅನುರೂಪನಾದ ಪತಿಯನ್ನು ಹೊಂದು" ಎಂದು ಪದ್ಮಾವತಿಗೂ, "ಶೀಘ್ರದಲ್ಲಿಯೇ ನಿನಗೆ ನಿನ್ನ ಪತಿಯೊಡನೆ ಸಮಾಗಮವುಂಟಾಗಲಿ" ಎಂದು ವಾಸವದತ್ತೆಗೂ ಆಶೀರ್ವಾದ ಮಾಡುವಳು ಆಕೆಯು ನಿಜವಾದ ತಪಸ್ವಿನಿ! ಮುಂದೆ ಹಾಗೆಯೇ ಆಗುವುದು!

ಎರಡು ಮೂರನೆಯ ಅಂಕಗಳು ಬಲು ಚಿಕ್ಕವು ಇವೆರಡೂ ಸೇರಿ ಮೊದಲನೆಯ ಅಂಕದ ಅರ್ಧದಷ್ಟಾಗುತ್ತವೆ ಇವುಗಳಲ್ಲಿ (ಮೊದಲು ನಿರರ್ಥಕವಾದ ಒಂದು ಸಣ್ಣ 'ಪ್ರವೇಶಕ'ವಾದಮೇಲೆ) ವತ್ಸರಾಜನಿಗೆ ಪದ್ಮಾವತಿಯೊಡನೆ ಮದುವೆಯಾಗುತ್ತದೆ ಎರಡ ನೆಯ ಅಂಕವು ಮೊದಲಾದಾಗ ಪದ್ಮಾವತಿಯು ಚೆಂಡಾಡುತ್ತಿರುವಳು ವಾಸವದತ್ತೆಯು ಆಗಲೆ ಅವಳೊಡನೆ ಸ್ನೇಹವನ್ನು ಸಂಪಾದಿಸಿ ಅಕ್ಕ ತಂಗಿಯರಂತೆ ಸಲುಗೆಯಿಂದಲೂ ಸರಸವಾಗಿಯೂ ಹಾಸ್ಯಮಾಡುತ್ತ ಮಾತನಾಡುತ್ತಿರುವಳು ಮದುವೆಗೆ ಬಂದ ಹುಡುಗಿ ಎದುರಿಗೆ ಇದ್ದರೆ ಅವಳ ಮದುವೆಯ ಪ್ರಸ್ತಾಪ ಬರದೆ ಇರುತ್ತದೆಯೆ? ವಾಸವದತ್ತೆ ಬಂದಿದ್ದದ್ದು ಅವಳ ಮದುವೆ ಮಾಡಿಸುವುದಕ್ಕೇ ಆದ್ದರಿಂದ ಚೆಂಡಾಟವನ್ನೇ ನೆಪಮಾಡಿಕೊಂಡು ಅವಳ ಮದುವೆಯ ಪ್ರಸ್ತಾಪವ ನ್ನೆತ್ತಿ ಅವಳ ಚೇಟಿಯಿಂದ ವತ್ಸರಾಜನು "ಬಹು ದಯಾಳು ಮತ್ತು ಪ್ರಣಯ ಸ್ವಭಾವವುಳ್ಳವ"ನಾದ್ದರಿಂದ ಪದ್ಮಾವತಿಯು ಅವನಲ್ಲಿ

ಅನುರಕ್ತಳಾಗಿರುವಳೆಂದು ಹೊರಡಿಸುವಳು ಪದ್ಮಾವತಿಯು ಅವನ ಸೌಂದರ್ಯಕ್ಕಾಗಲಿ ಐಶ್ವರ್ಯಕ್ಕಾಗಲಿ ಮೋಹಗೊಂಡವಳಲ್ಲ ಇದನ್ನು ಕೇಳಿ, ನೋಡಿ, ವಾಸವದತ್ತೆಗೆ ಸಂತೋಷ ಇನ್ನೂ ಚೇಟಿಯೇ "ಒಂದು ವೇಳೆ ಅವನು ಕುರೂಪಿಯಾಗಿದ್ದರೆ?" ಎಂದು ಪ್ರಶ್ನೆ ಹಾಕುವಳು ವಾಸವದತ್ತೆಗೆ ಇದು ಸೈರಿಸುವುದಿಲ್ಲ ಆದ್ದರಿಂದ ಪದ್ಮಾವತಿಯು ಇನ್ನೂ ಯೋಚಿಸುವುದಕ್ಕಿಂತ ಮುಂಚೆಯೇ, ತಾನು ಎಲ್ಲಿರುವೆನು ಯಾರೊಡನೆ ಮಾತನಾಡುತ್ತಿರುವೆನೆಂಬುದನ್ನು ಮರೆತು, ತಟ್ಟನೆ "ಛಿ! ಛಿ! ಎಂದಿಗೂ ಇಲ್ಲ! ವಾಸ್ತವದಲ್ಲಿ ಅವನು ಬಹಳ ರೂಪವಂತನು" ಎಂದು ಬಿಡುವಳು ಪ್ರೇಕ್ಷಕರಿಗೆ "ಅಯ್ಯೋ ಇನ್ನೇನು ಗತಿ, ಇವಳ ಗುಟ್ಟು ಹೊರಬಿದ್ದುಹೋಯಿತಲ್ಲ!" ಎನ್ನಿಸುತ್ತದೆ ಆದರೆ ಅವಳು ಚಾತುರ್ಯದಿಂದ "ಉಜ್ಜಯಿನೀ ನಗರದ ಜನರು ಹೀಗೆಂದು ಮಾತಾಡಿಕೊಳ್ಳುತ್ತಿದ್ದುದನ್ನು ಕೇಳಿದ್ದೆನು" ಎಂದು ಉತ್ತರಕೊಟ್ಟುಬಿಡುತ್ತಾಳೆ ಪದ್ಮಾವತಿಯು ಕೊಟ್ಟ ಉತ್ತರವು ಸಹಜವಾಗಿದೆ ಅವಳು "ಸರಿ! ಇರಬಹುದು! ಉಜ್ಜಯಿನಿಯಲ್ಲಿರತಕ್ಕವರಿಗೆ ಅವನು ಆಗಾಗ ಕಾಣಿಸಿಕೊಳ್ಳುತ್ತಲೇ ಇರಬೇಕಲ್ಲವೆ? ಸೌಂದರ್ಯವೆಂಬುದು ಎಂತಹವರ ಮನಸ್ಸನ್ನಾದರೂ ಆಕರ್ಷಿಸದಿರಲಾರದು" ಎನ್ನುವಳು ಪದ್ಮಾವತಿಯು ಚಾತುರ್ಯವನ್ನರಿಯದ ಋಜುಸ್ವಭಾವದ ಹುಡುಗಿಯಲ್ಲದಿದ್ದರೆ, ವಾಸವದತ್ತೆಗೆ ಈ ಮಾತಿನಿಂದ ಕೋಪ ಬರಬಹುದಾಗಿತ್ತು ಇಂಥ ಸನ್ನಿವೇಶಗಳು ಈ ನಾಟಕಗಳ ತುಂಬ ಬರುವುವು ಭಾಸನ ಕೌಶಲ್ಯವು ಈ ಸನ್ನಿವೇಶ ಕಲ್ಪನೆಯಲ್ಲಿ ಚೆನ್ನಾಗಿ ಕಂಡುಬರುವುದು ಇದರಿಂದ ಕಥೆಯೇನು ಬೆಳೆಯುವುದಿಲ್ಲ, ನಿಜ ಆದರೆ ನಾಟಕದಲ್ಲಿ ಮೊದಲೇ ತಿಳಿದಿರುವ ಕಥೆ ಬೆಳೆಯುವುದೇ ಮುಖ್ಯವಲ್ಲ. ಅದರಲ್ಲಿ, ಕಥೆಯ ಹಣ್ಣುಗಳಂತಿರುವ ಇಂಥ ರಸವತ್ತಾದ ಸನ್ನಿವೇಶಗಳನ್ನು ಕಲ್ಪಿಸಿ ಅವುಗಳಿಂದ ರಸವು ಸೂಸುವಂತೆ ಮಾಡಬೇಕು. ಹಸುವನ್ನು ಉಪಚರಿಸಿ ಆದರಿಸಿ ಹುಲ್ಲು ಹಿಂಡಿಗಳನ್ನು ತಿನ್ನಿಸುವುದೆಲ್ಲಾ ಅದರ ಮೊಲೆಗಳಿಂದ ಹಾಲನ್ನು ಎಳೆದುಕೊಳ್ಳುವುದಕ್ಕೆ, ನಾಟಕದಲ್ಲಿ ರಸವತ್ತಾದ

ಸನ್ನಿವೇಶಗಳು ಬರದೆ ಇದ್ದರೆ ಅದು ಗಾಡಿ ಎಳೆಯುವುದಕ್ಕೆ ಹಾಕುವ ಗೊಡ್ಡು ಹಸುವಿನಂತೆ ಆಗುತ್ತದೆ ಪಾತ್ರಗಳ ಗುಣ ಸ್ವಭಾವಗಳು ಹೊರಪಡುವುದು ಇಂಥ ಸನ್ನಿವೇಶಗಳಲ್ಲಿಯೇ ಗಿಡ ಮರಗಳ ಯೋಗ್ಯತೆಯು ಗೊತ್ತಾಗಬೇಕಾದರೆ ಹೂವು ಹಣ್ಣುಗಳ ಕಾಲದಲ್ಲಿ; ಹಾಗೆಯೇ ಮನುಷ್ಯರ ಯೋಗ್ಯತೆಯು ಗೊತ್ತಾಗಬೇಕಾದರೂ ಅವರಿಗೆ ಕಷ್ಟಸುಖ ಕೋಪತಾಪಗಳುಂಟಾಗುವಂಥ ಸಂದರ್ಭಗಳಲ್ಲಿ ಧರ್ಮ ಪಕ್ಷಪಾತವೂ ಪ್ರಭು ಪ್ರೀತಿಯೂ ಇರತಕ್ಕ ನಿಪುಣ ಮಂತ್ರಿಯಾದ ಯೌಗಂಧರಾಯಣನ ಸ್ವಭಾವವೂ, ತನ್ನ ಪತಿಯಲ್ಲಿ ಪೂರ್ಣ ಪ್ರೇಮ ವಿದ್ದರೂ ಅವನ ಮಂಗಳಾಕಾಂಕ್ಷೆಯಿಂದ ಸವತ್ನೀ ಸಹವಾಸಕ್ಕ ಒಪ್ಪಿ ಪದ್ಮಾವತಿಯನ್ನು ಕಂಡಂದಿನಿಂದ ಅವಳಲ್ಲಿ ತಂಗಿಗಿಂತ ಹೆಚ್ಚಾಗಿ ನಡೆದುಕೊಳ್ಳುತ್ತಿದ್ದ ವಾಸವದತ್ತೆಯ ಪ್ರೇಮಸ್ವಭಾವವೂ, ಸುಂದರಿಯೂ ಪ್ರೇಮಶಾಲಿನಿಯೂ ಋಜುಸ್ವಭಾವದವಳೂ ಆದ ಚಿಕ್ಕ ಹೊಸ ಹೆಂಡತಿ ಬಂದರೂ ಮೊದಲನೆಯ ಹೆಂಡತಿಯನ್ನು ಮರೆಯದೆ ಅವಳ ಗುಣಗಳನ್ನು ನೆನೆಸಿಕೊಂಡು ಗೋಳಾಡಿದ ವತ್ಸರಾಜನ ದಾಂಪತ್ಯಪ್ರೇಮವೂ ಕಂಡುಬರುವುದು ಇಂಥ ಸನ್ನಿವೇಶಗಳಲ್ಲಿಯೇ

ಭಾಸನು ಇಂಥ ರಸ ಸ್ಥಾನಗಳಾದ ಸನ್ನಿವೇಶಗಳನ್ನು ಕಲ್ಪಿಸಿ, ಒಂದು ವೃತ್ತಾಂತದಿಂದ ಮತ್ತೊಂದು ವೃತ್ತಾಂತಕ್ಕೆ ಹಾರಿಹೋಗುವನು ಇವೂ ಅನಿರೀಕ್ಷಿತವಾಗಿಯೂ ಹಠಾತ್ತಾಗಿಯೂ ತೋರಿಬರುವುವು ವತ್ಸರಾಜನ ಮದುವೆಯಾಗುವುದು ಹೀಗೆಯೇ ವಾಸವದತ್ತಾ ಪದ್ಮಾವತಿಯರು ಅರ್ಧ ಹಾಸ್ಯದಿಂದ ಇನ್ನೂ ಮದುವೆಯ ಮಾತನ್ನಾಡುತ್ತಿರುವ ಹಾಗೆಯೇ ಧಾತ್ರಿಯು ಬಂದು "ರಾಜಪುತ್ರಿಗೆ ಜಯವಾಗಲಿ! ಭರ್ತೃದಾರಿಕೆ, ಆಗಲೆ ನಿನ್ನನ್ನು ಕೊಟ್ಟಾಯಿತು!" ಎನ್ನುವಳು

ವಾಸವದತ್ತೆ—ಆರ್ಯೆ! ಯಾರಿಗೆ?

ಧಾತ್ರಿ—ವತ್ಸರಾಜನಾದ ಉದಯನನಿಗೆ!

ವಾಸವದತ್ತೆ—ಹಾಗಿದ್ದರೆ ಆ ಮಹಾರಾಜನು ಕ್ಷೇಮದಿಂದಿರುವನೆ?

ಆಗಲೂ ವಾಸವದತ್ತೆಗೆ ವತ್ಸರಾಜನ ಕ್ಷೇಮಚಿಂತನೆಯೇ ಹೊರತು

ವರನಿಗೆ ಮಂಗಳಸ್ನಾನವಾಗುತ್ತಿತ್ತು, ಈಗಾಗಲೇ ಅವನನ್ನು ಕಲ್ಯಾಣ ಮಂಟಪಕ್ಕೆ ಕರೆತರುತ್ತಿದ್ದರು! ಮಾಲೆಯನ್ನು ತೆಗೆದುಕೊಂಡು ಹೋಗಿಯೂ ಆಯಿತು, ಮದುವೆಯೂ ಆಗಿಹೋಯಿತು—ಆಗಿರ ಬೇಕು, ಅದರ ವರ್ಣನೆಯೇನೂ ಬಂದಿಲ್ಲ, ಅದನ್ನು ಅರಿಯದವರು ಯಾರು? (ಎರಡನೆಯ ಮದುವೆಯೆಂದು ಎಲ್ಲಾ ಆತುರದಲ್ಲಿ ನಡೆದು ಹೋಯಿತೇನೊ!) ಅರಮನೆಯೆಲ್ಲವೂ ಈ ಸಂತೋಷಸಂಭ್ರಮಗಳಲ್ಲಿ ತೇಲಿ ಮುಳುಗುತ್ತಿರುವಾಗ ವಾಸವದತ್ತೆಯು ಮಾತ್ರ ಗಂಟನ್ನು ಕಳೆದುಕೊಂಡವರಂತೆ ಸಂಕಟಪಡುತ್ತ ಹಾಸಿಗೆಯಲ್ಲಿ ಹೊರಳುತ್ತ ನಿದ್ರಮಾಡುವುದಕ್ಕೆ ಯತ್ನಿಸುತ್ತಿದ್ದಳು!

ನಾಲ್ಕನೆಯ ಅಂಕವು ಮೊದಲಾಗುವಾಗ ಮದುವೆ ನಡೆದು ಕೆಲವು ದಿನಗಳಾಗಿವೆ ಅಳಿಯನೂ ಅವನ "ಗಿಳಿಯ"ನೂ ಇನ್ನೂ ಮಾವನ ಮನೆಯಲ್ಲಿಯೇ ಇದ್ದುಕೊಂಡಿದ್ದಾರೆ ಅವರನ್ನು ಇನ್ನೂ ಯಾರೂ ಅಸಡ್ಡೆಮಾಡುವಂತಾಗಿಲ್ಲ ಪದ್ಮಾವತಿಗೆ ಆಗಲೇ ರಾಜನ ಮೇಲೆ ಬಹು ಪ್ರೀತಿ ಒಂದು ಹೂವು ಕುಯ್ಯಬೇಕಾದರೂ ಅದನ್ನು ತಾನು ಮುಡಿದು ಸಂತೋಷಪಡುವುದಕ್ಕಿಂತ ತನ್ನ ಗಂಡನು ಗಿಡದ ಮೇಲೆ ನೋಡಿ ಸಂತೋಷಪಡಲಿ ಎಂಬ ಆಶೆ! "ಅವನನ್ನು ಸ್ವಲ್ಪ ಹೊತ್ತು ಕಾಣದಿದ್ದರೂ ಮನಸ್ಸು ತಪಿಸುವುದು" ಆದರೆ ಅವನ ಮನಸ್ಸು ಮಾತ್ರ ವಾಸವದತ್ತೆಯನ್ನು ನೆನೆನೆನೆಸಿಕೊಂಡು ದುಃಖಿಸು ತ್ತಿರುವುದು "ಭಾರ್ಯಾದುಃಖಂ ಪುನರ್ಭಾರ್ಯಾ" ಎಂಬ ಹೇಳಿ ಕೆಯು ಅವನಿಗೆ ಅನ್ವಯಿಸುವುದಿಲ್ಲ ಅವಳು "ಅನುಪಮ ಗುಣ ರೂಪ ವಿಭವದಿಂದ" ಅಭಿಮತೆಯಾಗಿದ್ದರೂ ವಾಸವದತ್ತೆಯಲ್ಲಿ ಲಗ್ನವಾಗಿದ್ದ ಅವನ ಮನಸ್ಸನ್ನು ಎಳೆದುಕೊಳ್ಳುವುದು ಅವಳಿಗೆ ಅಸಾಧ್ಯವಾಗಿತ್ತು ಇದು ವಾಸವದತ್ತೆ ಪದ್ಮಾವತಿಯರಿಬ್ಬರಿಗೂ ಗೊತ್ತಿತ್ತು ಆದರೆ ಅವರಿಗೆ ಅದಕ್ಕಾಗಿ ಪರಸ್ಪರ ಮಾತ್ಸರ್ಯವಿಲ್ಲ, ಕೋಪವಿಲ್ಲ. ಏಕೆಂದರೆ ಪದ್ಮಾವತಿಯದು ಅಂಥ ಉದಾರಗುಣ, ಮತ್ತು ರಾಜನು ತನ್ನನ್ನು ಚೆನ್ನಾಗಿ ಪ್ರೀತಿಸುತ್ತಿದ್ದನೆಂದು ಅವಳು ಬಲ್ಲಳು ಆದರೆ ಮೊದಲನೆಯ ಹೆಂಡತಿಯನ್ನೂ ಹೀಗೆಯೇ ಪ್ರೀತಿ

ಸುತ್ತಿದ್ದನೇ ಎಂದು ಸಂದೇಹ (ವಾಸವದತ್ತೆಯು ಹಿಂದಿನಂತೆಯೇ ಎಚ್ಚರತಪ್ಪಿ "ಇದಕ್ಕಿಂತಲೂ ಹೆಚ್ಚಾಗಿ ಅವಳನ್ನು ಪ್ರೀತಿಸುತ್ತಿದ್ದನು" ಎಂದುಬಿಟ್ಟು ಉಪಾಯವಾಗಿ ತೊಡರಿನಿಂದ ಪಾರಾಗುವಳು) ಇದನ್ನು ಊಹಿಸುವುದಕ್ಕೆ ಅವಳಿಗೆ ಬೇರೆ ಕಾರಣವೂ ಇತ್ತು "ತನಗೂ ವೀಣೆ ಕಲಿಸಿಕೊಡು" ಎಂದು ಕೇಳಿದ್ದಕ್ಕೆ ಉದಯನನು "ಮಾತಾಡದೆ ಸ್ವಲ್ಪ ದೊಡ್ಡದಾಗಿ ನಿಟ್ಟುಸಿರನ್ನು ಮಾತ್ರ ಬಿಟ್ಟು ಸುಮ್ಮನಿದ್ದನು" ಹೊಸದಾಗಿ ಮದುವೆಯಾದ ಆ ಸುಕುಮಾರಿಯ ಮುಂದೆ ವಾಸವದತ್ತೆಯ ವೃತ್ತಾಂತವನ್ನೆತ್ತಿ ಅವಳ ಮನಸ್ಸನ್ನು ನೋಯಿಸ್ಸುವುದಕ್ಕೆ ಅವನಿಗೆ ಇಷ್ಟವಿರಲಿಲ್ಲ ಬಲವಂತಪಡಿಸಿ ಅವನ ಮನಸ್ಸನ್ನು ನೋಯಿಸಲು ಅವಳಿಗೂ ಇಷ್ಟವಿರಲಿಲ್ಲ. ಈ ಮಾತೆಲ್ಲ ನಡೆಯುತ್ತಿರುವಾಗ ಕವಿಯು ವಾಸವದತ್ತಾ ಪದ್ಮಾವತಿಯರಿರುವ ಲತಾಮಂಟಪದ ಬಾಗಿಲಿಗೇ ಬಹು ಕುಶಲತೆಯಿಂದ ವತ್ಸರಾಜ ವಸಂತಕರನ್ನು ತಂದು ಕೂರಿಸುವನು ಶಾಕುಂತಲದಂತೆ ಇಲ್ಲಿಯೂ ದುಂಬಿಯಿಂದ ಸಂವಿಧಾನಕ್ಕೆ ತುಂಬ ಉಪಕಾರವಾಗುವುದು ಹೊಸದಾಗಿ ಮದುವೆಯಾಗಿ ಸಂಕಲಿಕೆಯ ಧೋತ್ರವು ಇನ್ನೂ ಮಾಸದೆಯೇ ಇದ್ದಿರಬಹುದಾದ ಕಾಲದಲ್ಲಿ ಈ ಮದುವಣಿಗನಾದ ರಾಜನು–ಆ ದುಂಬಿಗಳನ್ನು ಓಡಿಸಬೇಡ, ಅವು "ಎಮ್ಮಿಂದದೆ ನಿಜ ದಯಿತಾವಿಯೋಗಮೊಂದುಗುಂ" ಎನ್ನುವನು! ಪದ್ಮಾವತಿಯು ಮಂಟಪದ ಒಳಗೆ ಇರದೇ ತನ್ನ ಹತ್ತಿರವೇ ಇದ್ದರೂ ಅವನು ಅದೇ ಮಾತನ್ನಾಡುತ್ತಿದ್ದನೆಂದು ತೋರುತ್ತದೆ! ವಾಸವದತ್ತೆಯು ಒಳಗಿನಿಂದಲೇ ಇಂಥ ರಾಜನನ್ನು ನೋಡಿ ಸಮಾಧಾನವನ್ನೂ ಕಣ್ಣೀರನ್ನೂ ತಂದುಕೊಳ್ಳುವಳು ತನ್ನ ಪ್ರಾಣಪ್ರಿಯನಾದ ಗಂಡನನ್ನು ಎಷ್ಟೋದಿನದ ಮೇಲೆ ಕಂಡರೂ ಈಗ ಅವನೊಡನೆ ಮಾತನಾಡುವುದಕ್ಕುಂಟೇ, ಕಣ್ಣುತುಂಬ ನೋಡುವುದಕ್ಕಾದರೂ ಉಂಟೇ, ಅವನ ಮುಂದೆ ಕಾಣಿಸಿಕೊಳ್ಳುವುದಕ್ಕುಂಟೇ? ಮತ್ತೊಂದು ಸಲ ಚಾತುರ್ಯದಿಂದ ಸುಳ್ಳು ಹೇಳಿ ಮಾನವನ್ನು ಕಾಪಾಡಿಕೊಳ್ಳಬೇಕಾಗುವುದು ಅವಳ ಸಂಕಟವು ಪ್ರೇಕ್ಷಕರಿಗೆ ಗೊತ್ತು ವಾಸವ

ದತ್ತೆಗೆ ತನ್ನ ಗಂಡನು 'ವಿರಚಿಕೆ' ಮುಂತಾದ ಇತರ ಅಂತಃಪುರ ಸ್ತ್ರೀಯರಲ್ಲಿ ಅನುರಕ್ತನಾಗಿದ್ದನೆಂದು ಹಿಂದೆ ಸ್ವಲ್ಪ ಮನಃ ಕಷಾಯ ವಿದ್ದಿರಬಹುದು. ಆದರೆ ಈಗ ವಿರಹದಿಂದಲೂ ತಾನೇ ಪರೋಕ್ಷದಲ್ಲಿ ಕಿವಿಯಾರ ಕೇಳಿದ ಮಾತುಗಳಿಂದಲೂ ರಾಜನು ತನ್ನಲ್ಲಿ ಎಷ್ಟು ಪ್ರೀತಿಯಿಟ್ಟಿದ್ದನೆಂದು ಗೊತ್ತಾಗಿ ಅವಳಿಗೆ ಪ್ರಣಯವು ಉಕ್ಕಿ ಬರುತ್ತಿತ್ತೆಂದು ತೋರುತ್ತದೆ ಈ ಸ್ಥಿತಿಯಲ್ಲಿ ಅವಳು ಗಂಭೀರವಾಗಿರಬೇಕು! ಎಂಥ ವಿಷಮಸಂಕಟ! ಈ ಸಮಯಕ್ಕೆ ಸರಿಯಾಗಿ ವಿದೂಷಕನು ವತ್ಸರಾಜನನ್ನು ಧರ್ಮಸಂಕಟಕ್ಕೆ ಸಿಕ್ಕಿಸಿ ಅವನ ಹೃದಯದಲ್ಲಿದ್ದ ವಾಸವದತ್ತಾ ಪಕ್ಷಪಾತವನ್ನು ಹೊರಪಡಿಸುವನು ಆದರೂ ಪದ್ಮಾವತಿಗೆ ಸಿಟ್ಟಿಲ್ಲ ಇನ್ನೂ, ವಸಂತಕನು "ಎಷ್ಟು ಕಿರುಕುಳದ ಸ್ವಭಾವದವನು!" ರಾಜನನ್ನು ಸುಮ್ಮನೇ ಪೀಡಿಸುತ್ತಾನಲ್ಲ ಎಂದು ನೊಂದುಕೊಳ್ಳುವಳು ಇದನ್ನು ಕಂಡರೆ ವಾಸವದತ್ತೆಗಿಂತಲೂ ಪ್ರೇಕ್ಷಕರಿಗೆ ಪದ್ಮಾವತಿಯಲ್ಲಿ ಹೆಚ್ಚು ಪ್ರೀತಿ ಗೌರವಗಳು ಹುಟ್ಟುವುವು ತನ್ನ ಗಂಡನು ತನ್ನ ಸವತಿಯನ್ನು ತನಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಾನೆಂದು ತಿಳಿದೂ ತಿಳಿದೂ, ಅವನ ಮೇಲೂ ಅವಳ ಮೇಲೂ ಶಾಂತಳಾಗಿರುವ ಹೆಂಗಸೇ ಇರಲಾರಳು! ಚೇಟಿಗೂ ಅವನು "ನಿರ್ದಯನು" ಎಂದು ತೋರುವುದು ಆಗ ಪದ್ಮಾವತಿಯು ತನ್ನ ಸಹಜವಾದ ದೊಡ್ಡ ಗುಣದಿಂದ

> "ಸಖಿ, ಛಿ! ಛಿ! ಹಾಗೆ ಎಣಿಸಬೇಡ ಈಗಲೂ ಆ
> ವಾಸವದತ್ತೆಯಲ್ಲಿ ಅಷ್ಟೊಂದು ಪ್ರೀತಿಯನ್ನಿಟ್ಟು, ಆಕೆಯ ಗುಣ
> ಗಳನ್ನು ಪ್ರಶಂಸೆಮಾಡುತ್ತಿರುವ ಆರ್ಯಪುತ್ರನನ್ನು ನಿರ್ದಯ
> ನೆಂದು ಹೇಗೆ ಹೇಳಬಹುದು? ಆವನೇನೋ ಬಹಳ ದಯಾಳುವೆ!"

ಎಂದು ತನ್ನ "ವಂಶ ಗೌರವಕ್ಕೆ ತಕ್ಕ ಮಾತನ್ನು" ಆಡುವಳು

ವಸಂತಕನಿಗೆ ಮಾತ್ರ ವಾಸವದತ್ತೆಯನ್ನು ಕಂಡರೆ ಹೆದರಿಕೆ (ರಾಜನಿಗೂ ಅದು ಸ್ವಲ್ಪ ಇದ್ದೇ ಇತ್ತು.) ಆದರೆ ಅವಳು "ಬಹಳ ಇಷ್ಟಳು" ಪದ್ಮಾವತಿಯಲ್ಲಿ ಆ ಹೆದರಿಕೆ ಇಲ್ಲದ್ದರಿಂದಲೂ ಅವಳಲ್ಲಿ (ವಾಸವದತ್ತೆಯಲ್ಲಿದ್ದಂತೆ ?) "ಕೋಪ ಅಹಂಕಾರಗಳಿಲ್ಲದೆ" ಯಾವಾ

ಗಲೂ ಪ್ರಿಯವನ್ನೇ ನುಡಿಯುತ್ತ ಬಹಳ ದಾಕ್ಷಿಣ್ಯಪ್ರಕೃತಿಯುಳ್ಳ ವಳಾದ್ದರಿಂದಲೂ ಆವಳು ಅವನನ್ನು ಹುಡುಕಿಕೊಂಡು ಬಂದು ತಿಂಡಿ ಕೊಡುತ್ತಿದ್ದದ್ದರಿಂದಲೂ ಅವಳಲ್ಲಿ ಆವನಿಗೆ ಹೆಚ್ಚು ಪಕ್ಷಪಾತವೆಂದು ತೋರುತ್ತದೆ! ಇದನ್ನು ವತ್ಸರಾಜನು ತನ್ನ ಸ್ನೇಹಿತನ ಬಾಯಿಂದ ಹೊರಡಿಸಿ ವಾಸವದತ್ತೆಗೆ ತಿಳಿಸುವೆನೆಂದು ಹೆದರಿಸುವನು! ಹೀಗೆ ವಾಸವದತ್ತೆಯ ನೆನವು ಬಂದು ರಾಜನು ಅಳುವುದಕ್ಕೇ ಮೊದಲು ಮಾಡುವನು ಆಗಲೂ ಪ್ರಿಯವಾದ ಮಾತುಗಳು ನಡೆಯುತ್ತಿದ್ದದ್ದನ್ನು ತಪ್ಪಿಸಿದ್ದಕ್ಕಾಗಿ ಪದ್ಮಾವತಿಗೆ "ಕೇಡಿಗನಾದ ಆ ವಸಂತಕನ" ಮೇಲೆ ಸಿಟ್ಟೇ ಹೊರತು ವತ್ಸರಾಜನಮೇಲೆ ಆಕ್ಷೇಪಣೆಯಿಲ್ಲ ಹೀಗಿರಲು ತನ್ನ ಪತಿಯ ಸಂತೋಷ ಸಮಾಧಾನಗಳನ್ನೇ ಮುಖ್ಯ ವಾಗಿ ಎಣಿಸಿ ವಾಸವದತ್ತೆಯು ಪದ್ಮಾವತಿಯನ್ನು ಅವನಲ್ಲಿಗೆ ಕಳು ಹಿಸಿ ತಾನು ಹೊರಟುಹೋಗುವಳು! ಸಹಜವಾದ ಪತಿಪ್ರೇಮ ವೆಂಬುದು ಅಂತಹುದು ಯಾವ ಪ್ರೇಮವಾದರೂ ಸರಿಯೆ ಅದು ಸಹಜವಾದ್ದೆಂಬುದಕ್ಕೆ ಅದು ಸ್ವಸುಖನಿರಭಿಲಾಷವಾಗಿ ಸ್ವಾರ್ಥ ತ್ಯಾಗಪೂರ್ವಕವಾಗಿರುವುದೇ ಗುರುತು ಅಷ್ಟುಹೊತ್ತಿಗೆ ನೀರು ತರುವುದಕ್ಕೆಂದು ಹೋಗಿದ್ದ ವಸಂತಕನು ನೀರನ್ನು ತಂದು, ಪದ್ಮಾ ವತಿಗೆ ಒಂದು ಸುಳ್ಳುಹೇಳಿ, ಅವಳ ಕೈಯಲ್ಲಿಯೇ ನೀರನ್ನು ಕೊಟ್ಟು ರಾಜನನ್ನು ಉಪಚರಿಸುವಂತೆ ಹೇಳುವನು ಆಕೆಯು ಸುಳ್ಳಿಗೆ ಕೋಪಿಸಿಕೊಳ್ಳದೆ "ರಾಜನ ಸುಗುಣಗಳೇ ಪರಿಜನಕ್ಕೂ ಬರುವುವು" ಎಂದು ಸಂತೋಷಪಟ್ಟುಕೊಳ್ಳುವಳು ರಾಜನದು ಅಷ್ಟು ನಿರ್ಮಲ ವಾದ ಮನಸ್ಸಲ್ಲ ಆದ್ದರಿಂದ ವಿದೂಷಕನ ಸುಳ್ಳನ್ನು ಮರೆಹೊಕ್ಕು "ಪಾಪ, ಇನ್ನೂ ಹೊಸದಾಗಿ ಮದುವೆಯಾದ ಹುಡುಗಿ, ನಿಜ ಹೇಳಿದರೆ ನೊಂದುಕೊಳ್ಳುತ್ತಾಳೆ" ಎಂದು ತಮ್ಮ ಸುಳ್ಳನ್ನು ಸಮರ್ಥಿಸಿ ಕೊಳ್ಳುವನು

ಈ ಅಂಕದಲ್ಲಿಯೂ ಕವಿಯ ಸಂವಿಧಾನ ಕೌಶಲ್ಯವೂ ಸನ್ನಿವೇಶ ಕಲ್ಪನಾ ಚಾತುರ್ಯವೂ ಚೆನ್ನಾಗಿ ಗೊತ್ತಾಗುತ್ತದೆ ಮನೆಯಲ್ಲಿ ಇರುವ ಒಂದೆರಡು ಸಾಮಗ್ರಿಗಳಿಂದಲೇ, ಮೂರು ನಾಲ್ಕು ಪಾತ್ರೆ

ಗಳಲ್ಲಿಯೇ, ಹತ್ತಾರು ರುಚಿರುಚಿಯಾದ ಅಡಿಗೆ ಮಾಡಬಲ್ಲ ನಿಪುಣೆಯಾದ ಗೃಹಿಣಿಯಂತೆ, ಕವಿಯು ಮುಂದಿರುವ ಒಂದೆರಡು ಪಾತ್ರಗಳಲ್ಲಿಯೇ, ಹಳೆಯ ಕಥಾ ಸಾಮಗ್ರಿಗಳಿಂದಲೇ, ಸುಂದರವಾಗಿ ಕಂಗೊಳಿಸುವ ಮನೋಹರವಾದ ರಸ ಪದಾರ್ಥಗಳನ್ನು ಸೃಷ್ಟಿಸಿದ್ದಾನೆ— ಪ್ರತಿಯೊಂದು ಪುಟದಲ್ಲಿಯೂ ಇದಕ್ಕೆ ಒಂದು ಎರಡು ಉದಾಹರಣೆಗಳು ಸಿಕ್ಕುತ್ತವೆ. ವತ್ಸರಾಜನಿಗೆ ವಾಸವದತ್ತೆಯಲ್ಲಿ ಹೆಚ್ಚು ಪ್ರೀತಿಯೆಂಬ ಪ್ರಸ್ತಾಪ ಬರುವಂತೆ ಪದ್ಮಾವತಿ ಮಾತು ತೆಗೆದದ್ದು, ವತ್ಸರಾಜ ವಸಂತಕರು ಲತಾಗೃಹದ ಬಾಗಿಲಲ್ಲೇ ನಿಲ್ಲುವಂತೆ ಚೇಟಿಯು ದುಂಬಿಗಳನ್ನು ಎಬ್ಬಿಸಿದ್ದು, ವಾಸವದತ್ತೆಯು ಅಲ್ಲಿಂದ ತಪ್ಪಿಸಿಕೊಂಡು ಹೋಗುವಂತೆ ವತ್ಸರಾಜನ ಕೈವಸ್ತ್ರದಿಂದ ಅವನ ಮುಖವನ್ನು ಮುಚ್ಚಿಸಿದ್ದು—ಇವು ಕೆಲವು ಉದಾಹರಣೆಗಳು

ಐದನೆಯ ಅಂಕದಲ್ಲಿ ಮದುವೆಯು ಇನ್ನೂ ಸ್ವಲ್ಪ ಹಳೆಯದಾಗಿದೆ ಆದರೂ ಪದ್ಮಾವತೀ ವಾಸವದತ್ತೆಯರಿಗೆ ಮಾತ್ಸರ್ಯೋದಯವಾಗಿಲ್ಲ, ಸ್ನೇಹವು ಕಮ್ಮಿಯಾಗಿಲ್ಲ "ಪದ್ಮಾವತಿಗೆ ತಲೆನೋವೆಂದು ಹೇಳಿದರೆ ಸಾಕು, ಅವಳು ತಾನಾಗಿಯೇ ಬರುವಳು" ಬಂದು "ಏನಾದರೂ ಕಥೆಗಳನ್ನು ಹೇಳುತ್ತ ರಾಜಕುಮಾರಿಗೆ ತಲೆನೋವಿನ ಬಾಧೆಯು ಅಷ್ಟಾಗಿ ತೋರದಂತೆ ವಿನೋದಪಡಿಸುವಳು" ರಾಜನಿಗೆ "ದಿವ್ಯರೂಪಸಂಪನ್ನೆಯುಂ ಒಳ್ಗುಣಕ್ಕೆಡೆಯುಂ ಆದ ವರಾಂಗಿಯ ಲಾಭದಿಂದ ದುಃಖವೊಂದಿನಿಸು ಶಾಂತಿಯನಾಂತವೊಲ್" ಇದ್ದರೂ, ವಾಸವದತ್ತೆಯ ಹುಚ್ಚು ಹಾಗೆಯೇ ಇದೆ. ಅದನ್ನು ಅವನೂ ಬಲ್ಲನು

ಲಲನಾರತ್ನಮವಂತಿರಾಜನ ಗುಣಕ್ಕೊಕ್ಕಿರ್ದ ಸತ್ಪುತ್ರಿ ಕೋ
ಮಲೆ ಲಾವಾಣಕವಹ್ನಿಯಿಂ ಹಿಮಹತಾಬ್ಜಶ್ರೀಯವೋಲ್ ನಾಡೆ ಬೆಂ
ದಳಿದೀಗಳ್ ಪಲಕಾಲವಾಯ್ತು! ಪೆರತೊರ್ವಳ್ ಸೂರೆಗೊಂಡಿರ್ದುಮೆ
ನ್ನೊಲವಂ ಮನ್ಮನಮಿನ್ನುಮಾಸತಿಯನೇಕಾಸಕ್ತಿಯಿಂ ಚಿಂತಿಕುಂ ||

ಎಂದು ಅವನೇ ದುಃಖವನ್ನೂ ಆಶ್ಚರ್ಯವನ್ನೂ ಪಟ್ಟುಕೊಳ್ಳುತ್ತಾನೆ. ಆದರೂ ಒಂದುಸಾರಿ ಕೈನೊಂದವನಾದ್ದರಿಂದ ಪದ್ಮಾವತಿಗೆ

ತಲೆನೋವೆಂದು ಕೇಳಿದ ಕೂಡಲೆ ಅಷ್ಟಕ್ಕೇ "ಅಪಾಯ ಶಂಕೆ" ಯಿಂದ ಅವಳನ್ನು ನೋಡುವುದಕ್ಕೆ ಹೊರಡುವನು ಪದ್ಮಾವತಿಯು ಸಮುದ್ರಗೃಹಕ್ಕೆ ಬಂದಿರುವುದಿಲ್ಲ (ಎಲ್ಲಿಂದ ಬರಬೇಕಾಗಿತ್ತೋ, ಏಕೆ ಬಂದಿರಲಿಲ್ಲವೋ ತಿಳಿಯದು !) ಅದನ್ನು ರಾಜನು ತಾರ್ಕಿಕನಂತೆ ಕಾರ್ಯಕಾರಣಭಾವವಿಮರ್ಶೆಯಿಂದ ನಿಷ್ಕರ್ಷೆ ಮಾಡಿ ಅವಳಿಗೆಂದು ಸಿದ್ಧಮಾಡಿದ್ದ ಹಾಸಿಗೆಯಲ್ಲಿಯೇ ಮಲಗಿಕೊಳ್ಳುವನು ವಿದೂಷಕನು ಕಥೆ ಹೇಳಬೇಕಾಗಿ ಉಜ್ಜಯಿನಿಯ ಪ್ರಸ್ತಾಪವನ್ನೆತ್ತುವನು (ಮೂಲದಲ್ಲಿದ್ದ ವಾಸವದತ್ತೆಯ ಕುರುಡು ತಮ್ಮನ ಸ್ಥಾನದಲ್ಲಿ ಕವಿಯು ನಾಟಕಕ್ಕೆ ಅನುರೂಪನೂ ಸಂಪ್ರದಾಯಸಿದ್ಧನೂ ಆದ ವಿದೂಷಕನನ್ನು ತಂದು ಹಾಕಿದ್ದಾನೆ ಈ ಕೆಲಸವನ್ನು ವಾಸವದತ್ತೆಯು ಅವನೊಡನೆ ಹಂಚಿಕೊಂಡು ನಾಯಿಕೆಯನ್ನು ವಿನೋದಪಡಿಸುತ್ತಿರುತ್ತಾಳೆ ) ಉಜ್ಜಯಿನಿಯ ಪ್ರಸ್ತಾಪವನ್ನೆತ್ತಿದ ಕೂಡಲೆ ರಾಜನಿಗೆ ವಾಸವದತ್ತೆಯು ತನ್ನ ಮೇಲೂ ಅವಳ ಕಡೆಯ ಜನಗಳ ಮೇಲೂ ತೋರಿಸುತ್ತಿದ್ದ ಅಪಾರವಾದ ಪ್ರೇಮವು ಜ್ಞಾಪಕಕ್ಕೆ ಬಂದು, ಆ ಯೋಚನೆಯಲ್ಲಿಯೇ ಇದ್ದು, ತನ್ನ ಸ್ನೇಹಿತನು "ಬ್ರಹ್ಮದತ್ತರಾಯ, ಕಾಂಪಿಲ್ಯನಗರ" ದ ಪಾಠವನ್ನು ಗಟ್ಟಿಮಾಡುತ್ತಿರಲು ನಿದ್ರೆಹೋಗಿಬಿಡುವನು ಈ ಸಮಯದಲ್ಲಿ ಅಲ್ಲಿಗೆ ವಾಸವದತ್ತೆಯನ್ನು ತಂದುಬಿಡುವುದಕ್ಕೆ ಕವಿಯು ಚಳಿಯನ್ನು ತಂದೊಡ್ಡಿ, ಕಂಬಳಿ ತರುವುವಕ್ಕೆಂದು ವಸಂತಕನನ್ನು ಓಡಿಸುವನು ವಾಸವದತ್ತೆಯ ಜೊತೆಯಲ್ಲಿ ಚೇಟಿಯು ಬಂದಿದ್ದು, ತಲೆಗೆ ಹಾಕುವ ಲೇಪನವನ್ನು ತರುವುದಕ್ಕೆಂದು ಹೊರಟು ಹೋಗುವಳು ಈ ಸಣ್ಣ ಪಾತ್ರಗಳನ್ನು ಓಡಿಸಿ ರಾಜರಾಣಿಯರನ್ನು ಏಕಾಂತದಲ್ಲಿ ಸೇರಿಸುವುದಕ್ಕೆ ಕವಿಯು ಕಲ್ಪಿಸಿರುವ ನೆಪಗಳು ಅವನ ರಚನಾ ನೈಪುಣ್ಯವನ್ನು ತೋರಿಸತಕ್ಕವಾಗಿವೆ ಸಾಮಾನ್ಯ ನಾಟಕಕರ್ತರಿಗೆ ಇಂಥ ಕಡೆಗಳಲ್ಲಿ ಬುದ್ಧಿ ಓಡುವುದು ಕಷ್ಟ ವಾಸವದತ್ತೆಗೆ ಪದ್ಮಾವತಿಯ ತಲೆನೋವಿನ ವಿಮರ್ಶೆಯು ವತ್ಸರಾಜನ ದೃಷ್ಟಿಯಿಂದ—ಪದ್ಮಾವತಿಯು ಸ್ವಸ್ಥಳಾಗಿದ್ದರೆ ಅವಳು ತನ್ನ ಪ್ರಿಯಪತಿಯ "ಮನ

ಸ್ಸಿಗೆ ಉಲ್ಲಾಸವನ್ನು ಕೊಡಬಹುದು” ಎಂದು ಅವಳ ಯೋಚನೆ. ಪದ್ಮಾವತಿಯ ಮೇಲಣ ಪ್ರೇಮವೂ ಕಮ್ಮಿಯಲ್ಲ, ಅವಳ ಹತ್ತಿರ ಯಾರೂ ಇಲ್ಲವೆಂದು ಕನಿಕರಪಟ್ಟು “ದೂರದಲ್ಲಿ ಬೇರೆಯಾಗಿ ಕುಳಿತರೆ ತನ್ನಲ್ಲಿ ನನಗೆ ಸ್ನೇಹವು ಕಡಿಮೆಯೆಂದು ತಿಳಿಯಬಹುದು” ಎಂದು ಶಂಕಿಸಿ, ಆ ಹಾಸಿಗೆಯ ಮೇಲೆ ಕುಳಿತುಕೊಳ್ಳುವಳು ಕೊನೆಗೆ ಅರ್ಧ ಹಾಸಿಗೆ ಬಿಟ್ಟು ಮಿಕ್ಕ ಅರ್ಧ ಹಾಸಿಗೆಯಲ್ಲಿ ಮಾತ್ರ (ಮುಸುಗುಹಾಕಿಕೊಂಡೋ ಕತ್ತಲೆಯಲ್ಲಿಯೋ (!) ಒಂದು ವ್ಯಕ್ತಿಯು ಮಲಗಿದ್ದರಿಂದ ಅದನ್ನು ಪದ್ಮಾವತಿಯೆಂದು ಭಾವಿಸಿ ತಾನೂ ಅಲ್ಲಿ ಮಲಗಿಕೊಳ್ಳುವಳು! ಪ್ರಣಯ ಮೋಹದಲ್ಲಿ ಸಿಕ್ಕಿ ಗುರುಹಿರಿಯರನ್ನು ಲಕ್ಷ್ಯ ಮಾಡದೆ ಕಟ್ಟಿಕೊಂಡು ಓಡಿ ಹೋದ ವಾಸವದತ್ತಾವತ್ಸರಾಜರಂಥವರು ಒಬ್ಬರ ದರ್ಶನ ಭಾಷಣಗಳಿಗಾಗಿ ಮತ್ತೊಬ್ಬರು ಆತುರಪಡುತ್ತಿದ್ದ ಕಾಲದಲ್ಲಿ, ಸಂದರ್ಭ ವಿಶೇಷದಿಂದ ಅದು ಅಸಾಧ್ಯವಾಗಿರುವಾಗ, ಅವರನ್ನು ಅವರಿಗೇ ಗೊತ್ತಿಲ್ಲದಂತೆಯೂ ಪ್ರೇಕ್ಷಕರಿಗೆ ಮಾತ್ರ ಗೊತ್ತಾಗುವಂತೆಯೂ, ನಿರ್ಜನವಾಗಿರುವ ಶಯ್ಯಾಗೃಹದಲ್ಲಿ, ರಾತ್ರಿಹೊತ್ತು,* ಹೀಗೆ ತಂದು ಸೇರಿಸಿರುವುದು ಒಂದು ಅಪೂರ್ವ ಸನ್ನಿವೇಶ ಮುಂದೇನಾಗುವುದೋ ಎಂದು ಪ್ರೇಕ್ಷಕರು ಕುತೂಹಲಪಡುತ್ತ, ಪದ್ಮಾವತಿ ಎಲ್ಲಿ ಬಂದುಬಿಡುವಳೋ ಎಂದು ತವಕಪಡುತ್ತ ಇರುವಾಗ ರಾಜನು “ಹಾ ವಾಸವದತ್ತೆ!” ಎಂದು ಕನವರಿಸಿಕೊಳ್ಳುವನು ಇದೇ ಈ ನಾಟಕದ ತಿರುಳಾದ ಸ್ವಪ್ನದ ಮೊದಲು ಇದನ್ನು ಎಚ್ಚರದಮಾತೆಂದು ತಿಳಿದ ವಾಸವದತ್ತೆಗೆ ಹೇಗಾಗಿರಬೇಕು! ವತ್ಸರಾಜನನ್ನು ತನ್ನೆದುರಿಗೇ ನೋಡುತ್ತಿದ್ದ ವಾಸವದತ್ತೆಗೇ ಹೀಗಾದಮೇಲೆ ಸತ್ತುಹೋದಳೆಂದು ತೀರ್ಮಾನವಾಗಿದ್ದ ವಾಸವದತ್ತೆ ಸುತರಾಂ ಅನಿರೀಕ್ಷಿತವಾಗಿ ಕಣ್ಣಿಗೆ ಬಿದ್ದಾಗ ವತ್ಸರಾಜನಿಗೆ ಹೇಗಾಗಿರಬೇಕು? ಕನಸಿನಲ್ಲಿಯೇ ಮನ್ನಣೆಯನ್ನು ಕೇಳುತ್ತೇನೆಂದು ಹೋಗಿ ಮೇಲಕ್ಕೆ ತೋಳುಗಳನ್ನೆತ್ತಿ

---

* ಚಿತ್ತಗಾರರು ಚಿತ್ರದಲ್ಲಿ ಚಂದ್ರನನ್ನೋ ನಕ್ಷತ್ರಗಳನ್ನೋ ಬರೆದು ರಾತ್ರಿಯನ್ನು ಸೂಚಿಸುವುದುಂಟು. ಹಾಗೆ ಇಲ್ಲಿ ಅದು ರಾತ್ರಿಯೆಂದು ಬಾಯಿಬಿಟ್ಟು ಹೇಳದೆ ಎರಡು ಕಡೆ ದೀಪವನ್ನಿಟ್ಟು ಕವಿಯು ವೇಳೆಯನ್ನು ಸೂಚಿಸಿದ್ದಾನೆ

ಅವು ಮಂಚದ ಮೇಲೆ ಜೋಲಾಡುತ್ತ ಬೀಳಲು ವಾಸವದತ್ತೆಗೆ ಸಹಿಸದೆ ಅವುಗಳನ್ನು ಮೇಲೆತ್ತಿಟ್ಟು ಓಡಿಹೋಗುವಳು ಅವನೂ ಥಿಗ್ಗನೆ ಮಂಚದಿಂದೆದ್ದು "ವಾಸವದತ್ತೇ ! ನಿಲ್ಲು ನಿಲ್ಲು" ಎಂದು ನುಗ್ಗಿ ಹೊಸ್ತಿಲನ್ನು ಎಡುವುವನು ವಾಸವದತ್ತೆಯು ಜೀವಿಸಿರುವ ಳೆಂದು ಅವನಿಗೆ ದೃಢವಾದ ನಂಬುಗೆಯುಂಟಾಯಿತು ಕ್ಷಣ ಮಾತ್ರ ದಲ್ಲಿ ಅವಳ ಜೋಲ್ಮುಡಿ, ಕಪ್ಪು ಹಚ್ಚಿಕೊಳ್ಳದ ಕಣ್ಣುಗಳು, ಸುಂದರ ವಾದ ಮುಖ, ಎಲ್ಲವೂ ಅವನ ಕಣ್ಣಿಗೆ ಬಿದ್ದುವು ಅವಳ ಅಂಗಸ್ಪರ್ಶ ದಿಂದ ಉಂಟಾದ ರೋಮಾಂಚವಿನ್ನೂ ಹಾಗೆಯೇ ಇತ್ತು ಆದ್ದರಿಂದ ಅದು ಕನಸೆಂದು ನಂಬುವುದು ಹೇಗೆ? ಆಗತಾನೆ "ಉಜ್ಜಯಿನಿಯ ಸ್ನಾನಘಟ್ಟ"ದಿಂದ ಬಂದ ವಿದೂಷಕನು ಅದು ಕನಸಿರಬಹುದೆಂದೂ ಇಲ್ಲದಿದ್ದರೆ ರಾಜನು ಆ ನಗರದಲ್ಲಿ ವಾಸಿಸುತ್ತಿದ್ದ ಅವಂತಿಸುಂದರಿ ಎಂಬ ಯಕ್ಷಿಣಿಯೊಬ್ಬಳನ್ನು ನೋಡಿರಬಹುದೆಂದೂ ವಾದಿಸುವನು ಆದರೂ ರಾಜನಿಗೇನೋ ಅವನ ತರ್ಕವು ಒಪ್ಪುವುದಿಲ್ಲ ಅಂತು ವಾಸವದತ್ತೆಯು ಸಿಕ್ಕದಿದ್ದರಿಂದ, ಒಪ್ಪಲಾರದ ತರ್ಕವನ್ನೇ ಒಪ್ಪ ಬೇಕಾಗುವುದು "ಯದಿ ಸ್ಯಾದುಪಲಭ್ಯೇತ !" (ಇದ್ದರೆ ಸಿಕ್ಕ ಬೇಕಷ್ಟೆ!) ಈ ಸಮಯಕ್ಕೆ ಸರಿಯಾಗಿ ಉದಯನ ವಾಸವದತ್ತೆಯರ ಪ್ರೇಮಕ್ಕೆ ಪಾತ್ರವಾಗಿದ್ದು ಇವರ ಮಗುವಿಗಿಂತಲೂ ಹೆಚ್ಚಾಗಿದ್ದ ಘೋಷವತೀ ವೀಣೆಯು ಸಿಕ್ಕಿ, ಅವನ ಗೋಳು ಹೆಚ್ಚಾಗುವುದು ಇದೇ ಅವನ ಶೋಕದ ಚರಮೋನ್ನತಿ ಅಲ್ಲಿಂದ ಮುಂದೆ ಆ ಶೋಕ ಹಿಮಾಲಯವು ಕರಗಿ ಆನಂದಸಾಗರವಾಗಿ ಪರಿಣಮಿಸಲು ಮೊದ ಲಾಗುವುದು ಕೆಲವುವೇಳೆ, ಪರೀಕ್ಷೆಗೆ ಹೋಗಿದ್ದ ಯುವಕರಿಗೆ ಇತ್ತ ಕಡೆ ಮದುವೆಯೋ ಪುತ್ರೋತ್ಸವವೋ ಆಗುವುದು, ಅತ್ತಕಡೆ ಪರೀಕ್ಷೆ ಯಲ್ಲಿ ತೇರ್ಗಡೆಯಾಯಿತೆಂಬ ವರ್ತಮಾನವೂ ಬರುವುದು ಹಾಗೇ ವತ್ಸರಾಜನಿಗೂ, ಆರನೆಯ ಅಂಕದಲ್ಲಿ, ಅತ್ತಕಡೆ ಕೈತಪ್ಪಿಹೋದ ರಾಜ್ಯವೂ ದೊರಕುವುದು, ಇತ್ತಕಡೆ ಕಳೆದುಕೊಂಡ ಹೆಂಡತಿಯೂ ಕೈಸೇರುವಳು ಆದರೆ ಪರೀಕ್ಷೆಯ ಫಲಿತಾಂಶ ತಿಳಿಯುವುದಕ್ಕೆ ಮುಂಚೆ ಮನಸ್ಸಿಗೆ ಕಳವಳವಿರುವಂತೆ ಅವನಿಗೂ ಕಳವಳವಿರುತ್ತದೆ.

ಆ ಕಳವಳದಲ್ಲಿಯೂ, ತನ್ನ ರಾಜ್ಯವನ್ನು ಆಕ್ರಮಿಸಿಕೊಂಡ ಆರುಣಿಯ ಮೇಲೆ ಕೋಪವನ್ನು ತೋರಿಸುವನು (ಆದ್ದರಿಂದ ಅವನು ಶಾಕುಂತಲದ ದುಷ್ಯಂತನಿಗೆ ಸದೃಶನಾದ ಧೀರೋದಾತ್ತನೇ ಹೊರತು ರತ್ನಾವಳಿಯ ವತ್ಸರಾಜನಿಗೆ ಸದೃಶನಾದ ಅಧೀರ ಲಲಿತನಲ್ಲ) ಒಂದುಕಡೆ ತನ್ನ ರಾಜ್ಯವನ್ನು ಗೆಲ್ಲುವ ಕಳವಳ—ಅದು ಅಷ್ಟು ದೊಡ್ಡದಲ್ಲ, ಏಕೆಂದರೆ ಅದಕ್ಕೆ ರುಮಣ್ವಂತನು ಸೇನೆಯನ್ನು ಸಿದ್ಧ ಮಾಡಿಕೊಂಡು ಆಗಲೇ ಅದನ್ನು ಗಂಗಾನದಿಯ ಆಚೆ ದಡಕ್ಕೆ ತೆಗೆದುಕೊಂಡು ಹೋಗಿದ್ದನು, ತನ್ನ ಭಾವಮೈದುನ ಮಾವಂದಿರಾದ ದರ್ಶಕ ಮಹಾಸೇನರ ಸಹಾಯ ಬೇರೆ ಇತ್ತು (ಹೊಸದಾಗಿ ಕೈಹಿಡಿದ ಹುಡುಗಿಯ ಪುಣ್ಯವಿತ್ತು!) ಅದಕ್ಕಿಂತ, ಮತ್ತೊಂದು ಕಡೆ ವಾಸವದತ್ತೆಯ ಕಳವಳವೇ ದೊಡ್ಡದಾಗಿತ್ತು ಇದನ್ನು ಹೆಚ್ಚಿಸಿ ಪರಿಹಾರಮಾಡಿ ವಾಸವದತ್ತೆಯನ್ನು ವತ್ಸರಾಜನೊಡನೆ ಸೇರಿಸಿರುವ ಸಂವಿಧಾನ ಕೌಶಲ್ಯವೂ ಮೆಚ್ಚತಕ್ಕದಾಗಿದೆ

ವಾಸವದತ್ತೆಯು ಸುಟ್ಟು ಸತ್ತುಹೋದ ವರ್ತಮಾನವನ್ನೂ ಉದಯನನಿಗೆ ತಿರುಗಿ ರಾಜ್ಯಬಂದದ್ದನ್ನೂ ಕೇಳಿ ಅವಳ ತಾಯಿತಂದೆಗಳು ಒಬ್ಬ ಕಂಚುಕಿಯನ್ನೂ ದಾದಿಯನ್ನೂ ಕಳುಹಿಸಿ ಅವರೊಡನೆ ರಾಜನ "ಮನಸ್ಸಮಾಧಾನಕ್ಕಾಗಿ" ಅವನ ಮತ್ತು ವಾಸವದತ್ತೆಯ ಚಿತ್ರಪಟಗಳನ್ನು ಕಳುಹಿಸಿಕೊಡುವರು ಅವರು ಬಂದರೆಂದು ಕೇಳಿ ಪದ್ಮಾವತಿಯು ಸ್ವಜನರನ್ನೂ ಬಂಧುಗಳಗಳನ್ನೂ ಕಂಡವಳಂತೆ ಸಂತೋಷಪಡುವಳು (ಗಂಡನ ಕಡೆಯವರನ್ನೂ ಮೊದಲನೆಯ ಹೆಂಡತಿಯ ಕಡೆಯವರನ್ನೂ ತೊರೆಸಿಬಿಡದೆ ಅವರನ್ನು ಸ್ವಜನರೆಂದು ಕಾಣುವ ಪುಣ್ಯಾತ್ಮಗಿತ್ತಿಯಾದ ಹೆಂಡತಿ, ಎರಡನೆಯ ಹೆಂಡತಿ, ಯಾರು?) ಇನ್ನೂ ತನ್ನ ಸವತಿಯ ಕಡೆಯವರೇ ತನ್ನನ್ನು ಹೇಗೆ ಕಾಣುತ್ತಾರೋ ತನಗೆ ಏನು ಹೇಳುತ್ತಾರೋ ಎಂದು ಅವಳಿಗೆ ಹೆದರಿಕೆ. ರಾಜನಿಗೂ ಅದೇ ಕಳವಳ ಸೆರೆಯಲ್ಲಿಟ್ಟಿದ್ದರೂ ತನ್ನನ್ನು ಮಗನಿಗಿಂತಲೂ ಹೆಚ್ಚಾಗಿ ಸಾಕುತ್ತಿದ್ದವರನ್ನು ಮೋಸಗೊಳಿಸಿ ಅಂತಃಪುರದಲ್ಲಿದ್ದ ಹುಡುಗಿಯನ್ನು ಎತ್ತಿಕೊಂಡು ಹೋಗಿ ಅವಳನ್ನು

ಯಾವುದೋ ಒಂದು ಕುಗ್ರಾಮದಲ್ಲಿ ಬೆಂಕಿಗೆ ಹಾಕಿದೆನೆಂದು ಹೊಟ್ಟೆಯ ಸಂಕಟ, ಇದಕ್ಕಾಗಿ ಅವಳನ್ನು ಹೆತ್ತ ತಾಯಿತಂದೆಗಳು ಏನನ್ನುತ್ತಾರೋ ಎಂಬ ಚಿಂತೆ ಆದರೆ ಅವರು ಏನೂ ಆಕ್ಷೇಪಿಸದೆ ಅವನ ಯೋಗಕ್ಷೇಮವನ್ನು ಕೇಳಿ ಅವನ ಮನಸ್ಸಮಾಧಾನಕ್ಕಾಗಿ ಚಿತ್ರಗಳನ್ನು ಕೊಡುವರು ಅವನು ತನ್ನ ಯೋಗಕ್ಷೇಮವನ್ನು ಏನೆಂದು ಹೇಳಲು ಬಾಯಿಬಂದೀತು? ದುಃಖದಿಂದ ನಿಟ್ಟುಸಿರು ಬಿಟ್ಟು "ಏನು? ನಮ್ಮೆಲ್ಲರ ಯೋಗಕ್ಷೇಮವೇ? ಇದೋ! ನನಗಿರ ತಕ್ಕ ಎಲ್ಲಾ ಕುಶಲವೂ ಇದೇ!" ಎಂದು ಕಣ್ಣೀರು ತಂದುಕೊಳ್ಳು ವನು ಕಂಚುಕಿಯು ಮುದುಕನಂತೆ ಸ್ವಲ್ಪ ವೇದಾಂತವನ್ನು ಬೀಸಿ ಶೈತ್ಯೋಪಚಾರ ಮಾಡುವನು. ಪದ್ಮಾವತಿಗೆ ಚಿತ್ರದಕಡೆ ಗಮನ ಹೋಗಿ ಅವಳು ವಾಸವದತ್ತೆಯ ಚಿತ್ರಕ್ಕೆ "ಗುರುಜನ" ವೆಂದು ನಮಸ್ಕರಿಸಲಿಚ್ಛಿಸುವಳು ಇದು ಬರಿಯ ಬಾಹ್ಯನಟನೆಯಲ್ಲ, ಅವಳದ್ದು ನಿಜವಾಗಿಯೂ ಅಂತಹ ಸತ್ಸ್ವಭಾವ ಇಂಥ ಎರಡನೆಯ ಹೆಂಡತಿಯೂ ಅಂಥ ಮೊದಲನೆಯ ಅತ್ತೆಯೂ ದೊರಕಿದವನು ವತ್ಸರಾಜನೊಬ್ಬನೇ ಎಂದು ತೋರುತ್ತದೆ ಅವರ 'ಸ್ನೇಹ' 'ಘನತೆ' ಗಳಿಂದ ಪೂರ್ಣವಾದ ಮಾತುಗಳು ವತ್ಸರಾಜನಿಗೆ ರಾಜ್ಯ ಸಿಕ್ಕಿದ್ದಕ್ಕಿಂತಲೂ ಹೆಚ್ಚು ಸಂತೋಷವನ್ನುಂಟುಮಾಡುವುವು. ಸಂಸಾರವನ್ನು ಅಪೇಕ್ಷಿಸುವುದು ಇಂಥ ಸ್ನೇಹ ಸಂತೋಷಕ್ಕೋಸ್ಕರ, ಈ ಸಂತೋಷವು ಮೊದಲನೆಯ ಸಂಬಂಧದಲ್ಲಿಯೇ ಅನೇಕ ಸಂಸಾರ ಗಳಲ್ಲಿ ಅಭಾವವಾಗಿರುವಾಗ ಅದನ್ನು ಎರಡನೆಯ ಸಂಬಂಧದಲ್ಲಿ ಕೈತುಂಬ ಪಡೆದ ವತ್ಸರಾಜನು ಎಷ್ಟು ಪುಣ್ಯವಂತ! ಅದನ್ನು ಇಷ್ಟು ಸುಲಲಿತವಾಗಿ ಕಲ್ಪಿಸಿ ಪ್ರದರ್ಶಿಸಿರುವ ಕವಿಯ ಮನೋಧರ್ಮವು ಎಂತಹುದು! ಈ ನಾಟಕದಲ್ಲಿಯೂ, ಪ್ರತಿಮಾನಾಟಕದಲ್ಲಿರುವಂತೆ, ಅವನು ಒಂದು ಪ್ರೇಮಸಂಸಾರವನ್ನು ಚಿತ್ರಿಸಿದ್ದಾನೆ. ಇಲ್ಲಿ ಯಾರಿ ಗಾದರೂ ಕೋಪತಾಪಗಳೂ ಅರಿಷಡ್ವರ್ಗಗಳ ಬಾಧೆಯೂ ಉಂಟೆ? ರತ್ನಾವಳಿಯ ವಾಸವದತ್ತೆಯು ಮುಂಗೋಪದ ಮುದ್ದೆ, ಇಲ್ಲಿ ಉದಯನನ ಪ್ರಣಯದಿಂದ ಹುಳಿಮುರಿದು ಹಣ್ಣಾದವಳು ಕಥಾ

ಸರಿತ್ಸಾಗರದ ಮಹಾಸೇನನು ಉದಯನನಿಗೆ ಶತ್ರು, ಇಲ್ಲಿ ಅವರ ದ್ವೇಷದ ಸೂಚನೆಯೂ ಇಲ್ಲ —ಅವನು "ಆಪ್ತಮಿತ್ರ "

ಚಿತ್ರವನ್ನು ನೋಡುತ್ತಿರುವ ಪದ್ಮಾವತಿಗೆ ವಾಸವದತ್ತೆಯಲ್ಲಿ ಅವಂತಿಕೆಯ ಹೋಲಿಕೆಯು ಕಂಡುಬರುತ್ತದೆ. ವತ್ಸರಾಜನ ಚಿತ್ರವು ಅವನನ್ನು ಪೂರ್ತಿಯಾಗಿ ಹೋಲುತ್ತಿದ್ದದ್ದರಿಂದ ವಾಸವ ದತ್ತೆಯೂ ಅಲ್ಲಿ ಚಿತ್ರಿಸಿರುವಂತೆಯೇ ಇದ್ದಿರಬೇಕು (ಮಧ್ಯೆ ಈ ತರ್ಕಾನುಮಾನ ಬೇರೆ !) ಆದ್ದರಿಂದ ಅವಳು ಅವಂತಿಕೆಯ ವಿಚಾರ ವನ್ನು ಕೂಡಲೆ ವತ್ಸರಾಜನಿಗೆ ತಿಳಿಸುವಳು ಅವನು ಅವಳನ್ನು ನೋಡಬೇಕೆಂದು ಆತುರದಿಂದ ಕೇಳುವನು ಆದರೆ, ಗ್ರಹಚಾರ! ಅವಳು "ಪರಪುರುಷರ ಮುಂದೆ ಬಂದು ನಿಲ್ಲಲು ಇಷ್ಟಪಡುವ ಹಾಗಿಲ್ಲ" ರತ್ನಾವಳಿಯ ವತ್ಸರಾಜನಂತಲ್ಲದೆ ಇವನು "ರಾಜ ಧರ್ಮಗುರು"ವೂ ಪರದಾರ ಸೋದರನೂ ಆದ್ದರಿಂದ ಇಂತಹ ತೀವ್ರಕುತೂಹಲದಲ್ಲಿಯೂ ಸುಮ್ಮನಾಗುವನು ಆದರೆ ಉತ್ತರ ಕ್ಷಣದಲ್ಲಿಯೇ ಅವನು ಯಾವ ಆಕ್ಷೇಪಣೆಯೂ ಇಲ್ಲದಂತೆ ಅವಳನ್ನು ನೋಡುವ ಸಂದರ್ಭ ಒದಗುವುದು - ಯೌಗಂಧರಾಯಣನು ಬಂದು ತನ್ನ ತಂಗಿಯನ್ನು ಹಿಂದಕ್ಕೆ ಒಪ್ಪಿಸಬೇಕೆಂದು ಕೇಳುವನು, ಅವ ಳನ್ನು ಪದ್ಮಾವತಿಯೇ ಕರೆತರುವಳು ಅವಳು ಬುರುಕಿಹಾಕಿ ಕೊಂಡು ಬರುವಳೆಂದು ತೋರುತ್ತದೆ, ಆದ್ದರಿಂದ ಸಂದರ್ಭ ಒದಗಿಯೂ ರಾಜನಿಗೆ ಅವಳನ್ನು ನೋಡುವುದಕ್ಕಿಲ್ಲವಲ್ಲಾ ಎಂದು ಅವನಿಗೂ ಪ್ರೇಕ್ಷಕರಿಗೂ ಸ್ವಲ್ಪ ಉತ್ಸಾಹಭಂಗ ! ಅದಕ್ಕೆ ಪುನಃ ಸುಲಭವಾಗಿಯೇ ಪರಿಹಾರ ! "ಮತ್ತೊಬ್ಬರ ಒಡವೆಯನ್ನು ಹಿಂತಿ ರುಗಿ ಅವರಿಗೆ ಒಪ್ಪಿಸಿಕೊಡುವಾಗ ಸಾಕ್ಷಿಗಳ ಮುಂದೆಯೇ ಆ ಕಾರ್ಯ ವನ್ನು ನಡೆಸಬೇಕಾದುದು ಅವಶ್ಯವು" ಎಂದು ರಾಜನು ತಮ್ಮ ಮಾವನ ಮನೆಯಿಂದ ಬಂದು ಅಲ್ಲಿಯೇ ನಿಂತಿದ್ದ ಕಂಚುಕಿ ಮತ್ತು ದಾದಿಯರನ್ನು ಸಾಕ್ಷಿಗಳನ್ನಾಗಿ ಕೋರುವನು. ಆಗ ದಾದಿಯು ಅವಳನ್ನು ಗುರುತಿಸುವಳು ವತ್ಸರಾಜನ ಆಶ್ಚರ್ಯವನ್ನು ಕೇಳ ಬೇಕೆ ? ಈ ಸ್ಥಿತಿಯಲ್ಲಿ ಅವಳು ತನ್ನ ತಂಗಿಯೆಂದು ಬ್ರಾಹ್ಮಣವೇಷ

ದಲ್ಲಿದ್ದ ಯೌಗಂಧರಾಯಣನು ಮೊಂಡಾಟವಮಾಡಿ ಸ್ವಲ್ಪ ದಿಗ್ಭ್ರಮೆ ಹಿಡಿಸುವನು ಕೊನೆಗೆ ತೆರೆಯನ್ನು ಒತ್ತರಿಸಿ ಕಣ್ಣುತುಂಬ ನೋಡಿ ನಿರ್ಧರಮಾಡಿಕೊಳ್ಳಬೇಕಾಗುವುದು ಆಗ ಯೌಗಂಧರಾಯಣನೂ ವೇಷವನ್ನು ತೆಗೆದುಹಾಕಿ ಎಲ್ಲವನ್ನೂ ವಿವರಿಸಿ ಪ್ರಭುವಿನ ಮನ್ನಣೆ ಯನ್ನು ಬೇಡುವನು ವಾಸವದತ್ತೆಯನ್ನು ಸ್ವಲ್ಪಕಾಲಕ್ಕೆ ಮುಂಚೆಯೇ ಶಯ್ಯಾಗೃಹದಲ್ಲಿ ಕಂಡಿದ್ದು ಅದು ಕನಸೆಂದು ತೀರ್ಮಾನವಾಗಿತ್ತಾದ ಕಾರಣ ಈಗಲೂ ಇದೇನು "ಕನಸೋ! ಸತ್ಯವೋ!" ಎಂದು ಮತ್ತೆ ರಾಜನಿಗೆ ಭ್ರಾಂತಿಯುಂಟಾಗುವುದು

ವಾಸವದತ್ತೆಯನ್ನು ಮೊದಲಿನಿಂದಲೂ ರಂಗದಮೇಲೆ ನೋಡು ತ್ತಿರುವ ಪ್ರೇಕ್ಷಕರಿಗೆ ಈ ಭ್ರಾಂತಿಯು ಅರ್ಧವಾಗುವುದಿಲ್ಲ. ಆದರೆ ಉದಯನನಿಗೆ ವಾಸವದತ್ತೆಯ ವೃತ್ತಾಂತವೆಲ್ಲವೂ ಸ್ವಪ್ನದಂತೆ ಚಂಚಲವೂ ಸಂತೋಷದಾಯಕವೂ ಆದದ್ದು —ಅವಳಿಗೆ ವೀಣೆ ಕಲಿಸಿ ಕೊಟ್ಟದ್ದು, ಅವಳನ್ನು ಮದುವೆಯಾದದ್ದು, ಅವಳೊಡನೆ ಓಡಿ ಹೋದದ್ದು, ಅರಮನೆಯಲ್ಲಿಯೂ ಹೊರಗೂ ಅವಳನ್ನು ಎಡಬಿಡದೆ ಸುಖಸಂಕಥಾವಿನೋದಗಳಲ್ಲಿದ್ದದ್ದು, ಅವಳನ್ನು ಕಳೆದುಕೊಂಡದ್ದು, ಕನಸಲ್ಲದ ಕನಸಿನಲ್ಲಿ ಕಂಡದ್ದು, ಕನಸಿನಂತಿರುವ ನಿಜದಲ್ಲಿ ಪಡೆ ದದ್ದು—ಇವೆಲ್ಲವೂ ಅಪೂರ್ವವಾದ ಅಲಭ್ಯ ಲಾಭ. ಕವಿಯೂ ಹಾಗೆಯೇ ವಾಸವದತ್ತೆಯನ್ನೂ ಅವಳ ವೃತ್ತಾಂತವನ್ನೂ ನಾಟಕದ ಉದ್ದಕ್ಕೂ ಸ್ವಪ್ನದಂತೆಯೇ ತರುವನು, ಅವಳು ರಂಗದಮೇಲೆ ಬಂದಾಗಲೂ, ಪ್ರೇಕ್ಷಕರಿಗೂ, ವಾಸವದತ್ತೆಯಲ್ಲ— "ಆವಂತಿಕೆ" ಅವಳ ಮರಣ ಜೀವಿತಗಳ ವೃತ್ತಾಂತವು ಮೇಲಿಂದಮೇಲೆ ಮಳೆ ಗಾಲದ ಮಳೆ ಬಿಸಲುಗಳ ಹಾಗೆ ನಾಟಕದ ಉದ್ದಕ್ಕೂ ಬಂದು ಹೋಗುತ್ತದೆ.—ಮೊದಲನೆಯ ಅಂಕದಲ್ಲಿ ಅವಳು ಬ್ರಹ್ಮಚಾರಿಯ ಎದುರಿಗೆ ನಿಂತುಕೊಂಡು ಅವನ ಬಾಯಿಂದ ತನ್ನ ಮರಣ ವೃತ್ತಾಂತ ವನ್ನು ತಾನೇ ಕೇಳುವಳು, ಎರಡನೆಯ ಅಂಕದಲ್ಲಿ ಅವಳ ಮರಣ ದಿಂದ ವತ್ಸರಾಜನು ಪರಿತಪಿಸುತ್ತಿದ್ದದ್ದನ್ನು ತಾನೇ ಜ್ಞಾಪಿಸುವಳು, ಮೂರನೆಯ ಅಂಕದಲ್ಲಿ ವತ್ಸರಾಜನಿಗೆ ಬೇರೆ ಹೆಂಡತಿ ಇಲ್ಲವೆಂದು

ವಾದಿಸುವಳು, ನಾಲ್ಕನೆಯ ಅಂಕದಲ್ಲಿ "ಪ್ರಥಮ ಭಾರ್ಯೆಯಾದ ವಾಸವದತ್ತೆಯ ವಿಷಯದಲ್ಲಿ ಪ್ರೀತಿ," "ಆ ಪ್ರಥಮ ಭಾರ್ಯೆಯನ್ನು ಕುರಿತು ದುಃಖ", ವಾಸವದತ್ತೆಯ ಎದುರಿಗೇ, ಸತ್ತ ಮೊದಲನೆಯ ಹೆಂಡತಿಗೂ ಬದುಕಿರುವ ಎರಡನೆಯ ಹೆಂಡತಿಗೂ ಪರಸ್ಪರ ಹೋಲಿಕೆ—ಇವುಗಳ ಪ್ರಸ್ತಾಪ ಬರುವುದು, ಐದನೆಯ ಅಂಕದಲ್ಲಿ ರಾಜನು ಅವಳನ್ನು ನೆನೆಸಿಕೊಂಡು ಅಳುತ್ತಿರುವಾಗ ಅವಳು ಮಿಂಚಿನಂತೆ ಹೊಳೆದು ಓಡಿಹೋಗುವುದು, ಅದರಮೇಲೆ ವಿದೂಷಕನ ಸಂಭಾವ್ಯ ಅಸಂಭಾವ್ಯ ವಿಚಾರ—ಇವೂ, ಆರನೆಯ ಅಂಕದಲ್ಲಿ ಹೋದ ರಾಜ್ಯ ಬಂದಂತೆ ಸತ್ತ ಹೆಂಡತಿಯೂ ಬರಲಿ ಎಂಬ ಕಂಚುಕಿಯ "ಆಕಾಂಕ್ಷಿತ", ಅವಳು "ಮೃತಳಾಗಿದ್ದರೂ ಜೀವಿಸಿರುವಂತೆಯೇ" ಎಂಬ ಅವನ ಭಾವನೆ, ಚಿತ್ರಪಟವನ್ನು ನೋಡಿ "ಅವಳೇ ಇಲ್ಲಿರುವಳೆಂದು" ರಾಜನ ಭಾವನೆ, ಕೊನೆಗೆ ವಾಸವದತ್ತೆಯು ತಾನು ವೇಷ ಹಾಕಿಕೊಂಡು ಬಂದು ರಕ್ಷಣೆಯನ್ನು ಅಪೇಕ್ಷಿಸಿದ್ದಕ್ಕಾಗಿ ಪದ್ಮಾವತಿಯನ್ನು ಕೇಳಿಕೊಂಡ ಕ್ಷಮಾಪಣೆ—ಇವೂ ಬರುತ್ತವೆ ಇಂಥ ಸಂದರ್ಭಗಳು ಇನ್ನೂ ಸ್ವಲ್ಪ ಬಲವಾದರೆ ವಾಸವದತ್ತೆಗೇ ತಾನು ಬದುಕಿದ್ದೇನೆಯೋ ಇಲ್ಲವೋ ಎಂಬ ಸಂದೇಹ ಉಂಟಾಗುವ ಸಂಭವ, ಹೀಗಿರುವಲ್ಲಿ ವತ್ಸರಾಜನಿಗೆ ಭ್ರಾಂತಿಯುಂಟಾಗುವುದೇನಾಶ್ಚರ್ಯ?

ಇದಲ್ಲದೆ ಈ ನಾಟಕದಲ್ಲಿ ಕೆಲವು ಭವಿಷ್ಯಾರ್ಥ ಸೂಚನೆಗಳೂ ಅನ್ಯಾರ್ಥ ಸೂಚನೆಗಳೂ ಬರುತ್ತವೆ; ಇವೂ ಚಮತ್ಕಾರದ್ಯೋತಕಗಳು ರಸಪೋಷಕಗಳು ಉದಾಹರಣೆಗಾಗಿ—ಬ್ರಹ್ಮಚಾರಿಯು "ವಾಸವದತ್ತೆಯು ಬೆಂದು ಸತ್ತುಹೋದರೂ ಬೆಂದವಳಲ್ಲ" ಎನ್ನುವನು, ಅವನ ಅರ್ಥವೇ ಬೇರೆ, ಆದರೂ ವಾಸವತ್ತೆ ಬದುಕಿರುವಳೆಂದು ತಿಳಿದ ಪಾಠಕ ಪ್ರೇಕ್ಷಕರಿಗೆ ಬೇರೆ ಅರ್ಥವಾಗಿ ಸ್ವಲ್ಪ ಹರ್ಷವಾಗುತ್ತದೆ. ತಾಪಸಿಯು ಹಾಗೇ, ಪದ್ಮಾವತಿಗೆ ಅನುರೂಪನಾದ ಪತಿಬರಲೆಂದೂ ವಾಸವದತ್ತೆಗೆ ಶೀಘ್ರದಲ್ಲಿಯೇ ಅವಳ ಪತಿಯೊಡನೆ ಸಮಾಗಮವುಂಟಾಗಲಿ ಎಂದೂ ಹರಸುವಳು ಇದರಿಂದ, ಮುಂದೆ ಬಿಡುವ ಹಣ್ಣು ಇನ್ನೂ ಮೊಳಕೆಯಲ್ಲಿಯೇ ತೋರುವಂತೆ, ನಾಟಕದ

ಕೊನೆಯಲ್ಲಿ ಆಗುವುದು ಅದರ ಮೊದಲಲ್ಲಿಯೇ ಸೂಚಿತವಾಗುವುದು ಇದರಂತೆ ಮೇಲೆ ಹೇಳಿದ ಕಂಚುಕಿಯ ಆಕಾಂಕ್ಷಿತ ಮತ್ತು ಭಾವನೆಗಳು, ರಾಜನ ಚಿತ್ರ ವಿಮರ್ಶೆ, ಇತ್ಯಾದಿ

ನಾಟಕದಲ್ಲಿ, ಸಂವಿಧಾನ ಕೌಶಲದಿಂದ ಒಳ್ಳೆಯ ಸನ್ನಿವೇಶಗಳನ್ನು ಕಲ್ಪಿಸಿ ಅವುಗಳಲ್ಲಿ ಪಾತ್ರಗಳ ನಡೆನುಡಿಗಳ ಮೂಲಕ ರಸೋತ್ಪಾದನೆಮಾಡಿ ಪಾಠಕ ಪ್ರೇಕ್ಷಕರನ್ನು ಆನಂದಗೊಳಿಸುವುದು ನಾಟಕಕರ್ತನ ಕರ್ತವ್ಯ ಈ ಕಾರ್ಯವನ್ನು ಕವಿಯು ಸ್ವಪ್ನವಾಸವದತ್ತದಲ್ಲಿ ಹೇಗೆ ಮಾಡಿದ್ದಾನೆಂದು ಮೇಲೆ ವಿಸ್ತಾರವಾಗಿ ತೋರಿಸಿದ್ದಾಯಿತು ಗುಲಾಬಿ ಗಿಡವು ಕುಳ್ಳಾಗಿದ್ದರೂ ಅದನ್ನು ಕತ್ತರಿಸಿ ಕಸಿಮಾಡಿ ಮೈತುಂಬ ಹೂಬಿಡಿಸುವ ಸಮರ್ಥನಾದ ತೋಟಗಾರನಂತೆ ನಾಟಕವು ಚಿಕ್ಕದಾಗಿದ್ದರೂ ಕವಿಯು ಅದರಲ್ಲಿ ಅನೇಕ ರಸಸ್ಥಾನಗಳನ್ನು ಕಲ್ಪಿಸಿ ಆನಂದಗೊಳಿಸಿದ್ದಾನೆ ರಸಪೋಷಕವಲ್ಲದ ಘಟನೆಗಳನ್ನಾಗಲಿ ಪಾತ್ರಗಳನ್ನಾಗಲಿ ತಂದು ತುರುಕಿಲ್ಲ, ಕೊನೆಗೆ ಪದ್ಮಾವತಿಯ ತಾಯಿತಂದೆಗಳು ಯಾರೋ ಅವರ ಹೆಸರೂ ಇಲ್ಲ, ಅಣ್ಣ ದರ್ಶಕನೆಂದು ಮಾತ್ರ ಹೇಳಿದೆ, ಅವನು ರಂಗಕ್ಕೆ ಬರುವುದಿಲ್ಲ ತಾಪಸಿ, ಬ್ರಹ್ಮಚಾರಿ, ಕಂಚುಕಿ, ಚೇಟಿ ಮುಂತಾದವರ ಹೆಸರನ್ನೂ ಹೇಳಿಲ್ಲ, ಆದ್ದರಿಂದ ಅವರು ಮಾಡಿದ ಕೆಲಸ ಜ್ಞಾಪಕದಲ್ಲಿ ನಿಲ್ಲುತ್ತದೆಯೇ ಹೊರತು ಅವರ ವ್ಯಕ್ತಿಯು ಮನಸ್ಸಿನಲ್ಲಿ ನಿಲ್ಲುವುದಿಲ್ಲ ಪದ್ಯಾಧಿಕ್ಯದಿಂದ ಆಟವು ಕುಂಟುವಂತಿಲ್ಲ ಈ ನಾಟಕಕ್ಕೆ ಇರುವುದೆಲ್ಲಾ ೫೭ ಪದ್ಯಗಳು ಇಷ್ಟು ಸಂಗ್ರಹವಾಗಿ ರಸೈಕದೃಷ್ಟಿಯಿಂದ ನಾಟಕವನ್ನು ಗ್ರಥಿಸಿರುವುದರಿಂದ ವಿಸ್ತಾರವಾದ ಚಂಪೂಕಾವ್ಯ ಮುಂತಾದ ಗ್ರಂಥಗಳಲ್ಲಿ ಕಂಡುಬರಬಹುದಾದ ವರ್ಣನಾ ವೈಖರಿಗಳಿಗೂ ಅಲಂಕಾರ ವೈಚಿತ್ರ್ಯಗಳಿಗೂ ಘನೋಪದೇಶಗಳಿಗೂ ಇದರಲ್ಲಿ ಅವಕಾಶವಿಲ್ಲ ಆದರೆ ಅವು ಶುದ್ಧಾಂಗವಾಗಿ ಇಲ್ಲದಿಲ್ಲ, ಋಷ್ಯಾಶ್ರಮ (ಪು. ೯), ಸಾಯಂಕಾಲ (೧೬), ಶಯ್ಯಾಗೃಹ (೪೩), ವಾಸವದತ್ತೆ (೪೪)—ಮುಂತಾದ ವರ್ಣನೆಗಳು ಚೆನ್ನಾಗಿವೆ. ಭಾಗ್ಯಪಂಕ್ತಿಯನ್ನು ಚಕ್ರಾರ ಪಂಕ್ತಿಗೂ, ರಾಜನು ಬಿಟ್ಟು ಹೋದ ಲಾವಾಣಕ ಗ್ರಾಮವನ್ನು

ಚಂದ್ರ ನಕ್ಷತ್ರಗಳೊಂದೂ ಇಲ್ಲದ ಆಕಾಶಕ್ಕೂ, ಚಿಂತಿಸುತ್ತಿರುವ ಅವಂತಿ ಸುಂದರಿಯನ್ನು ಮಂಜು ಮುಚ್ಚಿದ ಚಂದ್ರಲೇಖೆಗೂ, ಅಜೀರ್ಣದಿಂದ ನರಳುತ್ತಿರುವ ವಿದೂಷಕನ ಹೊಟ್ಟೆತೊಳಸನ್ನು ಕೋಗಿಲೆಯ ಕಣ್ಣೊಳ ಸಿಗೂ, ನಾಯುವವರನ್ನು ಹಗ್ಗ ಕಿತ್ತುಹೋದ ಘಟಕ್ಕೂ ಹೋಲಿಸಿ ರುವ ಉಪಮಾನಗಳು ಸುಂದರವಾಗಿವೆ

ಈ ನಾಟಕದಲ್ಲಿರುವುದು ಶೃಂಗಾರ ರಸ ಆದರೆ ನಾಟಕದಲ್ಲಿ ಇಂಥ ಶೃಂಗಾರ ರಸವು ಅಪರೂಪ, ಇದು, ಗಂಡಿನ ಕಡೆಯಾಗಲಿ ಹೆಣ್ಣಿನ ಕಡೆಯಾಗಲಿ, ಕಾಮಪೀಡಿತವಲ್ಲ, ಮಾತ್ಸರ್ಯ ಕಲುಷಿತವಲ್ಲ ವಿಷಯ ದೂಷಿತವಲ್ಲ ವತ್ಸರಾಜನು “ ಪಂಚೇಷುಗಾರಂಬುಗಳು ” ಬಂದುವೆಂದು ಅರಚಿಕೊಂಡರೂ ಅವನಿಗೆ ಪದ್ಮಾವತಿಯಮೇಲೆ ಸುಂದರಿ ಯಾದ ಚಿಕ್ಕಪುಟ್ಟ ಎರಡನೆಯ ಹೆಂಡತಿಯೆಂದು ಅಂಥಪ್ರಣಯವಿಲ್ಲ. ವಾಸವದತ್ತೆಯಮೇಲೆ ಅವಳು ಸತ್ತಳೆಂದು ತಿಳಿದರೂ ಮರೆಯದ ಗಾಢ ವಾದ ಪ್ರೇಮ ವಾಸವದತ್ತೆಗೂ ವತ್ಸರಾಜನಮೇಲೆ ಅದೇ ವಿಧವಾದ ಪ್ರೇಮ ಪದ್ಮಾವತಿಯಲ್ಲಿ ಅವಳೂ ಅವಳಲ್ಲಿ ಪದ್ಮಾವತಿಯೂ ಹೇಗೆ ವರ್ತಿಸುತ್ತಿದ್ದರೆಂಬುದನ್ನು ಮೇಲೆ ವಿವರಿಸಿದೆ, ಇಬ್ಬರು ಹೆಂಗಸರು ಸೇರಿದರೆ, ಅವರು ಅಕ್ಕತಂಗಿಯರಾಗಲಿ ತಾಯಿಮಕ್ಕಳಾಗಲಿ, ಸಣ್ಣಸಣ್ಣ ದಕ್ಕೆಲ್ಲಾ ಕಚ್ಚಾಡುವುದು ಸಾಧಾರಣವಾದದ್ದು ಹೀಗಿರುವಾಗ, ತನ್ನ ಮೋಹದ ಗಂಡನನ್ನೇ ಕೊಟ್ಟುಬಿಡುವ ವಿಷಯದಲ್ಲಿ ವಾಸವದತ್ತೆಯು ಇಷ್ಟು ಸಂತೋಷವಾಗಿದ್ದು ಪದ್ಮಾವತಿಯನ್ನು ತಂಗಿಗಿಂತಲೂ ಮಗಳಿ ಗಿಂತಲೂ ಹೆಚ್ಚಾಗಿ ನೋಡಿಕೊಳ್ಳುತ್ತಿರುವುದು ಅವರ ಪುಣ್ಯ, ಅವರ ಪುಣ್ಯಕ್ಕಿಂತಲೂ ಹೆಚ್ಚಾಗಿ ವತ್ಸರಾಜನ ಭಾಗ್ಯೋದಯ!

ಭಾಸನ ಕಾವ್ಯದಲ್ಲಿ ಕಂಡುಬರುವ ಈ ಮಧುಮಧುರವಾದ ಪರಿಶುದ್ಧವಾದ, ಶೃಂಗಾರ ರಸವು ಕಾಳಿದಾಸ ಶ್ರೀಹರ್ಷರ ಕಾಲಕ್ಕೆ ಕ್ರಮೇಣ ಹುಳಿ ಹಿಡಿದು, ನೊರೆ ಬಂದು, ವಾಸನೆಯಿಟ್ಟುಕೊಳ್ಳು ತ್ತದೆ. ‘ಶಾಕುಂತಲ’ ‘ರತ್ನಾವಳಿ’ ಗಳ ಮಾತಿರಲಿ; ವೈರಾಗ್ಯ ಪ್ರಧಾನವಾದ ‘ನಾಗಾನಂದ’ ದಲ್ಲಿ ಕಂಡುಬರುವ ಶೃಂಗಾರ ಶ್ಲೋಕ

ಗಳಂಥವು (III ೪, III ೬, ಇತ್ಯಾದಿ—ಅವುಗಳನ್ನು ಉದ್ಧಾರ ಮಾಡುವುದಕ್ಕೆ ಸಂಕೋಚವಾಗುತ್ತದೆ ) ಸ್ವಪ್ನವಾಸವದತ್ತದಲ್ಲಿ ಹುಡುಕಿದರೂ ಸಿಕ್ಕುವುದಿಲ್ಲ ವತ್ಸರಾಜನ ಗೋಳಾಟದಲ್ಲಿ ಕರುಣ ರಸ ಹುಟ್ಟುವುದಿಲ್ಲ ಹತ್ತಿರದಲ್ಲಿಯೇ ಹೆಂಡತಿ ಇರುವುದರಿಂದಲೂ ಅವರು ಜಾಗ್ರತೆಯಾಗಿಯೇ ಸೇರುವರೆಂಬ ಧೈರ್ಯವಿರುವುದರಿಂದಲೂ ಅದು ಪ್ರೇಕ್ಷಕರಲ್ಲಿ ಮರುಕವನ್ನುಂಟುಮಾಡುವುದಿಲ್ಲ ಇನ್ನೂ ವಾಸವದತ್ತೆಯ ಸ್ಥಿತಿಯನ್ನು ನೋಡಿದರೆ "ಅಯ್ಯೋ ಪಾಪ!" ಎನ್ನಿಸುತ್ತದೆ ವಿದೂಷಕನು ಅಲ್ಲಲ್ಲೆ ಸ್ವಲ್ಪ ಹಾಸ್ಯವನ್ನು ತರುತ್ತಾನೆ ಇವನು ಭಾಸನ ಕಾಲಕ್ಕೆ ಆಗಲೇ ಸಂಸ್ಕೃತ ನಾಟಕದಲ್ಲಿ ಮನೆಮಾಡಿಕೊಂಡು ಬೇರೂರಿ ಹಳಬನಾಗಿರುವಂತೆ ತೋರುತ್ತದೆ, ಈಚಿನ ನಾಟಕಗಳಲ್ಲಿ ಬರುವ ಅವನ ಜ್ಞಾತಿಗಳಂತೆ ಅವನಲ್ಲಿಯೂ ಹೊಟ್ಟೆಬಾಕತನ, ದಡ್ಡತನ, ಹೇಡಿತನಗಳು ಕಂಡುಬರುತ್ತವೆ ಆದರೆ ಈ ಗುಣಗಳಲ್ಲಿ ಸ್ವಲ್ಪ ನವೀನತೆಯಿದೆ

ಈ ನಾಟಕದ ಕಥೆಯಾಗಲಿ ರಸವಾಗಲಿ ಅಸಂಭಾವ್ಯವಾದ ಘಟನೆಗಳಿಂದಲೂ ಆರ್ಭಟದ ವೃತ್ತಾಂತಗಳಿಂದಲೂ ಪೋಷಿತವಾಗಿ ಕಾಮನ ಹಬ್ಬದ ಕಿಚ್ಚಿನಂತೆ ಬೊಬ್ಬೆಯನ್ನೆಬ್ಬಿಸುವಂತಿಲ್ಲ ಇರುವುದೆಲ್ಲಾ ಲಲಿತವಾದ ಮೃದುವಾದ ಸನ್ನಿವೇಶಗಳು, ಏನೆಂದರೆ ಯಾರಿಗೆ ಮನಸ್ಸು ನೊಂದೀತೋ ಎಂಬಂಥ ಸಾಧು ಪ್ರಾಣಿಗಳು!
"ಸಾಯಂಕಾಲೇ ವನಾಂತೇ ಕುಸುಮಿತಸಮಯೇ ಸೈಕತೇ ಚಂದ್ರಿಕಾಯಾಂ"
ಸುಳಿದಾಡುವುದಕ್ಕೆ ಅರ್ಹವಾದವುಗಳು!

---

# ಪ್ರತಿಮಾ ನಾಟಕ

ಭಾಸಕೃತವಾದ ರಾಮಕಥಾನಾಟಕಗಳು ಎರಡು—ಪ್ರತಿಮಾ ನಾಟಕ, ಅಭಿಷೇಕನಾಟಕ ಅವುಗಳೊಳಗೆ ಪ್ರತಿಮಾನಾಟಕದಲ್ಲಿ ಅಯೋಧ್ಯಾರಣ್ಯ ಕಾಂಡಗಳ ಕಥೆಯೂ, ಅಭಿಷೇಕನಾಟಕದಲ್ಲಿ ಕಿಷ್ಕಿಂಧಾ ಸುಂದರ ಯುದ್ಧ ಕಾಂಡಗಳ ಕಥೆಯೂ ಮುಖ್ಯವಾಗಿ ಪ್ರತಿಪಾದಿತವಾಗಿದೆ ಉಳಿದ ಬಾಲಕಾಂಡವನ್ನು ಮತ್ತೊಂದು ನಾಟಕದಲ್ಲಿ ಬರೆದಿರಬಹುದೆಂದೂ ಅದು ರಾಮಬಾಲಚರಿತವಾಗಿರ ಬಹುದೆಂದೂ ಅನೇಕರ ಊಹೆ ಈಗ ದೊರೆತಿರುವ 'ಬಾಲಚರಿತ'ವು ಕೃಷ್ಣಬಾಲಚರಿತ

ಈ ಎರಡು ನಾಟಕಗಳಲ್ಲಿ ಬೇರೆ ಬೇರೆ ಕಾಂಡಗಳ ಕಥೆ ಇದ್ದರೂ ಎರಡೂ ರಾಮ ಪಟ್ಟಾಭಿಷೇಕದಲ್ಲಿಯೇ ಮುಗಿಯುತ್ತವೆ, ಅಯೋಧ್ಯೆಗೆ ಹಿಂತಿರುಗಿದ ಮೇಲೆ ವಿಜೃಂಭಣೆಯಿಂದ ನಡೆಯುವ ಕ್ರಮವಾದ ಪಟ್ಟಾಭಿಷೇಕವಲ್ಲ—ಶಾಸ್ತ್ರಮಾತ್ರದ ಪಟ್ಟಾಭಿಷೇಕ ಆದ್ದರಿಂದ ಒಂದು 'ಅಭಿಷೇಕನಾಟಕ' ವಾದರೆ ಮತ್ತೊಂದೂ 'ಅಭಿಷೇಕನಾಟಕ' ವಾಗುವುದರಲ್ಲಿ ಅಡ್ಡಿಯಿಲ್ಲ ಆದರೆ 'ಪ್ರತಿಮಾ ನಾಟಕ' ವೆಲ್ಲಿ, 'ಅಭಿಷೇಕನಾಟಕ' ವೆಲ್ಲಿ? ಪ್ರತಿಮಾನಾಟಕದಲ್ಲಿ ಕವಿಯು ತನ್ನ ಪ್ರತಿಭಾಪ್ರವಾಹವನ್ನೆಲ್ಲಾ ಹರಿಸಿಬಿಟ್ಟಿದ್ದಾನೆ, ಅಭಿಷೇಕನಾಟಕಕ್ಕೆ ಬರುವ ಹೊತ್ತಿಗೆ ಅದು ಬರುದೊರೆಯಾಗುತ್ತದೆ, ಪ್ರತಿಮಾನಾಟಕವು ವಸ್ತು ಪಾತ್ರ ರಸಾದಿಗಳಲ್ಲಿ ರಾಮಾಯಣಕ್ಕಿಂತ ತೀರ ಭಿನ್ನವಾಗಿ ನೂತನಸೃಷ್ಟಿಯಾಗಿದೆ ಅಭಿಷೇಕನಾಟಕವು, ಬಹುಭಾಗದಲ್ಲಿ ಅದರ ಶುಷ್ಕಸಂಗ್ರಹ ಮಾತ್ರ ಒಂದನ್ನು ಓದಿ ಮತ್ತೊಂದನ್ನು ತೆಗೆದುಕೊಂಡರೆ ಸಕ್ಕರೆ ತಿಂದ ಬಾಯಿಯಲ್ಲಿ ನೀರು ಕುಡಿದಂತೆ ಸಪ್ಪೆಯಾಗಿ ಕಾಣುತ್ತದೆ

ಪ್ರತಿಮಾನಾಟಕವು ಆರಂಭವಾಗುವಾಗ ಶ್ರೀರಾಮಪಟ್ಟಾಭಿಷೇಕಕ್ಕೆ ಏರ್ಪಾಡು ನಡೆಯುತ್ತಿದೆ ಆ ಮಹೋತ್ಸವದ ಏಕಾಂಶವನ್ನು ಮಾತ್ರ (ಟೆಲಿಸ್ಕೋಪಿನಲ್ಲಿ ತೋರಿಸುವಂತೆ) ಕವಿಯು ವರ್ಣಿಸಿ, ಅಲ್ಲಿಯ ಸಂಭ್ರಮವನ್ನೂ ನಾಡಿಗರ ಸಂತೋಷವನ್ನೂ ಸೂಚಿಸುವನು ಅರಮನೆಯ ಸಂಗೀತಶಾಲೆಯಲ್ಲಿ ಈ ಮಹೋತ್ಸವದ ಅಂಗವಾಗಿ ತಕ್ಕ ನಾಟಕಾಭಿನಯವು ಸಿದ್ಧವಾಗುತ್ತಿದೆ. ನಟ ಪರಿವಾರದಲ್ಲಿದ್ದ ಅವದಾತಿಕೆಯೆಂಬವಳೊಬ್ಬಳು ನೇಪಥ್ಯಪಾಲಿನಿಯನ್ನು ಕಿರುಕುಳ ಗುಟ್ಟಿಸಲು ರಂಗಸ್ಥಳದಿಂದ ಒಂದು ನಾರುಮಡಿಯನ್ನು ತರುತ್ತ ಸೀತೆಯ ಕಣ್ಣಿಗೆ ಬೀಳುವಳು ಸೀತೆಯು ಅವಳನ್ನು ಗದರಿಸಿ ಕಳುಹಿಸುತ್ತ, ಕುತೂಹಲದಿಂದ ಆ ನಾರುಮಡಿಯನ್ನು ಧರಿಸಿಕೊಂಡು ನೋಡುವಳು ಅದರ ಸೌಂದರ್ಯವನ್ನು ವಿಮರ್ಶೆ ಮಾಡುತ್ತಿರುವಾಗ ರಾಮಪಟ್ಟಾಭಿಷೇಕದ ಸುದ್ದಿ ಬರುವುದು ಆದರೆ ಸೀತೆ ಅದರ ಸೌಭಾಗ್ಯದಲ್ಲಿ ಉದಾಸೀನೆ, ರಾಮನಿಗೆ ಪಟ್ಟಾಭಿಷೇಕವಾಗಬೇಕಾದರೆ ದಶರಥನ ಯೋಗಕ್ಷೇಮವೇನೋ ಎಂತೋ ಎಂಬ ಕಳವಳ ಅವನು ಆರೋಗ್ಯವಾಗಿದ್ದಾನೆಂದು ಕೇಳಿದಾಗ ತನ್ನ ಗಂಡನಿಗೆ ಪಟ್ಟಾಭಿಷೇಕವಾದದ್ದಕ್ಕಿಂತ ಹೆಚ್ಚು ಸಂತೋಷ, ಆದ್ದರಿಂದ ಆ ವರ್ತಮಾನವನ್ನು ತಂದವಳಿಗ ನಿಂತ ನಿಲವಿನಲ್ಲಿಯೆ ತಾನು ಹಾಕಿಕೊಂಡಿದ್ದ ಆಭರಣಗಳನ್ನು ತೆಗೆದುಕೊಡುವಳು, ಅವಳ ಈ ಮನೋಭಾವವು ಮುಂದೆ ನಡೆಯುವ ಸಂಗತಿಯಿಂದಲೂ ಗೊತ್ತಾಗುವುದು. ಪಟಹ ಶಬ್ದವಾಗುತ್ತಿದ್ದು ತಟ್ಟನೆ ನಿಲ್ಲಲು "ಅಭಿಷೇಕ ವಿಘಾತವೇನಾದರೂ ಇರಬಹುದೇ?" ಎಂಬ ಯೋಚನೆ ಹೊಳೆಯುವುದು. ಆದರೆ ಆ ಯೋಚನೆ ಅವಳ ಮನಸ್ಸನ್ನು ಕುಗ್ಗಿಸದು ಆಶೆಯು ತೀವ್ರವಾಗಿದ್ದರೆ ನಿರಾಶೆಯು ದುಃಖಜನಕವಾಗುವುದು ಆದರೆ ಅವಳು ಆಶಾಲುಬ್ಧಳಲ್ಲ. ಆದ್ದರಿಂದ "ಅಥವಾ ಅರಮನೆಗಳಲ್ಲಿ ಅನೇಕ ಸಂಗತಿಗಳು ನಡೆಯುವುವು" ಎಂದುಕೊಂಡು ಸುಮ್ಮನಾಗಿಬಿಡುವಳು ದಶರಥಮಹಾರಾಜನು ಕಾಡಿಗೆ ಹೋಗುತ್ತಾನೆಂದು ಕೇಳಿದಾಗ ಪಟ್ಟಾಭಿಷೇಕ ವಿಚಾರದಲ್ಲಿ ಇದ್ದ ಸಂತೋಷವೇ ಹೋಗಿ

ಬಿಡುವುದು, " ಹಾಗಿದ್ದರೆ ಅದು ರಾಜ್ಯಾಭಿಷೇಕವಲ್ಲ, ಸುಮ್ಮನೆ ನೀರೆರೆಯುವುದು " ಎನ್ನುವಳು.

ಇಷ್ಟು ಹೊತ್ತಿಗೆ ರಾಮನು ಬರುವನು ಆ ಸೀತೆಗೆ ತಕ್ಕ ರಾಮ. ಸುಖಸಂಪತ್ತುಗಳಲ್ಲಿ ಆವಳಿಗೆ ಎಂಥ ಸಂಗರಾಹಿತ್ಯವೋ ಅದಕ್ಕಿಂತಲೂ ಹೆಚ್ಚು ಸಂಗರಾಹಿತ್ಯ ಅವನಿಗೆ. ಅವನಿಗೆ ಸುಖವೂ ಒಂದೇ ದುಃಖವೂ ಒಂದೇ, ಅದು ಯಾವುದೂ ದೊಡ್ಡದಲ್ಲ, ಎರಡೂ ಅಲ್ಪ, ಆದ್ದರಿಂದ ತನ್ನ ಪಟ್ಟಾಭಿಷೇಕ ನಿಂತುಹೋದ ವರ್ತಮಾನವನ್ನು ವಿವರಿಸಿ ಏನೂ ನಷ್ಟವೇ ಆಗದಿದ್ದವನಂತೆ ಸಮಾಧಾನಚಿತ್ತದಿಂದ, ತನ್ನ ಹೆಂಡತಿ ಒಡವೆಯನ್ನೇಕೆ ಇಟ್ಟುಕೊಂಡಿಲ್ಲ, ಇಟ್ಟುಕೊಂಡಿದ್ದು ತೆಗೆದು ಹಾಕಿದಳೇ, ಅಥವಾ ಇಟ್ಟುಕೊಂಡೇ ಇರಲಿಲ್ಲವೋ ಎಂದು ಸೂಕ್ಷ್ಮ ಪರೀಕ್ಷೆ ಪರಿಶೀಲನೆಗಳಿಗೆ ಹೊರಡುವನು ಪಟ್ಟಾಭಿಷೇಕ ತಪ್ಪಿದ್ದರಿಂದ ಸೀತೆಗೆ ಇನ್ನೂ ಸಂತೋಷವೇಯೆ, ಏಕೆಂದರೆ, " ಮಹಾರಾಜನು ಮಹಾರಾಜನೇ, ಆರ್ಯಪುತ್ರನು ಆರ್ಯಪುತ್ರನೇ " ತನ್ನ ಮಾವ ಮುದುಕನಾಗಿ ಅಥವಾ ಮೃತನಾಗಿ ತನ್ನ ಗಂಡನು ಮಹಾರಾಜನಾಗಿಬಿಡಬೇಕೆಂಬ ಆತುರವಿಲ್ಲ, ಚಕ್ರವರ್ತಿಯ ಮುದ್ದುಮಗಳಾಗಿ ಬೆಳೆದು ಚಕ್ರವರ್ತಿಯ ಮನೆಯನ್ನು ಸೇರಿದವಳಿಗೆ ಇಂಥ ಆಶೆಯಿದ್ದರೂ ಅದು ಕ್ಷಮ್ಯವೇ, ಆದರೆ ಅವಳ ಮನಸ್ಸೆಲ್ಲವೂ ತನ್ನ ಗುರುಹಿರಿಯರು ಮತ್ತು ಪತಿಯ ಸುಖಶ್ರೇಯಸ್ಸುಗಳ ಮೇಲೆಯೇ ಇದೆ, ತಾನು ಮಹಾರಾಣಿಯಾಗಿ ಮೆರೆಯಬೇಕೆಂಬುದೇ ಅವಳ ಪರಮಧ್ಯೇಯವಲ್ಲ, ತಂದೆಯ ಕಣ್ಣಮುಂದಿನ ಮಕ್ಕಳಂತೆ ಅವರ ಆಶೀರ್ವಾದದ ನೆರಳಿನಲ್ಲಿರುವುದೇ ಪರಮ ಶ್ರೇಯಸ್ಸೆಂದು ಅವಳು ಸ್ಥಿರವಾಗಿ ನಂಬಿಕೊಂಡಿದ್ದಂತೆ ತೋರುತ್ತದೆ, ಮಹಾರಾಣಿಯ ಪದವಿ ವೈಭವಗಳಿಗಿಂತ ಶುದ್ಧವಾದ ಪತಿಪ್ರೇಮಪೂರಿತವಾದ ಕರ್ಮಯೋಗವೇ ಹೆಚ್ಚು ಸುಖದಾಯಕವೆಂದು ಜಾನಕಿಯು ಅನುಭವಕ್ಕೆ ತಂದುಕೊಂಡಿದ್ದಂತೆ ಬೋಧೆಯಾಗುತ್ತದೆ. ಸೀತಾರಾಮರ ಹೃದಯಗಳು ಬಿಂಬಪ್ರತಿಬಿಂಬಗಳಂತಿದ್ದಿರಬೇಕು. ಅದಕ್ಕೋಸ್ಕರವೇ ರಾಮನು, ಯಾವ ವಿಚಾರದಲ್ಲಿ ಏನು ಅಭಿಪ್ರಾಯ ಅಭಿರುಚಿಗಳನ್ನಿ

ಟ್ಟುಕೊಂಡಿರಬಹುದು, ಯಾವ ಸಂದರ್ಭದಲ್ಲಿ ಹೇಗೆ ಹೇಗೆ ನಡೆದು ಕೊಂಡಿರಬಹುದು ಎಂಬುದೆಲ್ಲವೂ ಸೀತೆಯ ಹೃದಯದಲ್ಲಿ ಪ್ರತಿಫಲಿತ ವಾಗುತ್ತಿದ್ದುವೆಂದು ತೋರುತ್ತದೆ ಪಟ್ಟಾಭಿಷೇಕಕ್ಕೋಸ್ಕರ ಧರಿಸಿದ ಅಲಂಕಾರ ಉಡಿಗೆತೊಡಿಗೆಗಳನ್ನು ಇನ್ನೂ ತೆಗೆಯದೇ ಬಂದಿರುವ ರಾಮನಿಗೂ ಸೀತೆಗೂ ನಡೆಯುವ ಸಂಭಾಷಣೆಯನ್ನು ನೋಡಿ!

ರಾಮ—ಮೈಥಿಲಿ, ಇದೇನು ನೀನು ಹೇಳುವುದು?

ಸೀತೆ—ಏನೂ ಇಲ್ಲ, ಇವಳು "ಅಭಿಷೇಕ ಅಭಿಷೇಕ" ಎನ್ನುವಳು

(ಪಾಪ! ತನಗೇನೂ ಅದರಲ್ಲಿ ಸಂಬಂಧವಿಲ್ಲ!)

ರಾಮ—ನಿನ್ನ ಕುತೂಹಲವನ್ನು ಬಲ್ಲೆನು, ಅಭಿಷೇಕ ಉಂಟು. ಈಗತಾನೇ ಮಹಾರಾಜನು ವತ್ಸ ರಾಮ! ರಾಜ್ಯವನ್ನು ಕೈಕೊಳ್ಳೆಂದನು

ಸೀತೆ—ಆಗ ಆರ್ಯಪುತ್ರನು ನುಡಿದುದೇನು?

ರಾಮ—ಮೈಥಿಲಿ! ಏನು ನುಡಿದಿರಬಹುದೆಂದು ನಿನಗೆ ತೋರುವುದು?

(ರಾಜ್ಯವು ಕೈತಪ್ಪಿ ಹೋಗುತ್ತಿರುವಾಗ, ಹೆಂಡತಿಯೊಡನೆ ಪರಿಹಾಸ್ಯ!)

ಸೀತೆ—ನನಗೆ ತೋರುವುದು, ಆರ್ಯಪುತ್ರನು ಯಾವ ಮಾತನ್ನೂ ಆಡದೆ ಗಟ್ಟಿಯಾಗಿ ನಿಟ್ಟುಸಿರುಬಿಟ್ಟು ಮಹಾರಾಜನ ಪಾದಮೂಲದಲ್ಲಿ ಥಟ್ಟನೆ ಬಿದ್ದನೆಂದು

(ಕಣ್ಣಾರ ನೋಡಿದವರಿಗಿಂತಲೂ ಧೈರ್ಯವಾಗಿ ಖಂಡಿತವಾಗಿ ನಿಸ್ಸಂಶಯವಾಗಿ ಹೇಳಿಬಿಡುತ್ತಾಳೆ ಆದರೆ ಅದು ಬರಿಯ ಊಹೆ; ನಿಜವು ಆ ಊಹೆಗಿಂತ ಹೆಚ್ಚು ಯಥಾರ್ಥವಲ್ಲ)

ರಾಮ—ಸರಿಯಾಗಿ ಊಹಿಸಿದೆ. . . . ಅಹುದು, ನಾನು ಮಹಾರಾಜನ ಪಾದಮೂಲದಲ್ಲಿ ಥಟ್ಟನೆ ಬಿದ್ದೆನು.

ದಶರಥನು ತನ್ನ ಮೇಲೆ ಆಣೆಯಿಟ್ಟುಕೊಂಡು ರಾಮನನ್ನು ಪಟ್ಟಾಭಿಷೇಕಕ್ಕೆ ಒಪ್ಪಿಸಿದನು ರಾಮನೂ ಒಪ್ಪಿದಹಾಗಾಗಿತ್ತು.

ಅಷ್ಟುಹೊತ್ತಿಗೆ ಮಂಥರೆ ಬಂದು ದಶರಥನ ಕಿವಿಯಲ್ಲಿ ಏನನ್ನೋ ಹೇಳಿದಳು,—ಪಟ್ಟಾಭಿಷೇಕ ನಿಂತುಹೋಯಿತು

ಇದನ್ನು ಕೇಳಿ ಸೀತೆಗೆ ಸಂತೋಷ, ರಾಮನಿಗೂ ಸಂತೋಷ ವೇಯಿ; ಅವರು ಇಬ್ಬರೂ ಆಡುವುದು ಒಂದೇ ಮಾತು, ಒಂದೇ ವಾಕ್ಯ—

ರಾಮ—ನಾನು ಆ ರಾಮನೇ ಆದೆನು ಮಹಾರಾಜನು ಮಹಾರಾಜನೇ ಆಗಿರುವನು

ಸೀತೆ—ಮಹಾರಾಜನು ಮಹಾರಾಜನೇ, ಆರ್ಯಪುತ್ರನು ಆರ್ಯ ಪುತ್ರನೇ !

ಪಟ್ಟಾಭಿಷೇಕ ತಪ್ಪಿಹೋಗಲು, ಅವನ ಜೀವಮಾನದಲ್ಲಿ ಪ್ರಳಯ ವಾದಂತೆ ಇತರರ ಭಾವನೆ, ಈ ಪ್ರಳಯಲ್ಲಿ ಧೈರ್ಯಗೆಡದೆ ಇದ್ದ ರಾಮ ನಿಗೆ ಅಭಿನಂದನ, ಆದರೆ ಅವನಿಗೆ ಅದು ಅರ್ಥವಾಗದು "ತಂದೆಯ ಮಾತನ್ನು ಮಗನು ನಡೆಸಿದರೆ ಏನು ಆಶ್ಚರ್ಯ?" ಎನ್ನುವನು ಆ ವಿಷಯ ಅಲ್ಲಿಗೇ ನಿಂತುಹೋಗುವುದು, ಸೀತಾ ರಾಮರು ಹೊಸದಾಗಿ ಸಂಸಾರಕ್ಕೆ ಮೊದಲುಮಾಡಿದ ಯುವಯುವತಿಯರಂತೆ ಸರಸಕ್ಕೆ ಆರಂಭಿಸುವರು, ರಾಮನು ಕನ್ನಡಿ ತೋರಿಸುತ್ತ ಸೀತೆಗೆ ಅಲಂಕಾರ ಮಾಡಿಸಲೆಳಸುವನು ಆಗ ಅವಳು ಧರಿಸಿದ್ದ ಸ್ವರ್ಣವರ್ಣದ ಪಟ್ಟೆ ಮಡಿಯು ಕಣ್ಣಿಗೆಬಿದ್ದು ಅವನಿಗೂ ಅದರ ಮೇಲೆ ಆಸೆಯಾಗುವುದು. ಸೀತೆಗೆ ಇಷ್ಟವಾದದ್ದು ರಾಮನಿಗೂ ಇಷ್ಟ ಆದರೆ ಅದು ಇಕ್ಷ್ವಾಕು ಕುಲದ ಅರಸರ ವೃದ್ಧಾಲಂಕಾರ, ಆದ್ದರಿಂದ ರಾಜ್ಯಾಭಿಷೇಕವನ್ನುಳಿದ ರಾಮನಿಗೆ ಇದು ಅಮಂಗಲವೆಂಬಂತೆ ಸೀತೆಗೆ ಭಾಸವಾಗುವುದು

ಇಷ್ಟುಹೊತ್ತಿಗೆ ಅಂತಃಪುರದಲ್ಲಿ ಸರ್ವನಾಶವಾದಂತೆ ಗಂಡಸರು ಹೆಂಗಸರೆಲ್ಲರೂ ಹಾಹಾಕಾರಮಾಡುವರು. (ದಶರಥ ಮಹಾರಾಜನು ಮಂಥರೆಯ ಮಾತಿನಂತೆ ಕೈಕೆಯನ್ನು ಕಂಡು ಅವಳು ಕೋರಿದ ವರವನ್ನು ಕೇಳಿ ಮೂರ್ಛೆಹೋಗುವನು) ಆ ಧ್ವನಿಯನ್ನು ಕೇಳಿ ಏನೋ ಮಹಾಅನರ್ಥವಾಗಿದೆಯೆಂದು ರಾಮನು ಊಹಿಸುವನು.

ಅದಕ್ಕೆ ಕೈಕೆ* ಮೂಲವೆಂದು ಯಾರೋ ಹೇಳುವರು ಹಾಗಿದ್ದರೆ ಇದು ಕೆಡುಕಲ್ಲ, ಪುರೋಭಿವೃದ್ಧಿಯನ್ನುಂಟುಮಾಡುವ ಗುಣವೇ ಆಗಿರಬೇಕು, ಏಕೆಂದರೆ, ತಾಯಿ ಎಂದಿಗೂ ಅಮಂಗಳವನ್ನುಂಟುಮಾಡಲಾರಳು—ಎಂದು ಅವನು ನಿರ್ಧರಿಸುವನು "ದೇವೇಂದ್ರನಿಗೆ ಸರಿಸಮಾನನಾದ ಗಂಡನೂ ತನ್ನಂಥ ಮಗನೂ ಇದ್ದಾಗ ಅವಳಿಗೆ ಯಾವುದಕ್ಕೆ ಕಡಮೆ ? ಅಂಥವಳು ಏಕೆತಾನೇ ಅಕಾರ್ಯವನ್ನು ಮಾಡಿಯಾಳು ?" ಎಂಬುದು ಅವನ ತರ್ಕ ಕೈಕೆಯ ವರಸ್ವರೂಪವು ತಿಳಿದಮೇಲೂ, "ತಾಯಿಯಾದವಳು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಿಗೆ ರಾಜ್ಯ ಬರಬೇಕೆಂದು ಆಶಿಸಿದರೆ ಅದು ಸ್ವಾಭಾವಿಕ, ಆ ರಾಜ್ಯ ನನಗೆ ಬರಲಿಲ್ಲವೆಂದು ಆಕ್ಷೇಪಿಸುವುದು ನಮ್ಮ ಲೋಭ ಪಟ್ಟಾಭಿಷೇಕ ನಿಂತದ್ದು ಎಷ್ಟು ಒಳ್ಳೆಯದಾಯಿತು ! ದಶರಥ ಮಹಾರಾಜನು ಕಾಡಿಗೆ ಹೋಗುವುದು ತಪ್ಪಿತು, ನಾನು ಇನ್ನೂ ನಾಲ್ಕುದಿನ ತಂದೆಯ ಕಣ್ಣುಮುಂದಿನ ಮಗನಾಗಿ ರಾಜ್ಯದ ಭಾರವಿಲ್ಲದೆ ನಿಶ್ಚಿಂತೆಯಿಂದಿರಬಹುದು, ಹೊಸಬ ಹೇಗೆ ರಾಜ್ಯವಾಳುತ್ತಾನೋ ಎಂದು ಪ್ರಜೆಗಳು ಶಂಕಿಸಬೇಕಾದುದಿಲ್ಲ—" ಎಂದು ಸಮಾಧಾನ, ಸಂತೋಷ ಆದರೆ ಮುಪ್ಪಿನ ಮುದುಕನಾದ ದಶರಥನಿಗೆ, ರಾಮನಮೇಲೆ ಮಹಾ ಮೋಹ, ಅವನು ಕೈಕೆಯ ಮಾತನ್ನು ಕೇಳಿ ಮರುಮಾತೇ ಹೊರಡದೆ ಕೈಸನ್ನೆಯಿಂದ ಎಲ್ಲರನ್ನೂ ಕಳುಹಿಸಿ ಮೂರ್ಛೆಹೋದನು ಈ ವರ್ತಮಾನವನ್ನು ಕೇಳಿದ ಲಕ್ಷ್ಮಣನು, ಭುಗ್ಗನೆ ಜ್ವಲಿಸಿದ ಬೆಂಕಿಯಂತೆ ಕೆರಳಿ, "ಮೆತ್ತನೆಯವರ ವಾಡೆಲ್ಲಾ ಹೀಗೆಯೇ, ನಮ್ಮವರೆಂದು ನಂಬಿದರೆ ಅವರು ಮಾಡುವುದು ಗೊತ್ತೇ ಇದೆ—ಈ ಹೆಂಗಸರ ಹಣೆಯಬರಹವೇ ಇಷ್ಟು, ಇವರ ಹೆಸರಿಲ್ಲದ ಹಾಗೆ ಮಾಡಿಬಿಡುತ್ತೇನೆ" ಎಂದು ಹಾರಾಡುತ್ತ ಬಿಲ್ಲನ್ನು ವಿಜೃಂಭಿಸುತ್ತ ಹೊರಟನು ರಾಮನಿಗೂ ಅವನನ್ನು ತಡೆಯಲು

---

* ಕೇಕಯ ರಾಜನ ಮಗಳು 'ಕೈಕಯೀ', ಆದರೆ ಉಚ್ಚಾರಣ ಸೌಕರ್ಯಾರ್ಥವಾಗಿ ಕನ್ನಡದಲ್ಲಿ ರೂಢವಾಗಿರುವ 'ಕೈಕೆ' ಎಂಬ ರೂಪವನ್ನೇ ಇಲ್ಲಿಯೂ ಮುಂದೂ ಉಪಯೋಗಿಸಿದೆ.

ಕಷ್ಟವಾಗುವುದು , ಅವನು "ರಾಜ್ಯ ಹೋಯಿತು , ತಂದೆ ಹೋಗುವುದರಲ್ಲಿದ್ದಾನೆ , ಇದನ್ನು ನೀನು ಮನಸ್ಸಿಗೇ ಹತ್ತಿಸಿಕೊಳ್ಳದೆ ಉದಾಸೀನನಾಗಿದ್ದೀಯೆ ಧೈರ್ಯವಿಲ್ಲದ ಕ್ಷಮೆಯಿಂದೇನು ಪ್ರಯೋಜನ ? " ಎಂದು ಗದರಿಸಿ, ರಾಮನಿಗೂ ದಕ್ಕದೆ ಹೊರಟುಬಿಡುವನು ಲಕ್ಷ್ಮಣನನ್ನು ಹಾಗೇ ಬಿಟ್ಟುಬಿಟ್ಟರೆ ಮೂರು ಲೋಕವನ್ನೂ ದಹಿಸಿಬಿಡುವಂತಿದ್ದನು , ಆ ಕೋಪಕ್ಕೆ ಎಲ್ಲವೂ ಆಹುತಿಯಾಗಿಬಿಡುತ್ತಿತ್ತು ಆದ್ದರಿಂದ ಅಣ್ಣನು ಅವನನ್ನು ಹಿಂದಕ್ಕೆ ಕರೆದು, ಶಾಂತನಾಗಿ, "ಅಯ್ಯಾ, ಸತ್ಯದಮೇಲೆ ದೃಷ್ಟಿಯುಳ್ಳ ಮುಪ್ಪಿನ ತಂದೆಯನ್ನು ಶಿಕ್ಷಿಸೋಣವೆ ? ತನ್ನ ವಿತ್ತವನ್ನು ಅಪೇಕ್ಷಿಸಿದ ತಾಯನ್ನು ಹೊಡೆಯೋಣವೇ ? ನಿರಪರಾಧಿಯಾದ ತಮ್ಮನನ್ನು ಕೊಂದುಬಿಡೋಣವೇ ? ಈ ಮೂರು ಪಾಪಗಳಲ್ಲಿ ಯಾವುದು ಒಳ್ಳೆಯದು ? " ಎಂದು ಕೇಳುವನು ಲಕ್ಷ್ಮಣನ ಕೋಪಕ್ಕೆ ಕಾರಣ ರಾಜ್ಯಲೋಭವಲ್ಲ ಅಣ್ಣನ ಮೇಲಣ ಮಮತೆ , ಅನುರಾಗ , ಅವನು ಹದಿನಾಲ್ಕುವರ್ಷ ವನವಾಸಮಾಡಿ ಶ್ರಮಪಡಬೇಕಲ್ಲಾ, ಆ ಕಷ್ಟವನ್ನು ಅವನು ಹೇಗೆ ಸಹಿಸಿಯಾನು ?—ಎಂಬ ಚಿಂತೆ ಇಷ್ಟು ಹೊತ್ತಿಗೆ, ಸೀತೆಯು ವೈಲಿಗೆಯಾದ ನಾರುಮಡಿಯನ್ನುಟ್ಟ ವರ್ತಮಾನವು ನೇಪಥ್ಯಪಾಲಿನಿಯಾದ ರೇವೆಗೆ ಮುಟ್ಟಿ, ಅವಳು ಒಂದು ಜೊತೆ ಹೊಸ ಮಡಿಗಳನ್ನು ಕಳುಹಿಸುವಳು ಅವು ಸಮಯಕ್ಕೆ ಸರಿಯಾಗಿ ಒದಗಲು ರಾಮಲಕ್ಷ್ಮಣರು ಒಂದೊಂದನ್ನು ಉಟ್ಟುಕೊಳ್ಳುವರು ರಾಮನು ಸೀತಾಲಕ್ಷ್ಮಣರನ್ನು ತಡೆದು ನೋಡುವನು ಆದರೆ ಅವನ ಬುದ್ಧಿವಂತಿಕೆಯ ಮಾತುಗಳೊಂದೂ ನಡೆಯಲಿಲ್ಲ ಕೊನೆಗೆ ಸೀತೆಯನ್ನು ಲಕ್ಷ್ಮಣನೂ, ಲಕ್ಷ್ಮಣನನ್ನು ಸೀತೆಯೂ ಸಿಪಾರಸು ಮಾಡಿಕೊಂಡು ಎಲ್ಲರೂ ನಾರುಮಡಿಯುಟ್ಟು ಒಂದೇ ಜೀವದ ಮೂರು ದೇಹಗಳಂತೆ ಆಕ್ಷಣ ಕಾಡಿಗೆ ಹೊರಟೇಬಿಡುವರು. ಊರಿನಲ್ಲೆಲ್ಲಾ ಈ ವರ್ತಮಾನ ಆಗಲೆ ಹರಡಿ ಜನರು ಅವರನ್ನು ನೋಡಲು ಗುಂಪು ಗುಂಪಾಗಿ ಬೀದಿಗಳ ತುಂಬ ನೆರೆದಿದ್ದರು ರಾಮನು ಪ್ರಜೆಗಳಿಗೆ ದರ್ಶನವಿತ್ತು ಹೊರಟುಹೋಗುತ್ತಿದ್ದಾನೆಂದು ಕೇಳಿ ದಶರಥ ಮಹಾರಾಜನು ಮುಪ್ಪಡಸಿದ ಕಾನನ

ದ್ವಿರದದಂತೆ ಧೂಳಿದೂಸರಿತ ದೇಹನಾಗಿ ತತ್ತರಿಸಿಕೊಂಡು ಬಂದನು. ಆದರೆ ರಾಮನು ನಿಲ್ಲಲಿಲ್ಲ ಏಕೆಂದರೆ ಆ ಸಮಯದಲ್ಲಿ ಮನಮರುಗಿ ನಿಂತುಬಿಟ್ಟಿದ್ದರೆ ಪುನಃ ಹೊರಡಲಾಗುತ್ತಿರಲಿಲ್ಲ

ಈ ಭಾಗದಲ್ಲಿ ಕೈಕೆಯ ಕೋರಿಕೆಯಂತೆ ರಾಮನಿಗೆ ಪಟ್ಟಾಭಿಷೇಕ ತಪ್ಪಿ ವನವಾಸ ಪ್ರಾಪ್ತವಾಯಿತೆಂಬುದು ಸೂಚಿತವಾಗಿದ್ದರೂ, ಅವಳು ರಂಗದಮೇಲೆ ಬಂದು ತಾನೇ ನಾರುಮಡಿಗಳನ್ನು ತಂದು ಕೊಟ್ಟು, ವಸಿಷ್ಠಾದಿಗಳು ವಾರಣೆಮಾಡುತ್ತಿದ್ದರೂ ಕೇಳದೆ ಸೀತೆಗೂ ತಪೋವೇಷವನ್ನು ಹಾಕಿಸುವ ನಿಷ್ಠುರ ಸನ್ನಿವೇಶವು ಬರುವುದಿಲ್ಲ ಕೈಕೆಯು ಕೌಸಲ್ಯೆಯಂತೆಯೇ ಗುಣಶಾಲಿನಿಯೆಂದೂ, ಅವಳಿಗೆ ಭರತನು ಹೇಗೋ ರಾಮನೂ ಹಾಗೇ ಎಂದೂ, ಭವಿತವ್ಯತೆಯು ಅವಳನ್ನು ಅನ್ಯಾಯವಾದ ದೂರಿಗೆ ಗುರಿಮಾಡಿತೆಂದೂ ಕವಿಯ ಭಾವ ಆದ್ದರಿಂದ ಸೀತಾರಾಮಾದಿಗಳಿಗೆ ಬೇರೆ ವಿಧವಾಗಿ ನಾರುಮಡಿಗಳನ್ನು ತಂದೊದಗಿಸಿ ಅವರು ಅವುಗಳನ್ನು ಸಮಾಧಾನದಿಂದಲೂ ಸಂತೋಷದಿಂದಲೂ ತಾವೇ ಧರಿಸುವಂತೆ ಕಲ್ಪಿಸಿರುವ ಸನ್ನಿವೇಶವೇ ಇಲ್ಲಿಯ ಸಂವಿಧಾನದಲ್ಲಿ ಚಮತ್ಕಾರವಾದ ಅಂಶವಾಗಿದೆ ಕವಿಯು ಇವರ ಮಧ್ಯದಲ್ಲಿ ಸೀತಾರಾಮ ಲಕ್ಷ್ಮಣರನ್ನಿಟ್ಟು ಅವರ ಸ್ವಾರ್ಥತ್ಯಾಗ ಪೂರ್ವಕವಾದ ಪರಸ್ಪರ ಪ್ರೇಮವನ್ನು ವ್ಯಕ್ತಗೊಳಿಸಿದ್ದಾನೆ ಅವರು ಮುಪ್ಪಿನ ತಂದೆ ತಮ್ಮನ್ನು ಹುಡುಕಿಕೊಂಡು ಬರುತ್ತಿದ್ದಾನೆಂದು ಕೇಳಿದರೂ ಅಲಕ್ಷ್ಯಮಾಡಿ ಹೊರಟು ಹೋದಂತೆ ಈ ಅಂಕವನ್ನು ಮುಗಿಸಿರುವುದು ಒಂದು ದೋಷವಾಗಿ ಕಾಣಬಹುದು ಆದರೆ ಇದು ದಶರಥನ ಶೋಕವು ತೀವ್ರವಾಗುವುದಕ್ಕೆ ದಾರಿ ಹಾಗಲ್ಲದೆ, ಮಕ್ಕಳು ಮರಿಗಳೆಲ್ಲರೂ ಬಂದು ಹತ್ತಿರವಿದ್ದು ಆವನು ಅತ್ತು ಅತ್ತು ಹಂಬಲಿಕೆಯು ಹಳದಾಗಿ, ಆಮೇಲೆ ಹಲವು ದಿನಗಳ ಮೇಲೆ ಸೀತಾರಾಮರು ನೆಂಟರ ಮನೆಗೆ ಹೋಗಿ ಬರುವರಂತೆ ಹೊರಡುವುದರಲ್ಲಿ ಕರುಣರಸ ಪರಿಪುಷ್ಟಿ ಇರುವುದಿಲ್ಲ ಈಗಲಾದರೋ ಹದಿನಾಲ್ಕು ವರ್ಷಕಾಲ ವನವಾಸಕ್ಕೆಂದು ತೆರಳಿದ ಮುದ್ದುಮಕ್ಕಳನ್ನು ಕೊನೆಯಸಾರಿ ನೋಡಬೇಕೆಂದರೂ ಮುಖ ಸಿಕ್ಕದೆ ಮುದುಕನು ಶೋಕಪರವಶನಾಗುವನು ಹೃದಯವು ಬೆಂದು,

ಬುದ್ಧಿಯು ಕಂದಿ, ದೇಹವು ಕುಗ್ಗಿ, ಹುಚ್ಚುಹಿಡಿದಂತಾಗುವುದು

ಎರಡನೆಯಂಕವೆಲ್ಲವೂ ಶೋಕಮಯ ಬರಿಯ ಅಳುವನ್ನು ಒಂದು ಅಂಕದ ತುಂಬ ತುಂಬುವುದು ಅಸಾಧ್ಯವಾದ ಕೆಲಸ ಭಾಸನು ಈ ಅಸಾಧ್ಯವನ್ನು ಸಾಧಿಸುತ್ತಾನೆ ದಶರಥನ ಮನಸ್ಸಿನ ತುಂಬ ಸೀತಾರಾಮ ಲಕ್ಷ್ಮಣರೇ, ಬಾಯಲ್ಲಿ ಸದಾ ಅವರೇ, ಅವನು ಒಂದು ಸಲ ರಾಮನ ಲೋಭರಾಹಿತ್ಯವನ್ನು ಮೆಚ್ಚುವನು, ಇನ್ನೊಂದು ಸಲ "ಮುದುಕನೂ ತಂದೆಯೂ ಆದ ನನ್ನನ್ನು ಉಳಿದು ನೀನು ಮಾಡುವ ಅಸಂಬದ್ಧವಾದ ಧರ್ಮ ಕಾರ್ಯವೇನು? ಹಾ!! ಛೀ" ಎಂದು ಹಳಿಯುವನು, ಅಯ್ಯೋ! ರಾಮನು ಮತ್ತಾರ ಹೊಟ್ಟೆಯಲ್ಲಾದರೂ ಹುಟ್ಟಿ ಸುಖವಾಗಿರದೆ ನನ್ನ ಹೊಟ್ಟೆಯಲ್ಲೇಕೆ ಹುಟ್ಟಿ ಕಷ್ಟಕ್ಕೆ ಗುರಿಯಾದ!" ಎಂದು ಕೊರಗುವನು "ಈ ಕೈಕೆ ಹೆಣ್ಣು ಹುಲಿಯಾಗಿ ಹುಟ್ಟಿ ಕಾಡಿನಲ್ಲಿರಬೇಕಾಗಿತ್ತು!" ಎಂದು ಅವಳ ಕ್ರೌರ್ಯವನ್ನು ನೆನೆಯುವನು ರಾಮ ಲಕ್ಷ್ಮಣರ ಹೆಸರು ಯಾರ ಬಾಯಲ್ಲಾದರೂ ಯಾವ ಸಂದರ್ಭದಲಾದರೂ ಬಂದರೆ, ತನ್ನ ಮಕ್ಕಳೇ ಬಂದರೇನೋ ಎಂದು ಆಶೆಯಿಂದ ತಟ್ಟನೆ ಏಳುವನು, ಏಳುವುದಕ್ಕೆ ಕೈಲಾಗದೆ ಬೀಳುವನು ಸೀತಾರಾಮರ ಹಿಂದೆ ಹೋಗಿದ್ದ ಸುಮಂತ್ರನು ಬಂದನೆಂದರೆ, ತನ್ನ ಮಕ್ಕಳನ್ನು ಕರೆದುಕೊಂಡು ಬಂದನೋ ಏನೋ ಎಂದು ಚಪಲ, ಇಲ್ಲ, ಆ ಶೋಕಭರದಲ್ಲಿ, ಸನ್ನಿ ಹಿಡಿದವರಂತೆ, ಮಾತಿನ ರೀತಿಯನ್ನು ಬದಲಾಯಿಸಿ, ತನ್ನನ್ನು ತಾನು ತಿದ್ದಿಕೊಂಡವನಂತೆ "ನಾನು ಅಸಂಗತವಾದ ಮಾತನಾಡಿದೆ, ಇದು ತಪಸ್ವಿಗಳಿಗೆ ಉಚಿತವಾದ ಪ್ರಶ್ನೆಯಲ್ಲ, ಆದಕಾರಣ ಹೇಳು, ತಪಸ್ವಿಗಳಾದ ಅವರ ತಪಸ್ಸು ವರ್ಧಿಸುತ್ತಿರುವುದೇ? " ಎಂದು ಯಾರೋ ಋಷಿಗಳ ವಿಚಾರವನ್ನು ಪ್ರಶ್ನೆಮಾಡುವಂತೆ ಗಂಭೀರವಾಗಿ ಕೇಳುವನು ಅವರನ್ನು ನೋಡುವುದು ಅಸಾಧ್ಯವಾಗಿರುವುದರಿಂದ ಈಗ ಅವರ ಹೆಸರನ್ನು ಕೇಳುವುದೂ ಸಂತೋಷಕರವಾಗಿದೆ, ಅವುಗಳನ್ನು ಎಷ್ಟು ಸಾರಿ ಕಿವಿಯಿಂದ ಕೇಳಿ ಎಷ್ಟು ಹೊತ್ತು ಬಾಯಲ್ಲಿ ಹೇಳಿಕೊಳ್ಳುತ್ತಿದ್ದರೆ ಅಷ್ಟು ಸಂತೋಷ—ಆದ್ದರಿಂದ

ಸುಮಂತ್ರನು, "ಎಲ್ಲರೂ ಮಹಾರಾಜನನ್ನು ಕುರಿತು ಹೇಳಿದರು" ಎಂದಾಗ ಅವನಿಗೆ ತೃಪ್ತಿ ಇಲ್ಲ, "ಅವರ ಹೆಸರುಗಳನ್ನು ಸರಿಯಾಗಿ ಹೇಳು" ಎನ್ನುವನು ಸುಮಂತ್ರನು ಮೊದಲು ರಾಮನ ಹೆಸರನ್ನು ಹೇಳುವನು ದಶರಥನು ಅದನ್ನು ನಾನು ಬಾಯಲ್ಲಿ ಹೇಳಿ, ಚಪ್ಪರಿಸಿ,—"ರಾಮ, ಇವನು ರಾಮ, ಇವನ ಹೆಸರನ್ನು ಕೇಳಿದುದರಿಂದ ಇವನನ್ನು ನೋಡಿದಂತೆ ನನಗೆ ತೋರುವುದು, ಆಮೇಲೆ?" ಎನ್ನುವನು

ಸುಮಂತ್ರ—"ಆಯುಷ್ಮಂತನಾದ ಲಕ್ಷ್ಮಣ"

ರಾಜ—"ಇವನು ಲಕ್ಷ್ಮಣ ಆಮೇಲೆ?."

ಸುಮಂತ್ರ—"ಆಯುಷ್ಮತಿ ಜನಕರಾಜ ಪುತ್ರಿ"

ರಾಜ—"ಇವಳು ಜಾನಕಿ ರಾಮ, ಲಕ್ಷ್ಮಣ, ಜಾನಕಿ—ಎಂಬುದಿದು ಅಕ್ರಮ"

(ಅವನಿಗೆ, ಹೆಸರುಗಳನ್ನು ಒಂದುಸಾರಿ ಕೇಳಿ, ತಾನು ಒಂದು ಸಾರಿ ಬೇರೆ ಬೇರೆ ಹೇಳಿ, ಆಮೇಲೆ ಒಟ್ಟಿಗೆ ಹೇಳಿದರೂ ತೃಪ್ತಿಯಿಲ್ಲ, ತಿರುಗಿ ಕೇಳಬೇಕೆಂಬ ಆಶೆ, ಆದ್ದರಿಂದ ಈ ನೆವ, ಸೀತೆಯ ಮೇಲಣ ಪ್ರೇಮವೂ ಹೌದು)

ಸುಮಂತ್ರ—"ಆದರೆ ಕ್ರಮವಾವುದು?"

ರಾಜ—"ರಾಮ, ಜಾನಕಿ, ಲಕ್ಷ್ಮಣ—ಎಂದು ಹೇಳು ಜಾನಕಿ ರಾಮನಿಗೂ ಲಕ್ಷ್ಮಣನಿಗೂ ನಡುವೆ ಇರಲಿ!"

ತಿರುಗಿ ಸುಮಂತ್ರನು, ಆ ಕ್ರಮದಲ್ಲಿ ಒಂದೊಂದಾಗಿ ಹೇಳುವನು, ದಶರಥನೂ ನಿದಾನವಾಗಿ ಹೇಳುವನು ಮಹಾರಾಜನಿಗೆ ಸ್ವಲ್ಪ ಸಮಾಧಾನವಾಯಿತೇನೋ ಎಂದು ಸುಮಂತ್ರನ ಯೋಚನೆ ಆದರೆ ದಶರಥನ ಆ ಶಾಂತಿಯು ಕಾಯುತ್ತಿರುವ ಹಾಲಿನ ಮೇಲಣ ಕೆನೆ ಉತ್ತರಕ್ಷಣದಲ್ಲಿಯೇ ಅದು ಉಕ್ಕಿ ಹರಿದು ಬೆಂದುಹೋಗುವುದು. ಹಾಗೇ, ದಶರಥನೂ "ರಾಮ! ಜಾನಕಿ! ಲಕ್ಷ್ಮಣ! ಮಕ್ಕಳಿರಾ! ನೀವು ನನ್ನನ್ನು ಅಪ್ಪಿಕೊಳ್ಳಿ!" ಎಂದು ಅರಚುವನು. "ರಾಮನು ಬಂದು ಈಗ ಒಂದು ಸಾರಿ ನನ್ನನ್ನು ಮುಟ್ಟಿದರೆ, ಕೊನೆಗೆ

ಒಂದು ಸಾರಿ ಕಣ್ಣಿಗೆ ಬಿದ್ದರೆ, ಅಮೃತ ಕುಡಿದಂತೆ ಬದುಕಿಕೊಂಡೇನು!" ಎಂದು ಹಂಬಲಿಸುವನು ಆದರೆ ಊರಲ್ಲಿ ಇಲ್ಲದವರನ್ನು ಹೆಸರಿಟ್ಟು ಕರೆದರೆ ಅವರು ಬಂದಾರೇ?

ಇಷ್ಟು, ಸುಮಿತ್ರೆಯ ಪ್ರಶ್ನೆಗೆ ಉತ್ತರವಾಗಿ ರಾಮಾದಿಗಳ ಸಂದೇಶವನ್ನು ಸುಮಂತ್ರನು ಹೇಳಹೊರಟಾಗ ನಡೆದದ್ದು ಅವರ ಸಂದೇಶವೇನು? ಅದನ್ನು ನಾವು ಕುತೂಹಲದಿಂದ ಎದುರು ನೋಡುತ್ತಿರುವಾಗ, ಇತರ ಕವಿಗಳು ಲೆಕ್ಕಾಚಾರ ಮಾಡಿ ವಕ್ತೃಶ್ರೋತೃಗಳಿಗೆ ಒಬ್ಬೊಬ್ಬರಿಗೆ ಇಷ್ಟಿಷ್ಟೆಂದು ಅಳತೆ ತೂಕ ಮಾಡಿ ಶ್ಲೋಕಗಳನ್ನು ಹಂಚಿ ಹೇಳಿಸಿ ಬಿಡುವಾಗ, ಭಾಸನು ಬರಿಯ ಕೈಯಲ್ಲಿ ಬಣ್ಣ ಕಟ್ಟಿಬಿಟ್ಟಿದ್ದಾನೆ ಶ್ರಾವ್ಯವಾಗಿರಬೇಕಾದ ಸಂದೇಶಕ್ಕೆ ಬದಲಾಗಿ ಅದಕ್ಕಿಂತ, ಕಾವ್ಯದೃಷ್ಟಿಯಲ್ಲಿ, ಅಭಿರಾಮತರವಾದ ಅಶ್ರುತ ಸಂದೇಶವನ್ನು ತಂದಿಟ್ಟು ತನ್ನ ಕೌಶಲವನ್ನು ವ್ಯಕ್ತಗೊಳಿಸಿದ್ದಾನೆ. ಮೊದಲನೆಯ ಅಂಕದ ಕೊನೆಯಲ್ಲಿ ತಂದೆಗೆ ಮುಖವನ್ನು ತೋರಿಸದೆ ಹೊರಟುಬಿಟ್ಟರೂ, ರಾಮಾದಿಗಳಿಗೆ ದುಃಖವಿಲ್ಲದಿರಲಿಲ್ಲ ಒಳಗೆ ನಿಗೂಢವಾಗಿತ್ತು ದಶರಥನನ್ನು ಕಂಡರೆ ಅದು ಹೊರಬಿದ್ದು ಧೈರ್ಯ ಸಾಲದೆ ಸಂಕಲ್ಪ ವಿಘಾತವೆಲ್ಲಾದೀತೋ ಎಂದು ಹೆದರಿ, ಹೊರಟುಬಿಟ್ಟರು ಈಗ ಅದು ವ್ಯಕ್ತವಾಗುವುದು ಅವರು "ಶೃಂಗಿಬೇರಪುರದಲ್ಲಿ ರಥದಿಂದ ಇಳಿದು ಅಯೋಧ್ಯಾಭಿಮುಖವಾಗಿ ನಿಂತು ಎಲ್ಲರೂ ಬಿನ್ನವಿಸಲು ಆರಂಭಿಸಿದರು ಬಹಳ ಹೊತ್ತು ಯೋಚಿಸಿ ಯೋಚಿಸಿ, ಏನನ್ನೋ ಹೇಳಬೇಕೆಂದು ಪ್ರಯತ್ನಮಾಡಿದರು, ತುಟಿಗಳು ಅಲುಗಿದುವು ಕಣ್ಣೀರು ಬಂದು ಕೊರಲ ಸೆರೆ ಬಿಗಿಯಿತು ಮಾತೇ ಹೊರಡಲಿಲ್ಲ ಆದ್ದರಿಂದ ಏನನ್ನೂ ಹೇಳದೆಯೇ ಮುಂದಕ್ಕೆ ಹೊರಟುಹೋದರು"

ಇದು ಅಪೂರ್ವ ಸಂದೇಶಪ್ರದಾನ ವಿವರಣಕ್ರಮ, ಇದನ್ನು ಮತ್ತಾವ ಕವಿಯೂ ಅನುಸರಿಸಿಲ್ಲ "ಮಾತು ಬೆಳ್ಳಿ, ಮೌನ ಬಂಗಾರ" ಎಂಬಂತೆ ಇಲ್ಲಿ ಏನು ಸಂದೇಶವನ್ನೂ ಹೇಳಿಸದೆ, ಹೇಳಿದ್ದಕ್ಕಿಂತ ಹೆಚ್ಚಾಗಿ ಕವಿಯು ರಸಪುಷ್ಟಿಯನ್ನು ತಂದಿರುವನು.

ಸುಮಂತ್ರನ ಈ ಮಾತನ್ನು ಕೇಳಿ, ಅದರಿಂದ ಧ್ವನಿತವಾದ ರಾಮಾದಿಗಳ ದುಃಖವನ್ನು ನೆನೆದು, ಮಹಾರಾಜನು ಮೂರ್ಛೆ ಹೋಗುವನು ರಾಮನಿಲ್ಲದಾಗ ರಾಮನ ತಾಯಿಯನ್ನಾದರೂ ಮುಟ್ಟಿದರೆ ಮನಸ್ಸಿಗೆ ಸ್ವಲ್ಪ ಹಿತವಾಗುವುದೇನೋ ಎಂದು ಅವಳನ್ನು ನೋಡುವನು ಅವಳು ಹತ್ತಿರದಲ್ಲಿಯೇ ಇದ್ದರೂ ಕಣ್ಣಿಗೆ ಬೀಳಳು, ಇಂದ್ರಿಯಗಳು ಆಗಲೆ ಸ್ವಾಧೀನತಪ್ಪುತ್ತ ಬಂದು, ಪ್ರಾಣದೀಪವು ನಂದುತ್ತಿತ್ತು ಆಗಲೂ, "ರಾಮ, ನಿನಗೆ ರಾಜ್ಯವನ್ನು ಒಪ್ಪಿಸಿ ನಾನು ಕಾಡಿಗೆ ಹೋಗಬೇಕೆಂದಿದ್ದೆ, ಆದರೆ ನನಗ ರಾಜ್ಯವೊಪ್ಪಿಸಿ ನೀನೇ ಕಾಡಿಗೆ ಹೋದೆಯಾ" ಎಂದು ರಾಮನನ್ನು ನೆನೆದು, "ಇಗೋ ರಾಮ ಕಾಡಿಗೆ ಹೋದ, ನಾನು ಪ್ರಾಣಬಿಟ್ಟೆ, ಇನ್ನು ನಿನ್ನ ಮಗನನ್ನು ಕರೆಸಿಕೋ! ಪಾಪಿ, ನಿನ್ನ ಪಾಪ ಫಲಿಸಲಿ!" ಎಂದು ಕೈಕೆಗೆ ಹೇಳಿ ಕಳುಹಿಸುವನು ಅಂತ್ಯಕಾಲದಲ್ಲಿ ಪಿತೃಗಳು ದರ್ಶನವಿತ್ತು ಅವನನ್ನು ಕರೆದುಕೊಂಡು ಹೋಗುವರು ನಾಯು ವಾಗಲೂ ಅವನ ಬಾಯಲ್ಲಿ ಕೊನೆಯ ಮಾತುಗಳು—ರಾಮ, ಜಾನಕಿ, ಲಕ್ಷ್ಮಣ!

ಮೂರನೆಯ ಅಂಕದಲ್ಲಿ ಕವಿಯು ಭರತನನ್ನು ಪ್ರವೇಶಗೊಳಿಸಿ ಅವನು ದಶರಥನ ಮರಣ ವೃತ್ತಾಂತವನ್ನು ಅರಿತ ಬಗೆ, ಅದು ಅವನ ಮೇಲೆ ಉಂಟುಮಾಡಿದ ಪರಿಣಾಮ—ಇವುಗಳನ್ನು ವಿವರಿಸುತ್ತಾನೆ. ಮಹಾರಾಜನ ಮರಣಾನಂತರ, ಸೋದರಮಾವನ ಮನೆಯಲ್ಲಿದ್ದ ಭರತನನ್ನು ಕರೆತರಲು ಸೂತನು ರಥವನ್ನು ತೆಗೆದುಕೊಂಡು ಹೋಗು ವನು ಆದರೆ ಮಹಾರಾಜನಿಗೆ ದೇಹದಲ್ಲಿ ಅಸ್ವಸ್ಥತೆಯೆಂದು ಮಾತ್ರ ಹೇಳುವನು, ಇಲ್ಲದಿದ್ದರೆ ಒಂದರಿಂದ ಒಂದರಂತೆ, ತಂದೆಯ ಸಾವು. ತಾಯಿಯ ಲೋಭ, ಅಣ್ಣನ ವನವಾಸ—ಈ ಮೂರನ್ನೂ ತಿಳಿಸ ಬೇಕಾಗಿತ್ತು, ಸೂತನಿಗೆ ಇದಕ್ಕೆ ಮನಸ್ಸು ಬರದು. ಆದರೆ ಭರತನಿಗೆ ಮನಸ್ಸಿನಲ್ಲಿ ಕಳವಳ ಆದ್ದರಿಂದ ತನ್ನ ತಂದೆಗೆ ಏನು ಕಾಯಿಲೆ, ವೈದ್ಯರು ಏನೆನ್ನುತ್ತಾರೆ, ಊಟಮಾಡುತ್ತಾನೆಯೇ, ನಿದ್ರೆ ಬರು ತ್ತದೆಯೇ, ಜೀವಕ್ಕೆ ಏನೂ ಮೋಸವಿಲ್ಲವೇ ಎಂದು ತಂದೆಯ ದೇಹ

ಸ್ಥಿತಿಯನ್ನು ಕೆದಕಿ ಕೆದಕಿ ಕೇಳುವನು ಸೂತನೂ ದ್ವಂದ್ವಾರ್ಥ ವಾಗುವಂತೆ ಉಪಾಯವಾಗಿ ಉತ್ತರಕೊಟ್ಟು ತಪ್ಪಿಸಿಕೊಂಡು, ಅಂತು ಇಂತು ಅಯೋಧ್ಯೆಯ ಹತ್ತಿರಕ್ಕೆ ಬರುವನು. ಊರಿನ ಹತ್ತಿರಕ್ಕೆ ಬಂದ ಬಂಪಹಾಗಲ್ಲಾ ಭರತನಿಗೆ ಔತ್ಸುಕ್ಯ ಹೆಚ್ಚುವುದು—ತಾನು ತಂದೆಗೆ ನಮಸ್ಕರಿಸಿ ಆಶೀರ್ವಾದ ಪಡೆಯುವಂತೆಯೂ, ಅವನು ತನ್ನನ್ನು ಕೈಯಿಂದ ಎತ್ತಿ ನಿಲ್ಲಿಸುವಂತೆಯೂ, ಸೋದರರೆಲ್ಲರೂ ತಟ್ಟನೆ ಬಂದು ತನ್ನ ಸುತ್ತಲೂ ಮುತ್ತಿಕೊಳ್ಳುವಂತೆಯೂ, ಲಕ್ಷ್ಮ ಣನು ತನ್ನ ನಡನುಡಿಯನ್ನು ಕಂಡು ಪರಿಹಾಸ್ಯಮಾಡುವಂತೆಯೂ ಮನಸ್ಸಿನಲ್ಲಿಯೆ ಚಿತ್ರಿಸಿಕೊಳ್ಳುವನು ಆದರೆ ಅತಿಯಾನೆ ಗತಿಕೆಡಿಸು ವುದು, ಅಯೋಧ್ಯೆಯ ಊರುಬಾಗಿಲನ್ನು ನೇರುತ್ತಿದ್ದಹಾಗೇ, ಎಡವಿದಂತೆ ನಿಲ್ಲಬೇಕಾಗುವುದು ಊರಿನೊಳಕ್ಕೆ ಹೋಗಲು ಲಗ್ನ ಚೆನ್ನಾಗಿಲ್ಲ, ಆದ್ದರಿಂದ ಸ್ವಲ್ಪ ತಡೆಯಬೇಕೆಂದು "ಗುರುಗಳು" ಹೇಳಿಕಳುಹಿಸುವರು "ಊರಿಗೆ ಬಂದಾಗ ಊರಬಾಗಲಲ್ಲಿ ಸ್ವಲ್ಪ ಕುಳತುಕೊಂಡೇ ಒಳಗೆ ಹೋಗಬೇಕೆಂಬ ಪದ್ಧತಿಯುಂಟು—ಅದನ್ನು ನಡೆಸಿದಹಾಗೂ ಆಯಿತು, ಗುರುಗಳ ಮಾತನ್ನು ಅನುಸರಿಸಿದಹಾಗೂ ಆಯಿತು" ಎಂದುಕೊಂಡು, ತನಗೆ ಉತ್ಸಾಹಭಂಗವಾದರೂ, ಅಲ್ಲಿಯೆ ದೇವಸ್ಥಾನದಂತೆ ಕಾಣುತ್ತಿದ್ದ ಒಂದು ಕಟ್ಟಡದ ಹತ್ತಿರಕ್ಕೆ ಹೋಗು ವನು ಅದರಲ್ಲಿ ದೇವಸ್ಥಾನದ ಚಿಹ್ನೆಗಳಿರಲಿಲ್ಲ, ಆದರೆ ಹೊಸದಾಗಿ ಅದಕ್ಕೆ ಅಲಂಕಾರಾದಿಗಳನ್ನು ಮಾಡಿದ್ದರು, ಆದ್ದರಿಂದ ಕುತೂಹಲಿತ ನಾಗಿ ಒಳಹೊಕ್ಕು ನೋಡಲು, ಅಲ್ಲಿ ನಾಲ್ಕು ಶಿಲಾಮೂರ್ತಿಗಳು ಇದ್ದುವು ಅವು ದೇವಮೂರ್ತಿಗಳಾಗಿರಬೇಕೆಂದು ಅವುಗಳಿಗೆ ವಂದಿಸುತ್ತಿ ರುವ ವೇಳೆಗೆ ದೇಗುಲಿಗನು ಬಂದು, ಅವು ಕ್ಷತ್ರಿಯರ ವಿಗ್ರಹಗಳೆಂದೂ, ಇಕ್ಷ್ವಾಕುಗಳವೆಂದೂ ಕ್ರಮವಾಗಿ ತಿಳಿಸುವನು ಕುತೂಹಲಿತನಾದ ಭರತನ ಪ್ರಶ್ನೆಗ ಉತ್ತರವಾಗಿ ಮೊದಲನೆಯದು ದಿಲೀಪನದು, ಎರಡನೆ ಯದು ರಘುವಿನದು, ಮೂರನೆಯದು ಅಜನದು ಎಂದು, ಅವರವರ ಮಹಿಮಾವರ್ಣನಪೂರ್ವಕವಾಗಿ, ಪರಿಚಯ ಮಾಡಿಕೊಡುವನು ಅಲ್ಲಿಂದ ಮುಂದೆ ನಾಲ್ಕನೆಯದಾದ ದಶರಥನ ವಿಗ್ರಹವನ್ನು ನೋಡು

ತ್ತಲೆ ಕಳವಳವುಂಟಾಗಿ ಭರತನು ತಿರುಗಿ ಆ ಹೆಸರುಗಳನ್ನೆಲ್ಲಾ ಮೊದಲಿಂದ ಕ್ರಮವಾಗಿ ಹೇಳಿಸುವನು—ದಿಲೀಪ, ತನ್ನ ಮುತ್ತಜ್ಜನ ತಂದೆ, ರಘು, ತನ್ನ ಮುತ್ತಜ್ಜ, ಅಜ, ತನ್ನ ಅಜ್ಜ, ಮುಂದೆ ದಶರಥ ಬರಬೇಕಷ್ಟೆ? ಅವನ ವಿಚಾರವನ್ನು ಕೇಳಲು ಹೆದರಿಕೆ ಆದ್ದರಿಂದ ಮನಸ್ಸು ಹಿಂತೆಗೆಯುತ್ತ "ನಿನ್ನನ್ನು ಸ್ವಲ್ಪ ಕೇಳುವೆನು, ಜೀವಿಸಿರುವವರ ಪ್ರತಿಮೆಗಳನ್ನೂ ಇಲ್ಲಿ ಇಡುವುದುಂಟೆ ?" ಎಂದು ಪ್ರಶ್ನೆಮಾಡುವನು "ಇಲ್ಲ, ದಿವಂಗತರಾದವರ ಪ್ರತಿಮೆಗಳನ್ನೇ" ಎಂದು ಉತ್ತರ ಬರುವುದು "ಹಾಗಾದರೆ—" ಎಂದು ಭರತನು ಮತ್ತೆ ನಿರಾಶನಾಗಿ ಪ್ರಶ್ನೆಗೆ ಆರಂಭಿಸುವನು ಅವನನ್ನು ಆಗಲೇ ಗುರುತಿಸಿದ್ದ ದೇಗುಲಿಗನಿಗೆ ಇನ್ನು ತಡೆಯಲಾಗದೆ, "ಹೆಂಗಸಿನ ಶುಲ್ಕಕ್ಕಾಗಿ ಪ್ರಾಣವನ್ನೂ ರಾಜ್ಯವನ್ನೂ ಕೊಟ್ಟ ದಶರಥನ ಪ್ರತಿಮೆಯನ್ನು ಏಕೆ ಕೇಳಲೊಲ್ಲೆ ?" ಎನ್ನಲು, ಭರತನು ತಾನು ಯಾವುದನ್ನು ಕುರಿತು ಶಂಕಿಸುತ್ತಿದ್ದನೋ ಅದೇ ಆದದ್ದಕ್ಕಾಗಿ ಸಿಡಿಲು ಬಡಿದವನಂತೆ ಮೂರ್ಛೆಹೋಗುವನು ಸೀತಾಲಕ್ಷ್ಮಣರೊಡಗೂಡಿ ರಾಮನು ಕಾಡಿಗೆ ತೆರಳಿದನೆಂಬ ಅಂಶವೂ ಗೊತ್ತಾಗುವುದು ಅದಕ್ಕೆ ಕಾರಣವೇನೆಂಬುದು ದೇಗುಲಿಗನಿಗೆ ಗೊತ್ತಿಲ್ಲ, ಆದ್ದರಿಂದ ಇನ್ನು ಸ್ವಲ್ಪ ವಿಚಾರಮಾಡಲು ದೇಗುಲಿಗನು "ಮಹಾರಾಜನು ರಾಮನನ್ನು ರಾಜ್ಯದಲ್ಲಿ ಅಭಿಷೇಚಿಸುತ್ತಿರಲು ನಿನ್ನ ಜನನಿಯಂದಳು " ಎಂದು ಆರಂಭಿಸುವನು ಮುಂದಕ್ಕೆ ಹೇಳುವುದು ಆವಶ್ಯಕವಾಗಿರಲಿಲ್ಲ, ಭರತನು "ಸಾಕು ಗೊತ್ತಾಯಿತು, ತನ್ನ ಆ ಹಾಳು ಶುಲ್ಕವನ್ನು ಜ್ಞಾಪಿಸಿದಳು, ತನ್ನ ಮಗ ರಾಜನಾಗಬೇಕು ಎಂದಳು, ಅದೇ ಧೈರ್ಯದಿಂದ ಅಣ್ಣನನ್ನು ಕುರಿತು "ಮಗು, ವನಕ್ಕೆ ತೆರಳಯ್ಯ!" ಎಂದಳು ಅಣ್ಣ ನಾರುಮಡಿಯುಟ್ಟದ್ದನ್ನು ನೋಡಿ ಮಹಾರಾಜನು ಮೃತನಾದನು—ಪ್ರಜೆಗಳು ನನ್ನನ್ನು ಛೀ ಎನ್ನುತ್ತಿದ್ದಾರೆ" ಎಂದು ಪೂರೈಸಿದನು ಅವನಿಗೆ ತನ್ನ ತಂದೆಯೂ ಅಣ್ಣನೂ ಇಲ್ಲದ ಅಯೋಧ್ಯೆ, ಆಯೋಧ್ಯೆಯಾಗಿ ಕಾಣದೆ ಕಾಡಿನಂತೆ ತೋರಿತು ಆದ್ದರಿಂದ ಹಹಾಗಿಂದ ಾಗೇ ರಾಮನನ್ನು ಹುಡುಕಿ

ಕೊಂಡು ಹೊರಡಲನುವಾಗಿ ಪ್ರತಿಮಾಪೀಠದಲ್ಲಿ ಮೂರ್ಛಿತನಾಗು ವನು

ಇಷ್ಟುಹೊತ್ತಿಗೆ ಮಹಾರಾಣಿಯರು ಪ್ರತಿಮಾಗೃಹವನ್ನು ನೋಡಲು ಅಲ್ಲಿಗೆ ಬರುವರು ಭರತನು ಅವರನ್ನು ಕಾಣುವ ರೀತಿಯಲ್ಲಿ ಅವನ ಉದ್ವೇಗವು ಚೆನ್ನಾಗಿ ವ್ಯಕ್ತವಾಗುತ್ತದೆ ತನ್ನನ್ನು ನೋಡಲು ಬಂದ ಮಾತೆಯರನ್ನು ಈಗ ಹೇಗೆ ಕಾಣಬೇಕು, ಹೇಗೆ ಅಭಿವಂದಿಸಬೇಕು, ಅವರ ಯೋಗಕ್ಷೇಮವನ್ನು ಹೇಗೆ ವಿಚಾರಿಸಬೇಕೆಂಬುದು ಅವನಿಗೆ ತಿಳಿಯದು ಏಕೆಂದರೆ, ಅವರು ಹಿಂದಿನಂತಿಲ್ಲ, ಪತಿಯನ್ನು ಕಳೆದುಕೊಂಡಿದ್ದಾರೆ ಆದ್ದರಿಂದ ಸುಮಂತ್ರನು ಅದನ್ನು ತಿಳಿಸುವನು ಮೊದಲು ಕೌಸಲ್ಯೆ, ಆಕೆಯನ್ನು ನೋಡಿ, "ಮಾತೆ, ನಿರಪರಾಧನಾದ ನಾನು ನಮಸ್ಕರಿಸುವೆನು" ಎಂದು ಅಭಿವಂದಿಸುವನು ಆಕೆ ತನ್ನ ಹೊಟ್ಟೆಯ ತುಂಬ ಸಂತಾಪವನ್ನು ತುಂಬಿಕೊಂಡಿದ್ದರೂ ಭರತನ ಸಂತಾಪವೇನೂ ಕಡಮೆಯದಲ್ಲವೆಂದು ಅರಿತು, "ವತ್ಸ, ಸಂತಾಪರಹಿತನಾಗು!" ಎಂದು ಆಶೀರ್ವದಿಸುವಳು, ಆದ್ದರಿಂದ ಆ ಮಾತು ಅವನ ಹೃದಯವನ್ನು ಭೇದಿಸುವುದು ಆಮೇಲೆ ಸುಮಿತ್ರೆ, ಕೊನೆಗೆ ಕೈಕೆ ಸುಮಂತ್ರನು ಕೈಕೆಯನ್ನು "ಈಕೆ ನಿನ್ನ ಜನನಿ" ಎನ್ನುವನು ಮಿಕ್ಕವರನ್ನು, ತನ್ನ ಚಿಕ್ಕಮ್ಮ ದೊಡ್ಡಮ್ಮಂದಿರನ್ನು, "ಮಾತೆ!" ಎಂದು ಕರೆದು ನಮಸ್ಕರಿಸಿದವನು ತನ್ನ ಹೆತ್ತ ತಾಯನ್ನು ಕಂಡ ಕೂಡಲೆ ಕೋಪದಿಂದೆದ್ದು "ಆಃ, ಪಾಪೆ, ಗಂಗಾಯಮುನೆಯರ ಮಧ್ಯೆ ಸೇರಿಕೊಂಡ ಕ್ಷುದ್ರ ತೊರೆಯಂತೆ ನನ್ನ ಮಾತೆಯರ ಮಧ್ಯೆ ನೀನು ಏಕೆ ಸೇರಿಕೊಂಡಿದ್ದೀಯೆ?"—ಎಂದು ಬೈಗುಳ ಮಳೆಗೆ ಮೊದಲುಮಾಡುವನು ಕೈಕೆಯು ಅಪ್ರತಿಭಳಾಗಿ "ನಾನೇನು ಮಾಡಿದೆ, ಮಗು!" ಎಂದು ಕೇಳುವಳು ಭರತನಿಗೆ ತಡೆಯಲಾಗಲಿಲ್ಲ. ಉರಿಯುವ ಎಣ್ಣೆಗೆ ನೀರು ಹಾಕಿದ ಹಾಗಾಯಿತು ಆದ್ದರಿಂದ "ಏನು ಮಾಡಿದೆಯಾ? ಒಂದೊಂದು ಮಾಡಿದೆಯೇನು? ನೀನು ಮಾಡಿಟ್ಟದ್ದನ್ನು ಹೇಳುತ್ತೇನೆ ಕೇಳು—ನನಗೆ ಅಪಕೀರ್ತಿ, ರಾಮನಿಗೆ ವನವಾಸ, ಮಹಾರಾಜನಿಗೆ ಮರಣ, ಅಯೋ

ಥ್ಯೆಗೆ ಪ್ರಲಾಪ, ಲಕ್ಷ್ಮಣನಿಗೆ ಮೃಗ ಸಹವಾಸ, ತಾಯಿಯರಿಗೆ ಅಳಲಿಕೆ, ಸೀತೆಗೆ ಬಳಲಿಕೆ, ನಿನಗೆ ಛಿ ಛಿ ಎಂಬ ದಾರುಣೋಕ್ತಿ—" ಎಂದು ಪಟಪಟನೆ, ಕೆನ್ನೆಯಮೇಲೆ ಹೊಡೆಯುವಂತೆ ಅಂದು ಬಿಡುವನು ಕೌಸಲ್ಯೆಯು ಮನನೊಂದು "ಮಗು, ನೀನು ಎಲ್ಲಾ ನಡೆವಳಿಯನ್ನೂ ಬಲ್ಲವನು, ಅದೇಕೆ ತಾಯಿಯನ್ನು ವಂದಿಸದಿರುವೆ?" ಎಂದು ಅವನನ್ನು ಸಂತಯಿಸಲು ಹೋಗುವಳು ಆದರೆ ಭರತನಿಗೆ ಸಮಾಧಾನವಾಗಲೊಲ್ಲದು "ತಾಯಿಯಂತೆ ತಾಯಿ! ನೀನೇ ನನ್ನ ತಾಯಿ, ತಗೋ ನಿನಗೇ ವಂದಿಸುತ್ತೇನೆ ಅವಳು ಮೊದಲು ತಾಯಿಯಾಗಿದ್ದಳು, ಈಗ ಅಲ್ಲ ದೋಷ ಕಂಡುಬಂದರೆ ಮಕ್ಕಳು ಮಕ್ಕಳಲ್ಲವೆಂದು ತೊರೆದುಬಿಡುತ್ತಾರೆಯೋ ಇಲ್ಲವೋ, ಹಾಗೆಯೇ ನಾನೂ ಪತಿದ್ರೋಹ ಮಾಡಿದ ತಾಯಿ ತಾಯಿಯಲ್ಲವೆಂದು ತೊರೆದುಬಿಡುತ್ತೇನೆ" ಎಂದನು "ಮಹಾರಾಜನ ಸತ್ಯವಚನವನ್ನು ರಕ್ಷಿಸುವುದಕ್ಕಾಗಿ ನಾನು ಹಾಗೆ ಕೇಳಿದೆ" ಎಂದು ಕೈಕೆಯು ಮೆಲ್ಲಗೆ ಬಾಯಿಹಾಕುವಳು ಭರತನಿಗೆ ಮತ್ತೂ ರೇಗುವುದು "ನಿನ್ನ ಮಗನಿಗೆ ರಾಜ್ಯವಾಗಬೇಕೆಂದು ಕೇಳಿದೆಯಲ್ಲಾ, ರಾಮ ನಿನಗೇನಾಗಬೇಕು? ಅವನು ನನ್ನ ತಂದೆಗೆ ಮಗನಲ್ಲವೇ? ಅವನಿಗೆ ಅಭಿಷೇಕವಾಗಬಾರದೇ? ಅವನ ತಮ್ಮಂದಿರು ಬೇಡವೆಂದರೇ? ಪ್ರಜೆಗಳು ಒಪ್ಪಲಿಲ್ಲವೇ? ಅವನು ಸಮಸ್ತ ಸಂಪತ್ತನ್ನೂ ವರ್ಜಿಸಿ ನಾರುಡಿಗೆಯುಟ್ಟು ಹೆಂಡತಿಯೊಡನೆ ಕಾಲ್ನಡೆಯಲ್ಲಿ ಕಾಡಿಗೆ ಹೋಗುವಂತೆ ಮಾಡಿದೆಯಲ್ಲಾ, ಇದೆಲ್ಲಾ ನಿನ್ನ ಮೊದಲಿನ ವರದಲ್ಲಿತ್ತೆ? ನಿನಗೆ ಅಪಯಶಸ್ಸಿನ ಮೇಲೆ ಆಸೆಯಿದ್ದರ ನಮ್ಮ ಹೆಸರನ್ನು ಏಕೆ ಇದರಲ್ಲಿ ತೊಡರಿಸಿದೆ? ರಾಜ್ಯವಾಳಬೇಕೆಂಬ ಆಸೆಯಿದ್ದಿದ್ದರೆ ಮಹಾರಾಜನು ರಾಜ್ಯವನ್ನು ಕೊಡುತ್ತಿರಲಿಲ್ಲವೇ? ಇಲ್ಲ, ರಾಜನ ತಾಯಿ ಎನ್ನಿಸಿಕೊಳ್ಳಬೇಕೆಂದಿದ್ದಿದ್ದರೆ, ರಾಮನು ನಿನ್ನ ಮಗನಲ್ಲವೇ? ರಾಜ್ಯಲೋಭದಿಂದ, ಮಹಾರಾಜನ ಜೀವವನ್ನೂ ಲೆಕ್ಕಿಸಲಿಲ್ಲ, ಮನೆಗೆ ಹಿರಿಯ ಮಗನಾದ ರಾಮನನ್ನು ವನಕ್ಕೆ ದೂಡಿದೆ ಸೀತೆ ನಾರುಡಿಗೆಯುಟ್ಟಿದ್ದನ್ನು ನೋಡಿ ನಿನ್ನ ಎದೆ ಸೀಳಿ ಹೋಗಲಿಲ್ಲವಲ್ಲ—ಏನು ವಜ್ರಕಠಿನವಾದ ಎದೆಯೋ!" ಎಂದು

ಮತ್ತೆ ಬೈಗುಳ ಸುರಿಮಳೆಗೆ ಪ್ರಾರಂಭಿಸುವನು ಈಗ ಸುಮಂತ್ರನು ಮುಂದೆ ಬಂದು "ಕುಮಾರ, ಈ ವಸಿಷ್ಠ ವಾಮದೇವರು ಅಭಿಷೇಕ ಸಾಮಗ್ರಿಗಳನ್ನು ಸಿದ್ಧಮಾಡಿಕೊಂಡು, 'ರಾಜನಿಲ್ಲದ ಪ್ರಜೆಗಳು ಪಾಲಕನಿಲ್ಲದ ಹಸುಗಳ ಹಾಗೆ ಇದ್ದಾರೆ' ಎಂದು ಬಿನ್ನಯಿಸುತ್ತಾರೆ" ಎಂದು ಅವನ ಮನಸ್ಸನ್ನು ಕೈಕೆಯಿಂದ ತಿರುಗಿಸಲು ನೋಡುವನು ಭರತನು, "ಪ್ರಜಗಳು ಅನಾಥರಾದರೆ ನನ್ನ ಬೆಂಬಳಿವಿಡಿದು ಬರಲಿ, (ನಾನೂ ಅನಾಥ! ನನಗೆ ಆದ ಗತಿ ಅವರಿಗೂ ಆಗುತ್ತದೆ)" ಎನ್ನುವನು ಭರತನನ್ನು ಹಿಡಿದು ನಿಲ್ಲಿಸಿ ಅವನಿಗೆ ಪಟ್ಟಾಭಿಷೇಕಮಾಡಬೇಕೆಂಬುದು ಸುಮಂತ್ರನ ಆಶಯ! ಆದ್ದರಿಂದ ಅದನ್ನು ಸ್ಪಷ್ಟವಾಗಿ ಹೇಳಬೇಕಾಯಿತು—"ಅಯೋಧ್ಯೆಗೆ ಬಂದು ಪಟ್ಟಾಭಿಷೇಕ ಮಾಡಿಕೊಳ್ಳದೆ ಎಲ್ಲಿಗೆ ಹೋಗುವೆ?" ಎಂದನು ಆ ಮಾತನ್ನು ಕೇಳುತ್ತಲೆ ಅವನಿಗೆ ಕಾದ ಕಬ್ಬಿಣವನ್ನು ಕಿವಿಯಲ್ಲಿ ಸುರಿದಂತಾಯಿತೆಂದು ತೋರುತ್ತದೆ ಆದ್ದರಿಂದ "ಪಟ್ಟಾಭಿಷೇಕವೆ? ಪಟ್ಟಾಭಿಷೇಕವನ್ನು ಇಲ್ಲಿ ಇವಳಿಗೆ (ಕೈಕೆಯನ್ನು ತೋರಿಸಿ) ಮಾಡಿ! ನನಗೆ ರಾಮಲಕ್ಷ್ಮಣರೆಲ್ಲಿದ್ದಾರೋ, ಅದೇ ಅಯೋಧ್ಯೆ ನಾನು ಅಲ್ಲಿಗೆ ಹೋಗುತ್ತೇನೆ" ಎಂದು, ಅಯೋಧ್ಯೆಯೊಳಕ್ಕೇ ಹೋಗದೆ, ಯಾರಮಾತನ್ನೂ ಕೇಳದೆ, ಹಾಗಿಂದ ಹಾಗೇ ದುಡುದುಡನೆ ಹೊರಟು ಹೋದನು ಈ ವರ್ತಮಾನವು ಊರ ತುಂಬ ಹರಡಿ, ಮನೆಯ ಆಳುಕಾಳುಗಳೂ ಕೈಕೆಯನ್ನು ಛಿ ಎನ್ನುವ ಹಾಗಾಯಿತು

ಪ್ರತಿಮಾ ನಾಟಕವು ಮೂರನೆಯ ಅಂಕದಲ್ಲಿ ಮುಗಿಲು ಮುಟ್ಟಿ ಇಲ್ಲಿಂದ ಇಳಿಯಲು ಆರಂಭವಾಗಿದೆ ಎಂದು ಹೇಳಬಹುದು ಮೊದಲನೆಯ ಅಂಕದಲ್ಲಿ ಪ್ರತಿಮಾಸ್ಥಾಪನೆಗೆ ಏರ್ಪಾಡು, ಎರಡನೆಯ ಅಂಕದಲ್ಲಿ ದಶರಥನು ಸತ್ತು "ಪ್ರತಿಮೆ"ಯ ಸ್ಥಾಪನೆ, ಮೂರನೆಯ ಅಂಕದಲ್ಲಿ ಆ ಪ್ರತಿಮಾಸಂದರ್ಶನದಿಂದ ಶೋಕರಸ ಪ್ರವಾಹವು ಹುಚ್ಚು ಹುಚ್ಚಾಗಿ ಹರಿದು ಅಯೋಧ್ಯೆಯನ್ನು ತೇಲಿಸಿಬಿಡುವುದು. ಇಲ್ಲಿಂದ ಮುಂದೆ ಆ ನೆರೆಯ ಹಾವಳಿಯಿಂದ ಚೇತರಿಸಿಕೊಂಡು ಎಲ್ಲವೂ ಸಮಾಧಾನಸ್ಥಿತಿಗೆ ಬರುವುದು ಮಾತ್ರ. ಆದ್ದರಿಂದ ನಾಲ್ಕ

ನೆಯ ಅಂಕದಲ್ಲಿ ತಪೋವನಕ್ಕೆ ಹೋಗಿ ರಾಮನನ್ನು ಕಂಡು ಅವನಿಂದ ಪಾದುಕೆಗಳನ್ನು ತರುವ ಭರತನು, ಹಿಂದಿನ ಅಂಕದ ಭರತನಲ್ಲ, ಅಲ್ಲಿದ್ದ ಅವನ ಕೋಪ ಶೋಕಗಳ ಆವೇಗವು ಇಲ್ಲಿ ಇಳಿದುಹೋಗಿ ಅವುಗಳ ಸ್ಥಾನದಲ್ಲಿ ದೈನ್ಯ ಪಶ್ಚಾತ್ತಾಪಗಳು ಬಂದಿವೆ. ತನ್ನ ತಾಯಿಯ ಪಾಪವನ್ನು ತಾನೇ ಮಾಡಿದಂತೆ ಅವನಿಗೆ ಮಹಾಸಂಕಟವಾಗಿದೆ, ಆದ್ದರಿಂದ “ ಇಕ್ಷ್ವಾಕು ಕುಲಕ್ಕೆ ಕಳಂಕಭೂತನಾದ ಭರತನು ದರ್ಶನವನ್ನು ಅಪೇಕ್ಷಿಸುವನೆಂದು ” ರಾಮಾಶ್ರಮದ ಬಾಗಿಲಲ್ಲಿ ತಿಳಿಸಲವೇಕ್ಷಿಸುತ್ತಾನೆ —ಕರುಣಾಹೀನ, ಪಾಮರ, ಕೃತಘ್ನ, ಸಾಹಸಿ, (ಆದರೆ) ಭಕ್ತ ಎಂದು ಹೇಳಿಕೊಳ್ಳುತ್ತಾನೆ ಈ ಅಂಕದಲ್ಲಿ ಗಮನಿಸಬೇಕಾದ ಅಂಶವೆಂದರೆ ರಾಮ ಲಕ್ಷ್ಮಣ ಭರತರ ಅಪೂರ್ವ ಸಾದೃಶ್ಯ, ರೂಪು, ಆಕಾರ, ಧ್ವನಿ, ಸ್ವರ ಎಲ್ಲದರಲ್ಲೂ ಇರುವ ಐಕ್ಯ ಇದು ಅವರವರನ್ನೇ ಮೋಸಗೊಳಿಸುವುದು ಲಕ್ಷ್ಮಣ ಸೀತೆಯರೂ ಭರತನನ್ನು ನೋಡಿದಾಗ ಅವನು ರಾಮನೆಂದುಕೊಳ್ಳುವರು, ಇದರಿಂದ ಅವರೆಲ್ಲರೂ, ಕಾಯದಲ್ಲಿ ಹೇಗೋ ವಾಙ್ಮನಗಳಲ್ಲಿಯೂ ಹಾಗೇ ಏಕರೂಪರೆಂದು ಊಹಿಸಿಕೊಳ್ಳಬೇಕು ರಾಮನು ಅರಣ್ಯಕ್ಕೆ ತೆರಳಿದ ಕಾಲದಲ್ಲಿ ಭರತನು ಅಯೋಧ್ಯೆಯಲ್ಲಿದ್ದರೆ ಖಂಡಿತವಾಗಿಯೂ ಲಕ್ಷ್ಮಣನಂತೆ ಅವನನ್ನು ಹಿಂಬಾಲಿಸುತ್ತಿದ್ದನು ಅದನ್ನು ಇಲ್ಲಿ ಕವಿಯು ಒಂದು ಸಣ್ಣ ಘಟನೆಯ ಮೂಲಕ ಸೂಚಿಸಿದ್ದಾನೆ. ದಶರಥರನ ಮರಣವೃತ್ತಾಂತವನ್ನು ಸುಮಂತ್ರನು ಜ್ಞಾಪಿಸಲು ರಾಮನಿಗೆ ದುಃಖವು ಉಕ್ಕಿಬರುವುದು ಸಮಾಧಾನಮಾಡಿಕೊಳ್ಳಲು, ಕುಡಿಯುವುದಕ್ಕೆ ನೀರು ಬೇಕೆನ್ನುವನು ಎಂದಿನಂತೆ ಲಕ್ಷ್ಮಣನು ಹೊರಡಲು, ಭರತನು ಅವನ ಕೈಯಿಂದ ಪಾತ್ರೆಯನ್ನು ಕಿತ್ತುಕೊಂಡು ತಾನು ತಂದುಕೊಡುವನು ಇದನ್ನು ನೋಡಿ ರಾಮನು ಭರತನ ಮನೋಭಾವವನ್ನು ಗ್ರಹಿಸಿ ಇದನ್ನು ಬೆಳೆಯಗೊಟ್ಟರೆ ಅವನೂ ಕಾಡಿನಲ್ಲಿ ನಿಂತುಬಿಟ್ಟಾನೆಂದು ಯೋಚಿಸಿ, ನಗುತ್ತ, ಸೀತೆಯನ್ನು ಕುರಿತು “ ಜಾನಕಿ, ಲಕ್ಷ್ಮಣನ ಸೇವಾಕಾರ್ಯವು ಸಡಿಲುತ್ತ ಬಂತು ” ಎನ್ನುವನು.

ಸೀತೆ—ಆರ್ಯಪುತ್ರ, ಈತನೂ ಸೇವೆಮಾಡಬೇಕಲ್ಲವೆ ?

ರಾಮ—ಲಕ್ಷ್ಮಣನು ಇಲ್ಲಿ ಇದ್ದುಕೊಂಡು ಸೇವಿಸಲಿ, ಭರತನು ಅಲ್ಲಿದ್ದುಕೊಂಡು ಸೇವಿಸಲಿ ಇದೇ ಯುಕ್ತವಾದದ್ದು

ಭರತನನ್ನು ಹೊರಡಿಸಿ ಕಳುಹಿಸಲು ಹಾಕಿದ ಈ ಪೀಠಿಕೆಯನ್ನು ಅವನು ಅರಿತು, ತಾನೂ ಕಾಡಿನಲ್ಲೇ ಅವರ ಜೊತೆಯಲ್ಲಿರುವೆನೆಂದೂ ರಾಜ್ಯ ನಡೆಯುವುದಕ್ಕೆ ಬೇಕಾದರೆ ರಾಮನ ಹೆಸರಿನಲ್ಲಿ ತಕ್ಕ ಏರ್ಪಾಡು ಮಾಡುವೆನೆಂದೂ ಬಿನ್ನಯಿಸುವನು ಆದರೆ ಕೈಕೆಯ ವರವೂ ತಂದೆಯ ವಾಕ್ಯವೂ ಇದರಿಂದ ನೆರವೇರುವುದಿಲ್ಲವಾಗಿ ರಾಮನು ಒಪ್ಪುವುದಿಲ್ಲ ಭರತನು ಮೊಂಡಾಟ ಮಾಡುವನು. ಕೊನೆಗೆ ರಾಮನು ತನ್ನ ಮೇಲೆ ಆಣೆ ಇಟ್ಟುಕೊಂಡು ಅವನನ್ನು ಹಿಂತಿರುಗಿ ಕೊಟ್ಟುಕಳುಹಿಸಬೇಕಾಯಿತು ಆದ್ದರಿಂದ ಭರತನು ರಾಮನ ಪಾದುಕೆಯನ್ನು ತೆಗೆದುಕೊಂಡು, ವನವಾಸ ಮುಗಿದಮೇಲೆ ರಾಜ್ಯವನ್ನು ಸ್ವೀಕರಿಸುವುದಾಗಿ ಅವನಿಂದ ಮಾತು ಪಡದು, ಅಯೋಧ್ಯಗೆ ಹೊರಡುವನು ಸೀತಗೆ ಭರತನಲ್ಲಿ, ಬಹುದಿನದ ಮೇಲೆ ಊರಿಗೆ ಬಂದ ಮಗನ ಮೇಲೆ ಹೇಗೋ ಹಾಗೆ, ತಾಯ್ತನದ ಅಂತಃಕರಣ, ರಾಜ್ಯಾಧಿಕಾರವನ್ನು ಕಿತ್ತುಕೊಂಡುಹೋಗುತ್ತಿರುವ ಭಾವ ಮೈದುನನೆಂಬ ಲೋಭ ಕೋಪ ಮಾತ್ಸರ್ಯಗಳಿಲ್ಲ "ಕುಮಾರನು ಈಗಲೇ ಪ್ರಯಾಣ ಮಾಡುವನೇ ?" ಎಂದು ರಾಮನನ್ನು ಕೇಳುವನು ತಮ್ಮನೆಂದರೆ ರಾಮನಿಗೆ ಅಂತಃಕರಣವಿಲ್ಲವೇ ? ಆದರೆ ಆ ಅಂತಃಕರಣಕ್ಕೆ ವಶನಾಗಿ, ರಾಜ್ಯವಾಳುವ ರಾಜನನ್ನು ನಿಲ್ಲಿಸಿಕೊಂಡರೆ ಅರಸನ ಜವಾಬ್ದಾರಿಯನ್ನು ಅವನು ಏನು ತಿಳಿದಂತಾಯಿತು ? ಆದ್ದರಿಂದ "ಸಾಕು ನಿನ್ನ ಅತಿಯಾದ ಮರುಕ, ಕುಮಾರನು ಈಗಲೇ ವಿಜಯಯಾತ್ರೆ ಮಾಡಲಿ !" ಎಂದು ಸೀತೆಯನ್ನು ಸುಮ್ಮನಾಗಿಸಿ, ತಮ್ಮನನ್ನು ಪ್ರಯಾಣಮಾಡಿಸುವನು ಅವನು ಕಣ್ಮರೆಯಾದಮೇಲೆ "ಅಯ್ಯೋ, ತಂದೆಯನ್ನು ಕಳೆದುಕೊಂಡು, ನೆಂಟರಿಷ್ಟರನ್ನೂ ಅಯೋಧ್ಯೆಯನ್ನೂ ಬಿಟ್ಟು, ಇಲ್ಲಿಗೆ ಬಂದರೆ ಭರತನನ್ನು ಹಿಂದಕ್ಕೆ ಅಟ್ಟಿಬಿಟ್ಟೆನಲ್ಲಾ! ಹುಡುಗ ಒಬ್ಬನೇ ರಾಜ್ಯಭಾರವನ್ನೆಲ್ಲಾ ಹೊರಬೇಕಾಯಿತಲ್ಲಾ!" ಎಂದು ವ್ಯಥೆಗೊಳ್ಳುವನು.

ಐದನೆಯ ಅಂಕದ ಮುಖ್ಯ ಸಂಗತಿ ಸೀತಾಪಹರಣ—ಕವಿ ಕಾವ್ಯದೃಷ್ಟಿಯಿಂದ ಸೀತಾ ಉದ್ಧರಣ "ಪ್ರತಿಮಾ ನಾಟಕ" ವನ್ನು ಬರೆಯಹೊರಟವನು ಈ ಗ್ರಂಥದ ಮೂರನೆಯ ಅಂಕದಲ್ಲಿಯೇ ತನ್ನ ಕಾವ್ಯವನ್ನು ಮುಗಿಸಬಹುದಾಗಿತ್ತೆಂದು ಹಿಂದೆ ಸೂಚಿಸಿದ್ದೇನೆ ಮುಂದಿನ ಅಂಕಗಳಲ್ಲಿ ರಾಮಾಯಣದ ಕಥೆ ಬೆಳೆದು ಶ್ರೀರಾಮ ಪಟ್ಟಾಭಿಷೇಕದಲ್ಲಿ ಮುಗಿಯುವುದಾದರೂ, ಅದಕ್ಕಿಂತಲೂ ಹೆಚ್ಚಾಗಿ, ಭರತ ಸೀತೆ ಕೈಕೆ ಇವರ ಗುಣ ಪರಿಚಯವಾಗುವುದು ಇವರು ಶ್ರೀಮದ್ರಾಮಾಯಣದ ಭರತಾದಿಗಳಲ್ಲ ಶ್ರೀಮದ್ರಾಮಾಯಣದಲ್ಲಿ ಭರತನು ಪಾದುಕೆಗಳನ್ನು ತೆಗೆದುಕೊಂಡು ಅಯೋಧ್ಯೆಗೆ ಹೊರಟು ಹೋದ ಮೇಲೆ ತೆಪ್ಪಗೆ ರಾಜ್ಯವಾಳಿಕೊಂಡಿದ್ದನೆಂಬ ಭಾವವುಂಟಾಗುತ್ತದೆ ಅವನು ಋಷಿವೇಷದಲ್ಲಿದ್ದರೂ, ವನವಾಸದ ಅವಧಿ ಕಳೆದ ಕೂಡಲೆ ರಾಮನನ್ನು ನಿರೀಕ್ಷಿಸುತ್ತ, ಅವನು ಬರದಿದ್ದರೆ ಅಗ್ನಿಪ್ರವೇಶ ಮಾಡಬೇಕೆಂದು ನಿಶ್ಚಯಿಸಿಕೊಂಡಿದ್ದನೆಂದು ವರ್ಣಿತವಾಗಿದ್ದರೂ, ಹದಿನಾಲ್ಕು ವರ್ಷ ಅವನಿಗೆ ರಾಮನ ಯೋಚನೆ ಇತ್ತೇ ಇಲ್ಲವೇ, ಅವನ ಯೋಗಕ್ಷೇಮವನ್ನು ವಿಚಾರಿಸಿದನೇ ಇಲ್ಲವೇ ಎಂಬುದು ಗೊತ್ತಾಗುವುದಿಲ್ಲ ಇಲ್ಲಿ ಭರತನ ಮನಸ್ಸು ನಿಲ್ಲುವುದಿಲ್ಲ, ಆದ್ದರಿಂದ ಕೆಲವು ಕಾಲವಾದ ಮೇಲೆ ಸುಮಂತ್ರನನ್ನು ಕಾಡಿಗೆ ಕಳುಹಿಸಿ ರಾಮ ವೃತ್ತಾಂತವನ್ನು ತರಿಸಿಕೊಳ್ಳುವನು ಅದೇನು ಶುಭವರ್ತಮಾನವಲ್ಲ, ಸೀತಾಪಹರಣ ವೃತ್ತಾಂತ, ಇದನ್ನು ಕೇಳಿ ಅಂಥ ಅನುರಾಗವುಳ್ಳ ತಮ್ಮನೂ ಕ್ಷತ್ರಿಯನೂ ಸುಮ್ಮನೆ ಇರುವುದು ಹೇಗೆ? ಮಹಾಸೈನ್ಯದೊಡನೆ ರಾಮನಿಗೆ ಸಹಾಯಕನಾಗಿ ರಾವಣನ ಮೇಲೆ ಯುದ್ಧಕ್ಕೆಂದು ಹೊರಡುವನು ಇದು ಆರನೆಯ ಅಂಕದ ವೃತ್ತಾಂತ ಐದನೆಯದರಲ್ಲಿ ಮಾಡಿರುವ ವಸ್ತು ವ್ಯತ್ಯಾಸದಿಂದ ಸೀತಾದೇವಿಯ ಗುಣವು ಪೂರ್ತಿಯಾಗಿ ಮಾರ್ಪಟ್ಟು ಹೋಗಿದೆ ರಾಮಾಯಣದ ಸೀತೆಯು ಸುವರ್ಣಮೃಗ ವೃತ್ತಾಂತದಲ್ಲಿ ಜಿಂಕೆಯ ವಿಚಾರವಾಗಿ ಅದಮ್ಯವಾದ ಚಾಪಲ್ಯವನ್ನೂ, ರಾಮನ ಮಾತಿನಲ್ಲಿ ಅಲಕ್ಷ್ಯವೊಂಡಾಟಗಳನ್ನೂ, ಲಕ್ಷ್ಮಣನ ನಡತೆಯಲ್ಲಿ ಅಸಹ್ಯವಾದ ನಿಷ್ಠುರತೆ

ಯನ್ನೂ ವ್ಯಕ್ತಪಡಿಸುತ್ತಾಳೆ ಹೇಳಿದ ಮಾತು ಕೇಳದೆ, ಸ್ವಂತ ಬುದ್ಧಿಯಿಲ್ಲದೆ, ಅಲ್ಪ ಸ್ವಲ್ಪ ವಿಷಯಗಳಿಗೆಲ್ಲಾ ಮುರಿತುಕೊಂಡು "ಹೊಳೆ ಬೀಳುತೀನಿ, ವಿಷ ತಗೋತೀನಿ" ಎಂದು ಮನೆಯವರನ್ನು ಬೆವರಿಸುತ್ತ, ಚಾಪಲ್ಯ ಚಂಡಿತನಗಳಿಂದ ಸಂಸಾರವನ್ನು ನರಕವಾಗಿ ಮಾಡುವ ಅವಿವೇಕಿ ಹೆಂಗಸಿನಂತೆ ವ್ಯವಹರಿಸುತ್ತಾಳೆ ರಾಮನಂಥ ಪತಿಯು ಗಂಡಾಂತರದಲ್ಲಿರುವನೆಂಬ ಗಾಬರಿಯಲ್ಲಿ ಎಂಥವಳಾದರೂ ಕಠಿನವಾಗಿ ಮಾತನಾಡಬಹುದೆನ್ನೋಣ, ಆದರೆ ಅಂಥ ನಿಷ್ಠುರವಾದ ಮಾತುಗಳೇ? ಲಕ್ಷ್ಮಣನಿಗೆ ಆ ಮಾತುಗಳನ್ನು ಕೇಳಿ ಕೋಪ ಬಂದು ಅನರ್ಥ ಸಂಭವಿಸದೆ ಇದ್ದದ್ದು ಆಶ್ಚರ್ಯ ರಾಮನು ಬೇಡವೆಂದದ್ದಕ್ಕೆ ಬಲವಂತಮಾಡಿ ಅವನನ್ನು ಓಡಿಸಿ, ಲಕ್ಷ್ಮಣನನ್ನು ಎದುರಿಗೆ ನಿಲ್ಲಲಾರ ದಂಥ ಮಾತನಾಡಿ ಕಳುಹಿಸಿ, ಸೀತೆಯು ರಾವಣನ ಕೈಗೆ ಸಿಕ್ಕುವಳು ಆದರೆ ಪ್ರತಿಮಾ ನಾಟಕದ ಈ ನಾಲ್ಕು ಅಂಕಗಳಲ್ಲಿ ರಾಮ ಲಕ್ಷ್ಮಣ ಭರತರೊಡನೆ ಆದರ್ಶಮಹಿಳೆಯಂತೆ ನಡೆದುಕೊಂಡ ಸೀತಾದೇವಿಯು ಇಲ್ಲಿ ಹೀಗೆ ವ್ಯವಹರಿಸುವುದೆಂದರೆ ಕವಿಗೆ ಉಚಿತವಾಗಿ ತೋರಲಿಲ್ಲ ವೆಂದು ಕಾಣುತ್ತದೆ ಆದ್ದರಿಂದ ಸುವರ್ಣಮೃಗ ವೃತ್ತಾಂತಕ್ಕೆ ವಿಚಿತ್ರ ವರ್ಣವನ್ನು ಕೊಟ್ಟುಬಿಟ್ಟಿದ್ದಾನೆ

ರಾಮನು ದಶರಥನ ಸಾಂವತ್ಸರಿಕ ಶ್ರಾದ್ಧದ ದಿವಸ ಏನು ಮಾಡಬೇಕೆಂದು ಚಿಂತಿಸುತ್ತಿರಲು (ಇದು ಕವಿ ಕಲ್ಪಿತ), ರಾವಣನು ಬ್ರಾಹ್ಮಣವೇಷದಿಂದ ಬರುವನು (ಇಲ್ಲಿ ರಾಮನನ್ನು ಕಂಡರೆ ರಾವಣ ನಿಗೆ ಇದ್ದ ಹದರಿಕೆಯನ್ನೂ, ರಾಮನಿಗಿಂತಲೂ ಸೀತೆಯ ಮೇಲೆ ಇದ್ದ ಗೌರವವನ್ನೂ ಕವಿ ಅಲ್ಲಲ್ಲೇ ಸೂಚಿಸಿದ್ದಾನೆ) ಬಂದಾಗ ಅವನಿಗೆ ಮುಂದೇನು ತಂತ್ರಮಾಡಬೇಕೆಂಬ ಯೋಚನೆಯಿದ್ದಂತೆ ತೋರುವುದಿಲ್ಲ ಯಾರೋ ಸದ್ಬ್ರಾಹ್ಮಣ ಬಂದನೆಂದು ಸೀತಾ ರಾಮರು ಅವನನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸುವರು ರಾವಣನಿಗೆ ಅವರನ್ನು ಹತ್ತಿರ ಸೇರಿಸುವುದಕ್ಕೆ ಹೆದರಿಕೆ ಒಂದುಸಲ ರಾಮ ಬೇಡವೆನ್ನುವನು, ಇನ್ನೊಂದು ಸಲ ಸೀತೆ ಬೇಡವೆನ್ನು ವನು, ಕೊನೆಗೆ—ಅತಿಥಿಸತ್ಕಾರ ಒಳ್ಳೆಯಮಾತಿನಲ್ಲಿಯೇ ಇದ್ದ,

ಅಷ್ಟೇ ಸಾಕು, ಎಂದು ಕುಳಿತು ಮಾತಿಗೆ ಆರಂಭಿಸುವನು, ಆ ಶಾಸ್ತ್ರ ಈ ಶಾಸ್ತ್ರಗಳ ಪರಿಚಯವಿದೆಯೆಂದು ಹೇಳಿಕೊಳ್ಳುತ್ತ ಶ್ರಾದ್ಧಕಲ್ಪದ ಮಾತನ್ನೆತ್ತುವನು ರಾಮನಿಗೆ ಕಿವಿ ನೆಟ್ಟಗಾಗುವುದು, ತಮ್ಮ ತಂದೆಯ ಶ್ರಾದ್ಧವನ್ನು ಉತ್ತಮವಾದ ರೀತಿಯಲ್ಲಿ ಮಾಡುವುದು ಹೇಗೆಂದು ಆವನನ್ನು ಕೇಳುವನು ಅವನು ಮಾತಿಗೆ ಕಟ್ಟುಬಿದ್ದು (ಪ್ರಾಯಶಃ ತಿಳಿದದ್ದು ತಿಳಿಯದೆ ಇದ್ದದ್ದು ಎಲ್ಲವನ್ನೂ ಬೆರಸಿ) ಒಂದೊಂದಾಗಿ ಹೇಳಿ 'ಕಾಂಚನ ಪಾರ್ಶ್ವಮೃಗ'ವೇ ಉತ್ತಮವೆಂದು ಹೇಳುವನು ರಾಮನು ಅದನ್ನೇ ಹಿಡಿದುಕೊಳ್ಳುವನು ರಾವಣನು ಎಲ್ಲೋ ಸುಳ್ಳುಹೇಳಿದ್ದನೆಂದು ಕಾಣುತ್ತದೆ, ಆದ್ದರಿಂದ ಅವನಿಗೆ ಅದು ಸಿಕ್ಕುವುದು ಅಸಾಧ್ಯವೆಂದು ವಾದಿಸಿದನು, ಅದು ಅಲ್ಲಿಗೆ ಬಹು ದೂರವಾದ ಹಿಮವತ್ಪರ್ವತದಲ್ಲಿದೆ ಎಂದನು, ಅದರ ಏಳನೆಯ ಶಿಖರದಲ್ಲಿದೆಯೆಂದನು, ಪ್ರಭಾವದಿಂದ ಸಂಪಾದಿಸತಕ್ಕದ್ದೆಂದನು, ಯಾವುದಕ್ಕೂ ರಾಮನು ಹಿಂದೆಗೆಯಲಿಲ್ಲ ಶಾಪಾದಪಿ ಶರಾದಪಿ ಅದನ್ನೇ ಸಂಪಾದಿಸತಕ್ಕದ್ದೆಂದು ನಿಶ್ಚಯಿಸಿ, ಸೀತೆಗೆ ಸಿದ್ಧವಾಗುವಂತೆ ಹೇಳಿ, ಹೊರಟೇಬಿಟ್ಟನು ತನ್ನ ಇಷ್ಟ ನೆರವೇರಲಿಲ್ಲವೆಂದು ರಾವಣನು ಮಾಯೆಯಿಂದ ಕಾಂಚನ ಮೃಗವನ್ನು ಸೃಷ್ಟಿಸಿ ರಾಮನ ಮುಂದೆ ಸುಳಿಸುವನು, ಹಿಮವಂತನೇ ಹೆದರಿ ಕಳುಹಿಸಿದನೆಂದು ಬೊಂಕುವನು ಅದನ್ನು ಹಿಡಿದುಕೊಂಡು ಬರಬೇಕೆಂದು ಲಕ್ಷ್ಮಣನಿಗೆ ಹೇಳೋಣವೆಂದರೆ, ಲಕ್ಷ್ಮಣನು ಆಶ್ರಮದಲ್ಲಿರಲಿಲ್ಲ, ತೀರ್ಥಯಾತ್ರೆಯಿಂದ ಬಂದ ಕುಲಪತಿಗಳನ್ನು ಇದಿರುಗೊಳ್ಳಲು ಹೋಗಿದ್ದನು ಆದ್ದರಿಂದ ರಾಮನೇ ಹೊರಡಬೇಕಾಯಿತು ಹೀಗೆ ರಾಮನೂ ಹೊರಟುಹೋಗಲು, ಅಸಹಾಯಳಾದ ಸೀತೆಯನ್ನು ರಾವಣನು ಹೊತ್ತುಕೊಂಡು ಹೋದನು

ಆರನೆಯ ಅಂಕದಲ್ಲಿ, ಹಿಂದೆ ಹೇಳಿದಂತೆ, ಭರತನು ಸೀತಾಪಹರಣ ವೃತ್ತಾಂತವನ್ನು ತಿಳಿದು ಸಂಕಟಪಡುತ್ತ ಮತ್ತೆ ಕೈಕೆಯನ್ನು ದೂಷಿಸಲು ಅವಳು ದಶರಥನಿಗೆ ಬಂದ ಶಾಪವೃತ್ತಾಂತವನ್ನು ತಿಳಿಸಿ ಎಲ್ಲಕ್ಕೂ ಭವಿತವ್ಯತೆಯೇ ಕಾರಣವೆಂದೂ, ತಾನೂ ನಿಮಿತ್ತಮಾತ್ರ

ಳೆಂದೂ, ಅನಿಷ್ಟಕ್ಕೆ ಗುರಿಯಾದಳೆಂದೂ ತಿಳಿಯ ಹೇಳುವಳು ಭರತನು ಸ್ವಲ್ಪಕ್ಕೆ ಒಪ್ಪುವುದಿಲ್ಲ ಅವಳನ್ನು ಖಂಡಿಸಿ ಖಂಡಿಸಿ ಪ್ರಶ್ನೆ ಮಾಡುವನು

ಭರತ— ಪುತ್ರಪ್ರವಾಸವೆಂಬುದು ರಾಮನಿಗೂ ನನಗೂ ಸಮಾನವಾಗಿರುವಾಗ ನನ್ನನ್ನು ಏಕೆ ಕಾಡಿಗೆ ಕಳುಹಿಸಬಾರದಾಗಿತ್ತು ?

ಕೈಕೆ—ಮಗು, ಮಾತುಲಗೃಹದಲ್ಲಿ ಇದ್ದ ನಿನಗೆ ಪ್ರವಾಸವು ಸ್ವತಸ್ಸಿದ್ಧವಾಗಿಯೇ ಉಂಟಾಯಿತು

ಭರತ— ಹಾಗಾದರೆ ಹದಿನಾಲ್ಕು ವರ್ಷವೆಂದು ಏಕೆ ಅಪೇಕ್ಷಿಸಿದೆ ?

ಕೈಕೆ— ಮಗು, ಹದಿನಾಲ್ಕು ದಿವಸಗಳೆಂದು ಹೇಳಲಪೇಕ್ಷೆಯುಳ್ಳ ನಾನು ವ್ಯಗ್ರವಾದ ಮನಸ್ಸುಳ್ಳವಳಾಗಿದ್ದುದ್ದರಿಂದ ಹದಿನಾಲ್ಕು ವರ್ಷಗಳೆಂದು ಹೇಳಿದೆ

ಭರತ— ನಿನಗೆ ವಿಚಾರಕ್ಷಮತೆಯುಂಟು, ಇರಲಿ, ಇದನ್ನು ಗುರುಜನವೂ ಬಲ್ಲುದೋ ?

ಸುಮಂತ್ರ— ಕುಮಾರ, ವಸಿಷ್ಠ ವಾಮದೇವಾದಿಗಳೂ ಬಲ್ಲರು, ಅವರಿಗೂ ಸಮ್ಮತ

ಈ 'ತ್ರೈಲೋಕ್ಯಸಾಕ್ಷಿಗಳ' ಪ್ರಮಾಣವನ್ನು ಕೊಟ್ಟಮೇಲೆ ಭರತನು ಸುಮ್ಮನಾದನು ಇಲ್ಲದಿದ್ದರೆ, "ಆಮೇಲೆ ಹದಿನಾಲ್ಕು ದಿನಗಳೆಂದು ಏಕೆ ತಿದ್ದಿಕೊಳ್ಳಲಿಲ್ಲ ?" ಎಂದು ಮುಂತಾಗಿ ಪ್ರಶ್ನಿಸುತ್ತಿದ್ದನೆಂದು ತೋರುತ್ತದೆ ಕೈಕೆ ನಿಜವಾಗಿ ಕೆಟ್ಟವಳೆ ? ಹಾಗಾದರೆ ಮತ್ತೆಲ್ಲಿಯೂ ಅವಳ ದುಷ್ಟತನವೇಕೆ ಕಂಡುಬರುವುದಿಲ್ಲ ? ಮಂಥರೆಯ ಪ್ರೇರಣೆಯಿಂದ ಕೆಟ್ಟವಳಾದಳೆಂದರೆ, ಅಷ್ಟು ದಿನದಿಂದ ಒಳ್ಳೆಯವಳಾಗಿದ್ದವಳು ಇಷ್ಟು ಬೇಗ ಕೆಟ್ಟವಳಾದಳೇ ? ಭರತನ ಮನಸ್ಸನ್ನೂ ರಾಮನ ಸ್ವಭಾವವನ್ನೂ ಅವಳು ಅರಿಯಳೇ ?—ಎಂದು ಮುಂತಾದ ಪ್ರಶ್ನೆಗಳು ರಾಮಾಯಣ ಪಾರಕರಿಗೆಲ್ಲಾ ಬರುತ್ತವೆ. ಈ ಆಶಂಕೆ ಅಧ್ಯಾತ್ಮರಾಮಾಯಣ ಕರ್ತರಿಗೂ ಬಂದು ಅವರು ಭವಿತವ್ಯತೆಯ

ಪಾದವನ್ನೇ ಎತ್ತಿಹಿಡಿದಿದ್ದಾರೆ * ಆಲ್ಲಿ ಕೈಕೆ ತಾನು ಆಗ ಆ ಮಾತನ್ನು ಏಕೆ ಆಡಿದೆ ಎಂಬುದು ಗೊತ್ತಾಗದೆ "ಏನೋಪ್ಪ, ಆಗಿನ ಕಾಲದಲ್ಲಿ ಸರಸ್ವತಿ (ಮಾತಿಗೆ ಅಧಿದೇವತೆ) ಬಾಯಲ್ಲಿ ಹಾಗೆ ಆಡಿಸಿಬಿಟ್ಟಳು" ಎನ್ನುತ್ತಾಳೆ ಅದಕ್ಕಿಂತ ಉತ್ತಮವಾದ, ಪೌರ್ವಾಪರ್ಯ ಸಮಂಜಸ ವಾದ, ಉತ್ತರವನ್ನು ಮತ್ತಾರೂ ಕೊಟ್ಟಂತಿಲ್ಲ

ಇಲ್ಲಿಂದ, ಕೈಕೆಯ ವಿಚಾರದಲ್ಲಿ, ಭರತನ ನಡೆವಳಿಯು ಬದ ಲಾಯಿಸಿ ಹೋಗುತ್ತದೆ ಈಗ ಬಾಯಿತುಂಬ ಅವಳನ್ನು "ಮಾತೆ" ಯೆಂದು ಕರೆದು ಅವಳ ಕ್ಷಮೆಯನ್ನು ಬೇಡಿ ನಮಸ್ಕಾರ ಮಾಡುವನು ಕೈಕೆಯೂ ಅವನ ನಡತೆಗೆ ಅನುಗುಣವಾದ ಪ್ರೇಮಪೂರ್ಣವಾದ ಮಾತನ್ನೇ ಆಡುವಳು—"ಮಗು, ತಾಯಿಯೆಂಬವಳು ಯಾವಳು ತಾನೇ ಮಗನ ಅಪರಾಧವನ್ನು ಕ್ಷಮಿಸಳು? ಏಳೇಳು, ಈ ವಿಷಯದಲ್ಲಿ ತಪ್ಪೇನು?" ಎಂದು ಸಮದಾಯಿಸುವಳು ಮುಂದೆ, ಭರತನು ಎಲ್ಲಕ್ಕೂ ಅವಳ ಅನುಜ್ಞೆಯನ್ನು ಬೇಡುವನು ಹಾಗೆ, ಅವಳ ಅಪ್ಪಣೆ ಯನ್ನು ಪಡೆದೇ ಸಕಲವಾದ ರಾಜಮಂಡಲಿಯೊಡನೆ ಅಪಾರವಾದ ಸೈನ್ಯವನ್ನು ತೆಗೆದುಕೊಂಡು ರಾಮನ ಸಹಾಯಕ್ಕೆಂದು ಲಂಕೆಯ ಕಡೆಗೆ ಹೊರಡುವನು

ಆದರೆ ಅದು ಅನಾವಶ್ಯಕ ಅಷ್ಟು ಹೊತ್ತಿಗೆ ಆಗಲೇ ಶ್ರೀರಾಮನು ಜಯಶೀಲನಾಗಿ, ಮೊದಲು ಇದ್ದ ಋಷ್ಯಾಶ್ರಮಕ್ಕೆ ಹಿಂತಿ ರುಗಿ ಬಂದಿರುತ್ತಾನೆ ಮೊದಲ ಅಂಕದ ಆದಿಯಲ್ಲಿರುವ ಸಂಭ್ರಮ ದಂತೆ ಇಲ್ಲಿಯೂ ಸಂಭ್ರಮ, ಆದರೆ ಇದರ ಸ್ವರೂಪ ಸನ್ನಿವೇಶಗಳೇ ಬೇರೆ: ಈಗ ಎಲ್ಲಾ ತಲೆಕೆಳಗಾಗಿದೆ, ಆಗ ಕಾರ್ಗತ್ತಲಿನ ಮುನ್ನಿನ ಸಂಧ್ಯಾಕಾಲವಾದರೆ ಈಗ ದಿವ್ಯವಾದ ಬೆಳಕಿನ ಮುನ್ನಿನ ಉಷಃಕಾಲ, ಇನ್ನೇನು ಸ್ವಲ್ಪ ಹೊತ್ತಿಗೆ ದಶರಥನನ್ನು ಗ್ರಾಸಮಾಡಿಕೊಳ್ಳಲು ಮೃತ್ಯು ದೇವತೆ ಕಾದು ಕುಳಿತಿರುವ ಅರಮನೆಗೆ ಬದಲಾಗಿ, ಕಷ್ಟಪರಂಪರೆ

---

* ಶ್ರೀಮದ್ರಾಮಾಯಣದಲ್ಲಿ ಇದಕ್ಕೆ ದೈವವೇ ಕಾರಣವೆಂದು ರಾಮನು ಸಮಾಧಾನಮಾಡುತ್ತಾನೆ

ಗಳನ್ನು ಕಳೆದುಕೊಂಡು ನಿಶ್ಚಿಂತನಾದ ಸೀತಾರಾಮನನ್ನೊಳಕೊಂಡ ಪವಿತ್ರ ಋಷ್ಯಾಶ್ರಮ "ತುರಿವದಿನೆಡೆಯಾಡುತಿರ್ಪ ಪಡಿಯರತಿ" ಯರಿಗೆ ಬದಲಾಗಿ, ಜನಕಸುತೆಯೆಂದು ಸಖಿಯೆಂದು ಸೊಸೆಯೆಂದು ಸೀತೆಯೆಂದು ತಮ್ಮ ತಮ್ಮ ವಯಸ್ಸಿಗನುಗುಣವಾಗಿ ಕರೆಯುತ್ತ ಸೀತೆಯ ಸುತ್ತಮುತ್ತ ಮುತ್ತಿಕೊಂಡು ಎಷ್ಟು ಹೊತ್ತಾದರೂ ಅವಳನ್ನು ಋಷ್ಯಾಶ್ರಮದಿಂದ ಹೊರಕ್ಕೆ ಬಿಡದಿರುವ ಸುಮಂಗಲಿಯರಾದ ಋಷಿಪತ್ನಿಯರು ಭರತನು ತನ್ನ ತಾಯಿಯರೊಡನೆಯೂ, ಸಕಲ ಪರಿವಾರದೊಡನೆಯೂ ಇಲ್ಲಿಗೆ ಬರುವನು, ಇನ್ನೂ ನಮಸ್ಕಾರ ಆಶೀರ್ವಾದಗಳು ಮುಗಿಯುತ್ತಿದ್ದಹಾಗೇ ರಾಜ್ಯಭಾರವನ್ನು ಅಣ್ಣನಿಗೆ ಒಪ್ಪಿಸಲೆಳಸುವನು ಆದರೆ ಕೈಕೆಯ ವರದಂತೆ ರಾಜ್ಯವು ಭರತನದು, ಆದ್ದರಿಂದ ರಾಮನು "ನಾನು ಹೇಗೆ ಅದನ್ನು ವಹಿಸಿಕೊಳ್ಳಲಿ!" ಎಂದುಬಿಡುವನು ಆಗ ಕೈಕೆ ಮುಂದೆ ಬಂದು "ಬಾ ಮಗು, ಅಭಿಷೇಕಕ್ಕೆ ಒಪ್ಪಿಕೋ" ಎಂದು ಕೇಳಿಕೊಳ್ಳುವಳು ಆಗ "ಮಾತೆಯ ಅಪ್ಪಣೆ"ಯೆಂದು ರಾಮನು ಅದನ್ನು ಶಿರಸಾವಹಿಸುವನು

ಇಲ್ಲಿಂದ ಮುಂದೆ ಒಂದು ಗಳಿಗೆಯೊಳಗಾಗಿ ನಾಲ್ಕಾರು ಸಲ ಕೈಕೆಯು ಈ ಉತ್ಸವವನ್ನು ನೋಡಿ ಸಂತೋಷಪಟ್ಟು, ರಾಮನನ್ನು ಪ್ರಜೆಗಳು ಹೊಗಳಿದರೆ ಅದು ತನ್ನ 'ಮಗನ' ಅಭ್ಯುದಯವೆಂದು ಆನಂದಿಸಿ, ತಾನು ಭರತನಲ್ಲಿ ನುಡಿದದ್ದು ನಿಜವೆಂದು ಯಥೇಚ್ಛವಾಗಿ ದೃಢಪಡಿಸುವಳು ಎಲ್ಲರೂ ಪುಷ್ಪಕವಿಮಾನದಲ್ಲಿ ಕುಳಿತು ಅಯೋಧ್ಯೆಗೆ ತೆರಳುವರು.

ಹೀಗೆ ಪ್ರತಿಮಾನಾಟಕದ ಕಥಾಭಾಗವು ರಾಮಾಯಣದ್ದೇ ಆದರೂ ಅದರ ವಸ್ತುಕಲ್ಪನೆ, ಸಂವಿಧಾನ ರಚನೆ, ಪಾತ್ರ ಪ್ರದರ್ಶನ, ರಸಪರಿಪೋಷಣಗಳೆಲ್ಲವೂ ಬೇರೆಯಾಗಿವೆ ಇವೆಲ್ಲದರ ಫಲವಾಗಿ ಪ್ರತಿಮಾನಾಟಕವು, ಕರುಣರಸಪ್ಲಾವಿತವಾದರೂ, ತನ್ನೊಳಗೆ ಒಂದು ಅಪೂರ್ವ ಪ್ರೇಮಸಂಸಾರವನ್ನು ಚಿತ್ರಿಸಿದೆ ಅಳುವ ಕಣ್ಣಿನಲ್ಲಿ, ಬೆಳಗುವ ಹೃದಯವು ಪ್ರತಿಫಲಿಸಿದೆ. ರಾಮನು ಪರಿಪಕ್ವಮತಿಯೂ ಉಪ

ಶಾಂತನೂ ಕುಟುಂಬದ ಜನರನ್ನು ಅವರವರ ಸ್ವಭಾವಕ್ಕೆ ತಕ್ಕಂತೆ ಹಿಡಿದು ತಿದ್ದಿ ನಡೆಸಬಲ್ಲ ಅನುಭವಸ್ಥನೂ ಆದ ಮನೆಯ ಯಜಮಾನ, ಸೀತೆಯು ಮೈದುನರನ್ನು ಮಕ್ಕಳಂತೆಯೂ, ಅತ್ತೆಯರನ್ನು ತಾಯಿಯಂತೆಯೂ ಆದರಿಸುತ್ತ ಗಂಡನಿಗ ಅನುಕೂಲಗಳಾಗಿದ್ದ ಸಹಧರ್ಮಿಣಿ—ಸುಖಕ್ಕಿಂತ ಹೆಚ್ಚಾಗಿ ಕಷ್ಟದಲ್ಲಿ ಸಹಧರ್ಮಿಣಿ, ಭರತ ಲಕ್ಷ್ಮಣರು ರಾಮನಿಗೆ ಎರಡು ತೋಳುಗಳಂತಿದ್ದ ಪ್ರಾಣಪ್ರಿಯರಾದ ಸೋದರರು (ಇದರಲ್ಲಿ ಶತ್ರುಘ್ನ ವೃತ್ತಾಂತ ಬರುವುದು ಎಲ್ಲೋ ಸ್ವಲ್ಪ) ಕೌಸಲ್ಯಾದಿಗಳು ಅಕ್ಕ ತಂಗಿಯರಂತೆ ಅನ್ಯೋನ್ಯವಾಗಿದ್ದುಕೊಂಡು ಮಕ್ಕಳ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದ ಹಿರಿಯರು ಈ ಕುಟುಂಬವು 'ಭಾಸನ ಪ್ರತಿಭಾ ಪ್ರಭಾವದಿಂದ ನಿಷ್ಕಂಟಕವೂ ನಿಷ್ಕಳಂಕವೂ ಆದ ಪ್ರೇಮಸಂಸಾರವಾಗಿ ಬೆಳಗುತ್ತಿದೆ ಇದನ್ನು ಭಾವಿಸಿದ ಕವಿಯ ಮನೋಧರ್ಮವು ಅತ್ಯಂತ ಮಧುರವಾದದ್ದು

ಭಾಸನ ಕಲಾ ಚಮತ್ಕಾರಗಳಲ್ಲಿ ಭವಿಷ್ಯದರ್ಥಸೂಚನೆಯು "ಸ್ವಪ್ನವಾಸವದತ್ತ" ದಂತೆ ಇಲ್ಲಿಯೂ ಕಂಡುಬರುತ್ತದೆ (ನಾರುಮಡಿಯ ವೃತ್ತಾಂತ, ಸೀತೆಯು ದಶರಥನ ಕ್ಷೇಮದಲ್ಲಿ ಸಂದೇಹಪಡುವುದು, ಸುಮಂತ್ರನು ತಂದ ರಥ ಕೃತಾಂತನಟ್ಟಿದ ರಥವೆಂದು ವರ್ಣಿಸುವುದು—ಇತ್ಯಾದಿ) ಕೆಲವು ಸುಂದರವಾದ ಉಪಮಾನಗಳಿವೆ—"ಸ್ಥಾಪನೆ" ಯಲ್ಲಿ ಸಂಭ್ರಮದಿಂದ ದುಡುಗುಟ್ಟಿಕೊಂಡು ಓಡಿಯಾಡುತ್ತಿರುವ ಪಡಿಯರತಿಯನ್ನು, ಬಿಳಿಯ ಮಳಲೊಟ್ಟಿನಲ್ಲಿ ಕಾಶಪುಷ್ಪಗಳ ನಡುವೆ ಓಡಿಯಾಡುವ ಹಂಸಕ್ಕೂ, ದೈತ್ಯನಾದ ರಾವಣನ ಕೈಯಲ್ಲಿ ಸಿಕ್ಕಿ ನುಲಿದಾಡುತ್ತಿರುವ ಸೀತೆಯನ್ನು ಅಲೆದಾಡುವ ಫಣಿರಮಣಿಗೂ, ರಾವಣನೊಡನೆ ಕಾದಿ ಮಡಿದ ಜಟಾಯುವನ್ನು "ಕರೀಂದ್ರಭಗ್ನ ವನಪಾದಪ" ಕ್ಕೂ ರಾಮ ಸೀತಾ ಲಕ್ಷ್ಮಣರನ್ನು ಸೂರ್ಯ ಸೂರ್ಯನ ಬೆಳಕು ಹಗಲುಗಳಿಗೂ ಹೋಲಿಸಿರುವುದನ್ನು ದೃಷ್ಟಾಂತವಾಗಿ ಹೇಳಿದರೆ ಸಾಕಾಗಿದೆ. ಈ ನಾಟಕದಲ್ಲಿ ಕವಿಯು ಹೆಚ್ಚು ಅಲಂಕಾರಗಳ ಗೋಜಿಗೆ ಹೋಗಿಲ್ಲ, ನಾಟಕಕ್ಕೆ ಇವು ಪ್ರಯತ್ನಪೂರ್ವಕವಾಗಿ ಬಂದರೆ ಅಸಹ್ಯವಾದ ಭಾರವಾಗುವುವು ಆದ್ದರಿಂದ ಅವನ ದೃಷ್ಟಿ

ಯೆಲ್ಲವೂ, ನ್ಯಾಯವಾಗಿ ಇರಬೇಕಾದಂತೆ, ವಸ್ತುಮಾತ್ರ ರಸಪರಿ ಪುಷ್ಟಿಯ ಮೇಲೆ ಇದೆ ವರ್ಣನೆಗಳೂ ವಿಶೇಷವಾಗಿಲ್ಲ ಇರುವವು ಶ್ರೇಷ್ಠವಾಗಿವೆ ಇವುಗಳಲ್ಲಿ ಎರಡನ್ನು ಮಾತ್ರ ಇಲ್ಲಿ ಕೊಟ್ಟಿದೆ—

ಭರತನು ರಾಮಾಶ್ರಮದ ಬಾಗಿಲಿನಲ್ಲಿ ಬಂದು ಕೂಗಲು ಅವನ ಧ್ವನಿಯನ್ನು ಲಕ್ಷ್ಮಣನು ಹೀಗೆ ವರ್ಣಿಸಿದ್ದಾನೆ —

ಘನಧೀರಂ ಸ್ಪಷ್ಟಮುದ್ಯದ್ವೃಷಬರವಪವೋಲ್ ಸ್ನಿಗ್ಧಮಾಧುರ್ಯಯುಕ್ತಂ
ಜನಿತೋತ್ಕಂಠಂ ಕಲಂ ಕಂಠದೊಳುರದೊಳಸಂರುದ್ಧ ಸಂಚಾರ ವೇಗಂ ।
ಅನುದಿನಂ ತಾಣಂಗಳೊಳ್ ಸೇರ್ದೆಸೆವುದರಿನನೇಕಾಕ್ಷರಾಕಾರಮಾಗು
ತ್ತನುರಾಗಂಗೊಂಡು ನಾಲ್ವರ್ಣಕಮುಭಯವನೀಯಲ್ಕೆಸಂದಂತ
ತೋಕರ್ಣಂ ||*

ಒಬ್ಬ ಮನುಷ್ಯನ ಧ್ವನಿಯಲ್ಲಿ ಅಡಗಿರುವ ನಾನಾ ಗುಣಗಳನ್ನು ಹೀಗೆ ವಿಭಜನೆಮಾಡಿ, ಅವೊಂದೊಂದನ್ನೂ ಪ್ರತಿಯೊಂದು ಸ್ಥಿತಿಯ ಲ್ಲಿಯೂ ಇಷ್ಟು ಸ್ಫುಟವಾಗಿ ವಿವರಿಸಿ ವ್ಯಕ್ತಪಡಿಸಿ ಒಂದು ದೊಡ್ಡ ವೃತ್ತದ ತುಂಬ ವರ್ಣಿಸಿರುವುದು ಪ್ರಾಯಶಃ ಮತ್ತಾವ ಕವಿಯಲ್ಲಿಯೂ ಕಂಡು ಬರಲಾರದು

ರಾಮನು ಸೀತೆಯನ್ನು ಹುಡುಕಿಕೊಂಡು ಬರುತ್ತ ಗಿಡಗಳ ಪಾತೆಗಳನ್ನು ನೋಡಿ ಸೀತೆಯು ಅಲ್ಲೇ ಎಲ್ಲೋ ಇರಬೇಕೆಂದು ಊಹಿ ಸುವನು ಈ ಪದ್ಯದಲ್ಲಿ ಒಂದೊಂದು ಗಿಡದ ಪಾತೆಗೂ ನೀರೆರೆದಿರು ವುದರಲ್ಲಿ ಪೌರ್ವಾಪರ್ಯವನ್ನೂ ಕಾಲಾನುಕ್ರಮವನ್ನೂ ಹೇಗೆ ತೋರಿಸಿ ದ್ದಾನೆ ನೋಡಿ —

ಅವನಿರುಹಾಲವಾಲದೆ ಜಲಂ ನೊರೆಗೂಡಿ ಸಮಂತು ಸುತ್ತುಗುಂ
ಸವನಿಸೆ ತೃಷ್ಣೆ ಸಾರ್ದು ವಿಹಗಂ ಜಲಮಂ ಶ್ರಮಮಿಲ್ಲದೀಂಟುಗುಂ ।
ವಿವರದೆ ತೀವೆ ನೀರ್ ನನೆದ ಕೀಟಕುಲಂ ಸ್ಥಳಕೈದುಗುಂ ದ್ರುಮಂ
ನವವಲಯಂಗಳಂ ತಳೆದುವಿಂತಡಿಯೊಳ್ ಜಳನಾಶ ರೇಖೆಯಿಂ || *

---

* ವೇ || ಸೀತಾರಾಮಶಾಸ್ತ್ರಿಗಳು ಮಾಡಿದ ಭಾಷಾಂತರ

ಇದರ ನಾಲ್ಕು ಪಾದಗಳಲ್ಲಿ ನಾಲ್ಕು ಪಾತೆಗಳ ವರ್ಣನೆಯಿದೆ. ಮೊದಲನೆಯದರಲ್ಲಿ ಇನ್ನೂ ಆಗತಾನೆ ನೀರು ಹಾಕಿದೆ, ಆದ್ದರಿಂದ ನೀರು ಇನ್ನೂ ನಿಂತಿಲ್ಲ, ಸುತ್ತುತ್ತಿದೆ, ನೊರೆ ಆರಿಲ್ಲ ಎರಡನೆಯ ದರಲ್ಲಿ, ನೀರು ಹಾಕಿ ಅದಕ್ಕಿಂತ ಸ್ವಲ್ಪ ಹೊತ್ತಾಗಿದೆ, ಆದ್ದರಿಂದ ನೀರು ನಿಂತಿದೆ, ತಿಳಿಯಾಗಿದೆ, ನೊರೆಯಿಲ್ಲ, ಆದ್ದರಿಂದ ಹಕ್ಕಿಯು ಬಂದು ಅಲ್ಲಿ ಕುಳಿತು ಅನಾಯಾಸವಾಗಿ ನೀರು ಕುಡಿಯುತ್ತಿದೆ (ಮೊದಲ ನೆಯ ಪಾತೆಯ ಹಾಗೆ ನೀರು ಇನ್ನೂ ಬೊಗ್ಗಡವಾಗಿ ಗರಗರನೆ ಸುತ್ತುತ್ತಿದ್ದರೆ ಹಕ್ಕಿಯು ಶಾಂತವಾಗಿ ಅಲ್ಲಿ ನೀರು ಕುಡಿಯುವುದಕ್ಕೆ ಕೂರುತ್ತಿರಲಿಲ್ಲ) ಮೂರನೆಯದರಲ್ಲಿ, ಇನ್ನೂ ಸ್ವಲ್ಪ ಹೊತ್ತಾಗಿದೆ, ಆದ್ದರಿಂದ ನೀರೆಲ್ಲಾ ಇಂಗಿಹೋಗಿ, ಗಿಡದ ಸುತ್ತ ಗೂಡುಮಾಡಿ ಕೊಂಡಿದ್ದ ಇರುವೆ ಗೊದ್ದ ಮುಂತಾದವುಗಳ ಗೂಡಿಗೆ ನುಗ್ಗಿ ಅವನ್ನು ಹೊರಡಿಸಿದೆ, ನಾಲ್ಕನೆಯದರಲ್ಲಿ, ಎಲ್ಲಕ್ಕಿಂತ ಮುಂಚೆ ಹಾಕಿದ್ದು, ಆದ್ದರಿಂದ ಅದರಲ್ಲಿ ನೀರು ಸ್ವಲ್ಪವೂ ಇಲ್ಲ ಗಿಡದ ಸುತ್ತ, ನೀರು ಎಷ್ಟು ಮಟ್ಟಕ್ಕೆ ಬಂದಿತ್ತು ಎಂದು ಸೂಚಿಸುವ ಗುರುತು ಮಾತ್ರ ಇದೆ.

ಇವುಗಳಲ್ಲಿ ಸ್ವಲ್ಪವೂ ಕೃತಕತ್ವವಿಲ್ಲ ಈ ಕಾವ್ಯವನ್ನು ಬರೆದಾಗ ಸಂಸ್ಕೃತ ಕವಿಗೆ ಇನ್ನೂ ಸ್ವಾತಂತ್ರ್ಯವಿತ್ತು, ಅವನ ಕೃತಿಯಲ್ಲಿ ಜೀವವಿತ್ತು, ಪ್ರತಿಭಾಸರಸ್ಸಿನಲ್ಲಿ ಕವಿಸಮಯವೂ ಚಮತ್ಕಾರ ಪ್ರೀತಿಯೂ ಅಂತರಗಂಗೆಯ ಗಿಡದಂತೆ ಬೆಳೆದು ರಸವನ್ನು ಮುಚ್ಚಿ ಬಿಟ್ಟಿರಲಿಲ್ಲ.

---

# ಪ ೦ ಚ ರಾ ತ್ರ

---

ರಾಮಾಯಣ ಕಥಾವಸ್ತುವನ್ನು ತೆಗೆದುಕೊಂಡು ನಾಟಕಗಳನ್ನು ಬರೆದಿರುವಂತೆಯೇ ಭಾಸನು ಭಾರತ ಕಥಾವಸ್ತುವನ್ನೂ ತೆಗೆದು ಕೊಂಡು ಬರೆದಿದ್ದಾನೆ ಭಾರತದಿಂದ ಕಾವ್ಯವಸ್ತುವನ್ನು ತೆಗೆದುಕೊಳ್ಳದ ಕವಿಯಾರು ? ಅದು ಕಾವ್ಯಸಾಮಗ್ರಿಗಳ ಖನಿ, ರಸಗಳ ಮಹಾರ್ಣವ, ಯಾರೇ ಆಗಲಿ, ಅದರಲ್ಲಿನ ಎಂಥ ಅಪ್ರಸಿದ್ಧ ಭಾಗವನ್ನೇ ತೆಗೆದು ಕೊಂಡು—ಮತ್ತೇನುಮಾಡುವುದಕ್ಕಾಗಲಿ ಆಗದಿರಲಿ—ವರ್ಣನೆಯನ್ನು ಕಿತ್ತುಹಾಕಿ ಸಂಭಾಷಣೆಗಳನ್ನು ಸಂಕುಚಿಸಿ ಬರೆದರೂ ಸಾಕು, ಅದೂ ಅನಾಯಾಸವಾಗಿ ಒಂದು ನಾಟಕವಾಗುತ್ತದೆ ಹೀಗಿರಲು ಅದನ್ನು ಮಹಾಕವಿಯು ಕೈಗೆ ತೆಗೆದುಕೊಂಡರೆ ಕೇಳಬೇಕೇ ?

ಪಂಚರಾತ್ರ, ಮಧ್ಯಮವ್ಯಾಯೋಗ, ದೂತವಾಕ್ಯ, ದೂತ ಘಟೋತ್ಕಚ, ಕರ್ಣಭಾರ, ಊರುಭಂಗ—ಇವು ಭಾಸವಿರ ಚಿತವಾದ ಭಾರತ ಕಥಾರೂಪಕಗಳು ಭಾರತ "ನಾಟಕ ಚಕ್ರ"ಕ್ಕೆ ಸೇರಿದವು ಇವಿಷ್ಟೇಯೋ ಇನ್ನೂ ಇವೆಯೋ ಗೊತ್ತಿಲ್ಲ ಈಗ ದೊರೆಯುವವು ಇವು ಇವುಗಳಿಂದಲೇ, ಒಂದು ರೀತಿ ಯಲ್ಲಿ "ಚಕ್ರ"ವು ಪೂರ್ಣವಾಗಿದೆಯೆಂದೂ ಹೇಳಬಹುದು ಏಕೆಂದರೆ, ಮಹಾಭಾರತವು ಕೌರವ ಪಾಂಡವ ಕ್ಷಾತ್ರಚರಿತ್ರೆ. ಅದು "ಪಂಚಮವೇದ"ವೂ ಹೌದು, ಆದರೆ ಅದು ತನ್ನ ಮೂಲರೂಪದಲ್ಲಿ ನೀತಿ ಭಕ್ತಿ ಜ್ಞಾನ ವೈರಾಗ್ಯ ಭೂಯಿಷ್ಠ ವಾಗಿರಲಿಲ್ಲವೆಂಬುದು ಹಲವು ವಿದ್ವಾಂಸರ ಅಭಿಪ್ರಾಯ, ಅದು ಹೇಗಾದರೂ ಇರಲಿ, ಕಾವ್ಯದೃಷ್ಟಿಯಿಂದ, ದೃಶ್ಯಕಾವ್ಯದ ದೃಷ್ಟಿ ಯಿಂದ, ಭಾರತದ ತಿರುಳು ಅದರ ಯುದ್ಧಪಂಚಕ—ಭೀಷ್ಮ ದ್ರೋಣರ, ಕರ್ಣದುರ್ಯೋಧನರ, ಭೀಮಾರ್ಜುನರ, ಅಭಿಮನ್ಯು

ಘಟೋತ್ಕಚರ ವೀರಕಾರ್ಯಗಳು, ವಿದುರನೀತಿ ಶುಕ್ರನೀತಿ ಭಗವದ್ಗೀತೆ ಅನುಗೀತೆ ಅಶ್ವಮೇಧ ಅನುಶಾಸನಗಳಲ್ಲ ಈ ಕ್ಷಾತ್ರ ಚರಿತ್ರೆಯು ಆರಂಭವಾಗುವುದು ದುಶ್ಯಾಸನನು ತುಂಬಿದ ಸಭೆಯಲ್ಲಿ ದ್ರೌಪದಿಯ ತುರುಬಿಗೆ ಕೈಹಾಕಿದಾಗ * ವಿಷವೃಕ್ಷವು ಆಗ ಕುಸುಮಿತವಾಯಿತು ಅದರ ಹಿಂದೆ ನಡೆದದ್ದೆಲ್ಲಾ ವ್ಯವಸಾಯ ಆದ್ದರಿಂದ ಆದಿಪರ್ವವನ್ನು ತೆಗೆದಿಡಬಹುದು ಭಾರತವು 'ಪ್ರತಿ ಪರ್ವ ರಸೋದಯ'ವೇ ಆದರೂ, ಆದಿಪರ್ವವು ಕಬ್ಬಿನ ಬುಡದ ಗಿಣ್ಣು ಸಭಾಪರ್ವದಲ್ಲಿ ನಡೆದ ದ್ರೌಪದೀಭಂಗವು ಕವಿಜನ ಪ್ರಿಯವಾದರೂ, ಅದನ್ನು ಭಾಸನು ತೆಗೆದುಕೊಂಡಂತಿಲ್ಲ ಅವನಿಗೆ ಕೃಷ್ಣನಲ್ಲಿ ಅತಿಶಯವಾದ ಭಕ್ತಿಯಿತ್ತು, ಈ ಭಕ್ತಿಯ ಪ್ರದರ್ಶನಕ್ಕೆ ಪಾಂಚಾಲೀ ಪ್ರಪಂಚದಲ್ಲಿ ಅವಕಾಶವಿದ್ದರೂ ಅವನ ಮನಸ್ಸು ಹಿಂಸೆ, ಕ್ರೌರ್ಯ, ಮಾನಭಂಗ, ದೌರ್ಜನ್ಯಾದಿಗಳನ್ನು ವಿಸ್ತರಿಸಲು ಹಿಂದೆಗೆಯುವಂತೆ ತೋರುತ್ತದೆ 'ದೂತವಾಕ್ಯ'ದಲ್ಲಿ ಬರುವ ಆ ಸಂಗತಿಯ ಚಿತ್ರದಿಂದಲೇ, ಅದರ ವಿವರಣೆಯಿಂದಲೇ, ಅವನು ತೃಪ್ತನಾಗಿರಬಹುದು ಅವನ ಸಾತ್ವಿಕ ಪ್ರತಿಭೆಯಲ್ಲಿ ಭಾವಿತರಾಗಿ ಬಂದ ಕ್ರೂರಿಗಳು ತಮ್ಮ ನೈಸರ್ಗಿಕವಾದ ಕ್ರೌರ್ಯವನ್ನು ತಗ್ಗಿಸಿಕೊಳ್ಳುವರು, ದುರ್ಜನರು ಸಜ್ಜನರಾಗುವರು, ಸಜ್ಜನರು ಸತ್ತಮರಾಗುವರು, ಕತ್ತಲೆಯು ಬೆಳಕಾಗುವುದು 'ಪ್ರತಿಮಾನಾಟಕ'ದ ಕೈಕೆ, 'ಪಂಚರಾತ್ರ'ದ ಕರ್ಣ, 'ಊರುಭಂಗ'ದ ದುರ್ಯೋಧನ ಇವರಿಂದ ಇದು ಸ್ಪಷ್ಟವಾಗುತ್ತದೆ

ಹೀಗೆ ನೋಡಿದರೆ, ಭಾಸನು ಮಹಾಭಾರತದ ಮುಖ್ಯಭಾಗಗಳಿಂದೆಲ್ಲಾ ಸಾರವತ್ತಾದ ಒಂದೊಂದು ಮಾದರಿಯನ್ನು ತೆಗೆದುಕೊಟ್ಟಿದ್ದಾನೆಂದು ಹೇಳಬಹುದು —ವನಪರ್ವದಿಂದ 'ಮಧ್ಯಮವ್ಯಾಯೋಗ' (ಇದರಲ್ಲಿ ಆದಿಪರ್ವದ ಜ್ಞಾಪಕವೂ ಬರುತ್ತದೆ), ವಿರಾಟಪರ್ವದಿಂದ "ಪಂಚರಾತ್ರ", ಉದ್ಯೋಗಪರ್ವದಿಂದ 'ದೂತ

---

* "ಇದುವೆ ಮಹಾಭಾರತಕ್ಕಾದಿಯಾಯ್ತು . . ."—ಪಂಪಭಾರತ, XII-೧೫೩

ವಾಕ್ಯ', ದ್ರೋಣಪರ್ವದಿಂದ 'ದೂತಘಟೋತ್ಕಚ', ಕರ್ಣಪರ್ವದಿಂದ 'ಕರ್ಣಭಾರ', ಶಲ್ಯಪರ್ವದಿಂದ 'ಊರುಭಂಗ' ಇವುಗಳಲ್ಲಿ ವಿರಾಟಪರ್ವದ ಕಥೆಯಾದ್ದರಿಂದ ಕವಿಯು 'ಪಂಚರಾತ್ರ'ವನ್ನು ಸಂಪ್ರದಾಯಾನುಸಾರವಾಗಿ ಮೊದಲು ತೆಗೆದುಕೊಂಡು ಬರೆದಿರಬಹುದು ಇದು ಅವನ ಭಾರತರೂಪಕಗಳೆಲ್ಲೆಲ್ಲಾ ವಿಸ್ತಾರವಾಗಿಯೂ ಸಾರವತ್ತಾಗಿಯೂ ಇದೆ—ಸ್ತ್ರೀಪಾತ್ರವೇ ಇಲ್ಲದ ಗಂಡು ನಾಟಕ !

'ಪ್ರತಿಮಾನಾಟಕ'ದಲ್ಲಿ ಆ ನಾಟಕದ ಹೆಸರಿನಿಂದಲೇ ಅದರ ಕಥೆಯನ್ನು ಊಹಿಸುವುದು ಹೇಗೆ ಅಸಾಧ್ಯವೋ ಹಾಗೆಯೇ 'ಪಂಚರಾತ್ರ'ದಲ್ಲಿಯೂ ಅದರ ಹೆಸರಿನಿಂದ ಒಳಗಿನ ಕಥೆಯನ್ನು ಊಹಿಸುವುದು ಅಸಾಧ್ಯ ಇದು ಕವಿಕಲ್ಪಿತ, ನಾಟಕದೊಳಗೆ ಅವನು ಪ್ರದರ್ಶಿಸಿರುವ ಸ್ವೋಪಜ್ಞತೆಗೂ ಕಲ್ಪನಾಶಕ್ತಿಗೂ ಮಾದರಿಯಾಗಿ ಕೊಟ್ಟಿರುವ ಮುಂಗಡ

ಪಾಂಡವರು ಕಾಡಿಗೆ ಹೋಗಿ ಹನ್ನೆರಡು ವರ್ಷದ ಮೇಲಾಗಿತ್ತು ಆಗ ಒಂದು ದಿನ ದುರ್ಯೋಧನನು ಭೀಷ್ಮದ್ರೋಣಾದಿ ಆಚಾರ್ಯರೊಡನೆಯೂ ಸಕಲ ರಾಜಮಂಡಲದೊಡನೆಯೂ ಕೂಡಿ, ಹಸ್ತಿನಾವತಿಯ ಹತ್ತಿರ ಗಂಗಾತೀರದಲ್ಲಿ, ಬಹು ವಿಜೃಂಭಣೆಯಿಂದ ಒಂದು ಯಾಗವನ್ನು ಮಾಡಿದನು ಯಾಗಾಂತದಲ್ಲಿ ಅವನು ದ್ರೋಣಾಚಾರ್ಯರಿಗೆ—ಧರ್ಮ, ಧನುಸ್ಸು ಈ ಎರಡರಲ್ಲಿಯೂ ಆಚಾರ್ಯರಾದ ದ್ರೋಣಾಚಾರ್ಯರಿಗೆ—ಆಚಾರ್ಯಪೂಜೆ ಮಾಡಿ ಅವರಿಗೆ ದಕ್ಷಿಣೆಯನ್ನು ಕೊಡಲು ಸಿದ್ಧನಾದನು ಆಚಾರ್ಯರು ತೃಪ್ತರು ಅವರಿಗೆ ಯಾವ ಧನಕನಕವಸ್ತುವಾಹನಗಳೂ ಬೇಕಾಗಿರಲಿಲ್ಲ. ಬೇಕಾಗಿದ್ದದ್ದು ಒಂದೇ, ಅದನ್ನು ದುರ್ಯೋಧನನು ಕೊಡುತ್ತಾನೋ ಇಲ್ಲವೋ ಎಂದು ಹಿಂದು ಮುಂದು ನೋಡಿದರು, ಆದರೆ ದುರ್ಯೋಧನನು "ಏಕೆ ಅನುಮಾನಿಸುತ್ತೀರಿ ? ಬೇಕಾದದ್ದನ್ನು ಕೇಳಿ, ಕೊಡುತ್ತೇನೆ; ಇಗೋ ನನ್ನ ಕೈಯಲ್ಲಿರುವ ಗದೆಯೊಂದು ನನ್ನದು, ಮಿಕ್ಕದ್ದೆಲ್ಲಾ ತಮ್ಮದೇ ಆಗಿದೆ" ಎಂದು ಧೈರ್ಯಹೇಳಿ

ಭನು ಆಚಾರ್ಯರಿಗೆ ಸಂತೋಷವಾಯಿತು ಆದರೆ (ಪಾಂಡವರ ಕಷ್ಟವು ಸ್ಮರಣೆಗೆ ಬಂದು) ಕಣ್ಣಿನಲ್ಲಿ ನೀರು ತುಂಬಿಕೊಂಡರು, ಗಳಗಳನೆ ನೀರು ಹರಿಯಿತು, ಅವರು ಕಣ್ಣು ತೊಳೆದುಕೊಳ್ಳಲೆಂದು ದುರ್ಯೋಧನನು ನೀರು ತರಿಸಿದನು ಆದರೆ ದ್ರೋಣರು "ಆಗಲಿ, ಆಗಲಿ, ಕಾರ್ಯ ಕೈಗೂಡಿದರೆ ಕಣ್ಣು ತೊಳೆದುಕೊಂಡಂತೆ ಆಯಿತು!" ಎಂದು ಸುಮ್ಮನಾದರು ದುರ್ಯೋಧನನು ಖೇದ ಗೊಂಡು ಕಣ್ಣಿಗಾಗಿ ತರಿಸಿದ ನೀರನ್ನು ಕೈಗೆ ಎರೆದು ತನ್ನ ಮಾತನ್ನು ಸಮರ್ಥಿಸಿದನು ಆಗ ಅವರಿಗೆ ಧೈರ್ಯವಾಗಿ, "ಹಾಗಾದರೆ, ಪಾಂಡವರಿಗೆ ರಾಜ್ಯಾರ್ಧವನ್ನು ಕೊಡು, ಇದೇ ನನ್ನ ಭಿಕ್ಷೆ ಇದೇ ನನಗೆ ದಕ್ಷಿಣೆ" ಎಂದರು. ಶಕುನಿ ಇದಕ್ಕೆ ಒಪ್ಪಲಿಲ್ಲ, ಇದು ಯಜ್ಞದ ನೆವದಲ್ಲಿ ಮಾಡಿದ "ಧರ್ಮವಂಚನೆ" ಎಂದು ದ್ರೋಣರನ್ನು ದೂರಿ ದನು ಅವರವರಿಗೆ ಕಲಹಕ್ಕೆ ಆರಂಭವಾಯಿತು ಕೊನೆಗೆ ಭೀಷ್ಮರ ಮಧ್ಯಸ್ಥಿಕೆಯಿಂದಲೂ, ದ್ರೋಣರ ವಿವೇಕದಿಂದಲೂ ಸಮಾಧಾನ ವಾಯಿತು ದುರ್ಯೋಧನನಿಗೆ ಉಭಯಸಂಕಟ ಒಂದು ಕಡೆ ದ್ರೋಣರಲ್ಲಿ ಭಕ್ತಿ, ಅವರಿಗೆ ತಾನು ಕೊಟ್ಟ ಮಾತಿನ ಮೇಲೆ ಗೌರವ ಆದರೆ ರಾಜ್ಯದಲ್ಲಿ ಲೋಭ, ಪಾಂಡವರಲ್ಲಿ ದ್ವೇಷ ಆದ್ದ ರಿಂದ ಅವನು ಶಕುನಿ ಕರ್ಣರೊಡನೆ ವಿಚಾರಮಾಡಿ, ಶತ್ರುಭರಿತ ವಾದ ಮತ್ತು ಕೆಲಸಕ್ಕೆ ಬಾರದ ಯಾವುದಾವುರೂ ಒಂದು ಪ್ರದೇಶ ವನ್ನು ಪಾಂಡವರಿಗೆ ಕೊಟ್ಟುಬಿಡೋಣವೆಂದು ಯೋಚಿಸಿದನು ಶಕುನಿಯು ಅದಕ್ಕೂ ಒಪ್ಪಲಿಲ್ಲ ಏಕೆಂದರೆ, ಅರ್ಜುನನು ಎಂಥ ಶತ್ರುಗಳನ್ನಾದರೂ ಜಯಿಸುವನು, ಯುಧಿಷ್ಠಿರನ ಧರ್ಮದಿಂದ ಎಂಥ ಊಷರ ಭೂಮಿಯಲ್ಲಿಯೂ ಬೆಳೆಯಾಗುವುದು. ಆದ್ದರಿಂದ ಅವನು ಬಾಯಿಹಾಕಿ "ಆಚಾರ್ಯ, ಇನ್ನು ಐದು ರಾತ್ರಿಯೊಳಗಾಗಿ ಪಾಂಡವರ ವೃತ್ತಾಂತವನ್ನು ತರುವುದಾದರೆ ದುರ್ಯೋಧನನು ಅರ್ಧ ರಾಜ್ಯವನ್ನು ಕೊಡುತ್ತಾನಂತೆ" ಎಂದನು. ದ್ರೋಣರು ಇದಕ್ಕೆ ಒಪ್ಪಲಿಲ್ಲ. "ಈಗ ಹನ್ನೆರಡು ವರ್ಷದಿಂದ ಗೊತ್ತಿಲ್ಲದವರ ವರ್ತಮಾನವನ್ನು ಇನ್ನು ಐದು ದಿನಗಳಲ್ಲಿ ತರುವುದಕ್ಕಾಗು

ತ್ತದೆಯೇ? 'ಕೊಡುವುದಿಲ್ಲ' ವೆಂದು ಸ್ಪಷ್ಟವಾಗಿ ಹೇಳಿಬಿಡಿ" ಎಂದರು.

ಈ ಮಾತು ನಡೆಯುತ್ತಿರುವಾಗ್ಗೆ ವಿರಾಟನಗರದಿಂದ ಒಬ್ಬ ದೂತನು ಬಂದು ತಮ್ಮ ಊರಿನಲ್ಲಿ ಕೀಚಕರೆಲ್ಲರನ್ನೂ ಒಬ್ಬನು ಶಸ್ತ್ರಾಸ್ತ್ರಗಳಿಲ್ಲದೆ ಬರಿಗೈಗಳಿಂದಲೇ ಕೊಂದುಬಿಟ್ಟನೆಂದೂ ಆದ್ದರಿಂದ ವಿರಾಟನು ಯಜ್ಞಕ್ಕೆ ಬರಲಾಗಲಿಲ್ಲವೆಂದೂ ತಿಳಿಸಿದನು ಇದನ್ನು ಕೇಳುತ್ತಿದ್ದ ಹಾಗೇ ಭೀಷ್ಮರು ಮೇಲಿನ "ಪಂಚರಾತ್ರ"ದ ಕರಾರಿಗೆ ಒಪ್ಪುವಂತೆ ದ್ರೋಣರನ್ನು ಪ್ರೇರಿಸಿದರು ಅಶಸ್ತ್ರನಾಗಿ ನೂರಾರು ಜನರನ್ನು ಕೊಲ್ಲಬೇಕಾದರೆ ಅದು ಭೀಮನ ಕಾರ್ಯವೇ ಎಂಬುದು ಅವರ ನಿಶ್ಚಯ ಕೊನೆಗೆ ವಿರಾಟನ ಮೇಲೆ ತಮಗೆ ಗೂಢ ವೈರ ವಿರುವುದೆಂದು ನೆವಹಾಕಿಕೊಂಡು, ಊರಿಗೆ ಹಿಂದಿರುಗಿ ಹೋಗಲು ಸಿದ್ಧವಾಗಿದ್ದ ರಥಗಳನ್ನು ವಿರಾಟನಗರಕ್ಕೆ ತಿರುಗಿಸಿ ಅಲ್ಲಿಯ ಗೋವು ಗಳನ್ನು ಹಿಡಿಸಿದನು

ವಿರಾಟನು ಶತ್ರುಗಳ ಮೇಲೆ ಯುದ್ಧಕ್ಕೆ ಹೊರಡಲು ರಥಕ್ಕೆ ಹೇಳಿಕಳುಹಿಸಿದನು ಕೌರವ ಮಹಾಸೈನ್ಯವನ್ನು ಜಯಿಸುತ್ತೇನೆಂದಲ್ಲ—ಭೀಷ್ಮರು ದಯಮಾಡಿಸಿದ್ದಾರಲ್ಲ, ಅವರನ್ನು ತನ್ನ ಬಾಣ ಪ್ರಯೋಗದಿಂದ ಸಂತೋಷಪಡಿಸೋಣ, ಎಂದು ಆದರೆ ರಥವನ್ನು ಉತ್ತರನು ಆಗಲೇ ತೆಗೆದುಕೊಂಡು ಹೋಗಿದ್ದನೆಂದೂ ಬೃಹನ್ನಳೆಯು ಸಾರಥಿಯಾಗಿದ್ದನೆಂದೂ ಸೂತನು ತಿಳಿಸಿದನು ಬೃಹನ್ನಳೆಯು ಸಾರಥಿಯಾಗಿದ್ದನೆಂದು ಕೇಳಿ ವಿರಾಟನಿಗೆ ಕಳವಳ, ಆದರೆ ಧರ್ಮ ರಾಯನಿಗೆ ಸಂತೋಷ, "ಬೃಹನ್ನಳೆಯು ಸಾರಥಿಯಾದರೆ ಯೋಚಿಸ ಬೇಕಾದದ್ದಿಲ್ಲ, ರಥವೇ ತನ್ನ ಚಕ್ರಧ್ವನಿಯಿಂದ ಶತ್ರುಗಳನ್ನು ಗೆಲ್ಲುತ್ತದೆ—ಬಾಣಗಳೂ ಬೇಕಿಲ್ಲ" ಎಂದು ರಾಜನಿಗೆ ಧೈರ್ಯ ಹೇಳಿದನು ಹೇಗಾದರಾಗಲಿ, ಇನ್ನೊಂದು ರಥವನ್ನು ತರಿಸಿ ಹೊರಡೋಣ ವೆನ್ನುವ ಹೊತ್ತಿಗೆ ಯುದ್ಧರಂಗದಿಂದ ಮೇಲಿಂದ ಮೇಲೆ ವರ್ತಮಾನ ಬಂತು.—ಉತ್ತರನ ರಥ ಶ್ಮಶಾನದ ಕಡೆಗೆ ತಿರುಗಿತು, ತಿರುಗಿ ಬಂದು ಭೂಮಿಯನ್ನೇ ನಡುಗಿಸುತ್ತ ಶತ್ರುಗಳನ್ನು ಅಂಬಿನ ಮಳೆಯಿಂದ ಮುಚ್ಚಿಬಿಟ್ಟಿತು ಈಗ ಬಿಲ್ಲಿನ ಧ್ವನಿಯನ್ನು ಕೇಳುತ್ತಿದ್ದ ಹಾಗೇ

ದ್ರೋಣರು, "ಅದೇಯೆ!" ಎಂದು ಗುರುತುಹಿಡಿದು ಹಿಂದಿರುಗಿದರು ಭೀಷ್ಮರು ನಮ್ಮ ತಮ್ಮ ರಥಪತಾಕೆಯಲ್ಲಿ ಬಾಣ ಬಿದ್ದದ್ದನ್ನು ನೋಡಿ, "ಸರಿ, ಸಾಕು!" ಎಂದು ಸುಮ್ಮನಾದರು ಕರ್ಣನು ನೊಂದನು ಮಿಕ್ಕ ರಾಜರು "ಇದೇನು!" ಎಂದು ಆಶ್ಚರ್ಯಪಟ್ಟರು ಉಳಿದವರು ಓಡಿದರು ಅಭಿಮನ್ಯು ಮಾತ್ರ ಹೋರಾಡುತ್ತಿದ್ದನು ಆಗ ಭೀಮನು ಅಭಿಮನ್ಯುವಿನ ರಥಕ್ಕೆ ಹಾರಿ ಅವನನ್ನು ಮಗುವಿನಂತೆ ಎತ್ತಿಕೊಂಡು ಅರಮನೆಗೆ ಬಂದನು ಅಲ್ಲಿ ಧರ್ಮರಾಯ ("ಭಗವಾನ್"), ಅರ್ಜುನ ("ಬೃಹನ್ನಲೆ") ಮುಂತಾದವರು ವಿರಾಟನೊಡನೆ ಯುದ್ಧದ ವಿಚಾರವನ್ನು ಮಾತನಾಡುತ್ತಿದ್ದರು ತನ್ನ ಅಡಿಗೆಯ ಪರಿಚಾರಕನು ಅಭಿಮನ್ಯುವನ್ನು ಸೆರೆಹಿಡಿದುಕೊಂಡು ಬಂದದ್ದನ್ನು ನೋಡಿ ರಾಜನಿಗೆ ಪರಮಸಂತೋಷ "ಭೀಷ್ಮಾದಿಗಳು ಸೋತರು, ಅಭಿಮನ್ಯು ಸೆರೆಸಿಕ್ಕಿದ ಇನ್ನೇನು ನನ್ನ ಮಗ ಉತ್ತರನು ಅಖಂಡ ಭೂಮಂಡಲವನ್ನೇ ಗೆದ್ದ ಹಾಗಾಯಿತು" ಎಂದು ಆನಂದ ಅಭಿಮನ್ಯುವಿಗೆ ತನ್ನನ್ನು ನೋಯಿಸದಂತೆ ಎತ್ತಿಕೊಂಡು ಬಂದ ಪರಾಕ್ರಮಶಾಲಿಯನ್ನೂ "ಉಮಾವೇಷದ ಹರನಂತೆ" ಇದ್ದ ಬೃಹನ್ನಲೆಯನ್ನೂ ನೋಡಿ, "ಇವರಾರು!" ಎಂದು ವಿಸ್ಮಯ ಭೀಮಸೇನನು ಉತ್ಸಾಹಭರದಿಂದ "ಅರ್ಜುನ!" ಎಂದನು ಅರ್ಜುನನು ಅಜ್ಞಾತವಾಸವನ್ನು ನೆನೆದು, ಮಾತು ತಿರುಗಿಸಲು ಪ್ರಯತ್ನಪಟ್ಟು, "ಹೌದು ಹೌದು! ಅರ್ಜುನನ ಮಗನೇ ಇವನು" ಎಂದು ಉತ್ತರ ಕೊಟ್ಟನು ಭೀಮನು ಆ ಸೂಚನೆಯನ್ನು ಗ್ರಹಿಸಿ ಅವನ ಕಿವಿಯಲ್ಲಿ "ಇವನನ್ನು ಹಿಡಿದುಕೊಂಡು ಬಂದದ್ದರಿಂದ ಒದಗಬಹುದಾದ ತೊಂದರೆಗಳೆಲ್ಲಾ ನನಗೆ ಗೊತ್ತಿವೆ ಆದರೆ ಮಗುವನ್ನು ಶತ್ರುಗಳ ಕೈಯಲ್ಲಿರಿಸಲು ಮನಸ್ಸು ಒಪ್ಪಲಿಲ್ಲ ಚಿಂತೆಯಿಂದ ಕೊರಗುತ್ತಿರುವ ದ್ರೌಪದಿಯು ಅವನನ್ನು ನೋಡಲಿ ಎಂದು ಕರೆತಂದು ಬಿಟ್ಟೆ!" ಎಂದು ಹೇಳಿದನು ಅವನೊಡನೆ ಎಂದಿಗೆ ಮಾತನಾಡಿಯೇನೋ, ಅವನ ಮಾತನ್ನು ಎಂದಿಗೆ ಕೇಳಿಯೇನೋ ಎಂದು ಅರ್ಜುನನಿಗೆ ಕುತೂಹಲ ಆದ್ದರಿಂದ ಭೀಮನು ಮಾತಿಗೆ ಆರಂಭಿಸಿ "ಅಭಿಮನ್ಯು!"

ಎಂದನು ಇಲ್ಲಿ ಭಾಸನು ಆ ವೀರಕಿಶೋರನ ಕೆಚ್ಚನ್ನು ಅವನು ಆಡುವ ಒಂದೆರಡು ಮಾತುಗಳಿಂದಲೇ ಚಿತ್ರಿಸಿರುವನು ಭೀಮನು ಇಷ್ಟು ನಿರ್ಲಕ್ಷ್ಯವಾಗಿ ತನ್ನ ಹೆಸರು ಹಿಡಿದು ಕರೆದದ್ದನ್ನು ಕೇಳಿ ರೇಗಿ ದುರುಗುಟ್ಟಿಕೊಂಡು ನೋಡುತ್ತ "ಅಭಿಮನ್ಯುವಂತೆ, ಅಭಿಮನ್ಯು!" ಎಂದು ಗದರಿಸಿಕೊಳ್ಳುವನು ಅರ್ಜುನನು ಹೆಸರು ಹಿಡಿದು ಕರೆಯಲು ಅವನಿಗೂ ಹೀಗೇ ಮರ್ಯಾದೆಯಾಯಿತು "ಈ ಕೀಳು ಜನರು ಕ್ಷತ್ರಿಯನನ್ನು ಹೆಸರುಹಿಡಿದು ಕೂಗುವುದೆಂದರೇನು!" ಎಂದು ಅಭಿಮನ್ಯುವಿಗೆ ಕೋಪ ಆದರೆ ಅರ್ಜುನನು ಭೀಮನಂತೆ ಅಲ್ಲಿಗೆ ಮಾತನ್ನು ನಿಲ್ಲಿಸಲಿಲ್ಲ—

ಬೃಹನ್ನಲೆ—ಅಭಿಮನ್ಯು, ನಿನ್ನ ತಾಯಿ ಸುಖವಾಗಿದ್ದಾಳೇನಯ್ಯ?

ಅಭಿಮನ್ಯು—ಏನೇನು? ನನ್ನ "ತಾಯಿ" ಯಂತೆ! ನೀನೇನು ಧರ್ಮರಾಯನೋ ಭೀಮಸೇನನೋ ಅರ್ಜುನನೋ, ಮೇಲೆ ಬಿದ್ದು ಬಂದು ತಂದೆಯ ಹಾಗೆ ಹೆಂಗಸರ ವೃತ್ತಾಂತವನ್ನು ಕೇಳುವುದಕ್ಕೆ!

ಬೃಹ—ಅಭಿಮನ್ಯು, ಕೃಷ್ಣನು ಕ್ಷೇಮವಾಗಿದ್ದಾನೆಯೇ?

ಅಭಿ—ಏನು? ಭಗವಂತನನ್ನು ಹೆಸರು ಹಿಡಿದು ಕರೆಯುತ್ತೀಯೋ? ಹುಂ, ಹುಂ, ನಿಮ್ಮ ಬಂಧುವು ಕ್ಷೇಮವಾಗಿದ್ದಾನೆ.

[ಭೀಮಾರ್ಜುನರು ಒಬ್ಬರನ್ನೊಬ್ಬರು ನೋಡುವರು]

ಅಭಿ—ಏನು? ನನ್ನನ್ನು ಅಲ್ಲಗಳೆದು ನಗುವಂತಿದೆ!

ಬೃಹ—ಏನೂ ಇಲ್ಲ ತಂದೆಯನ್ನು ನೋಡಿದರೆ ಅರ್ಜುನ, ಮಾವನನ್ನು ನೋಡಿದರೆ ಜನಾರ್ದನ, ನಿನ್ನನ್ನು ನೋಡಿದರೆ ಶಸ್ತ್ರಾಸ್ತ್ರನಿಪುಣನಾದ ತರುಣ ಆದ್ದರಿಂದ ಯುದ್ಧದಲ್ಲಿ ಸೋಲಾದದ್ದು ನ್ಯಾಯವೇ!—ಎಂದು.

ಅಭಿ—ಬಾಯಿಗೆ ಬಂದಂತೆ ಹರಟಬೇಡಿ ಆತ್ಮಸ್ತುತಿ ನಮ್ಮ ವಂಶಕ್ಕೆ ಬಂದದ್ದಲ್ಲ, ಆದರೂ, ಯುದ್ಧದಲ್ಲಿ ಸತ್ತವರು ಯಾರ ಬಾಣದಿಂದ ಸತ್ತರೆಂದು ಪರೀಕ್ಷೆಮಾಡಿ. ಅಲ್ಲಿ (ತನ್ನದು ಹೊರತು) ಮತ್ತೊಂದು ಹೆಸರು ಇರಲಾರದು.

ಬೃಹ—ಇಂಥವನು ಒಬ್ಬ ಪದಾತಿಗೆ ಹೇಗೆ ಸೆರೆಸಿಕ್ಕಿದ ?

ಅಭಿ—ಅವನು ನಿರಾಯುಧನಾಗಿ ನನ್ನ ಹತ್ತಿರಕ್ಕೆ ನಡೆದುಕೊಂಡು ಬಂದ ಆದ್ದರಿಂದ ಅವನ ಕೈಗೆ ಸಿಕ್ಕಿದೆ ಅರ್ಜುನನ ಮಗನಾಗಿ ನಿರಾಯುಧನನ್ನು ಹೊಡೆಯಲೆ ?

ವಿರಾಟನ ಮುಂದೆ ಬಂದಾಗ ಅಭಿಮನ್ಯುವು ಅವನನ್ನು "ಮಹಾರಾಜ"ನೆಂದು ಒಪ್ಪುವುದಿಲ್ಲ "ಯಾರಿಗೆ ಮಹಾರಾಜ ?" ಎನ್ನುವನು.

ವಿರಾಟ—ಇರಲಿ, ಇವನ ದರ್ಪವನ್ನು ಇಳಿಸುತ್ತೇನೆ ಯಾರು ಇವನನ್ನು ಹಿಡಿದು ತಂದವರು ?

ಭೀಮ—ಮಹಾರಾಜ, ನಾನು

ಅಭಿ—"ನಿರಾಯುಧನಾಗಿ" ಎಂದು ಹೇಳು !

ಭೀಮ—ನನ್ನ ಭುಜವೇ ನನ್ನ ಹುಟ್ಟು ಆಯುಧ ನಾನು ಯುದ್ಧ ಮಾಡುವುದು ಅದರಿಂದಲೇ ! ಕೈಲಾಗದವರಿಗೆ ಧನುಸ್ಸು

ಅಭಿ—ನೀನೇನು ನನ್ನ ನಡುತಂದೆಯೆ ? ಈ ಮಾತು ಅವನಿಗೆ ಸದೃಶವಾದದ್ದು

ಧರ್ಮ—ಯಾರಯ್ಯ, ನಡುತಂದೆಯೆಂದರೆ ?

ಅಭಿ—ಕೇಳಿ !—ಅಥವಾ, ಬ್ರಾಹ್ಮಣರೊಡನೆ ಮಾತೇನು ? ಮತ್ತಾರಾದರೂ ಉತ್ತರ ಕೊಡುವರು !

ಕೊನೆಗೆ ಅಭಿಮನ್ಯು ಬೇಸರಗೊಂಡು "ಸೆರೆ ಸಿಕ್ಕಿದವನೆಂದು ನನ್ನ ಕಾಲಿಗೆ ಸಂಕೋಲೆ ಹಾಕಿ ಕೂರಿಸಿ ಅದೇ ನನಗೆ ನೀವು ಮಾಡಬೇಕಾದ ಉಪಕಾರ ತೋಳಿನಿಂದ ಹಿಡಿದು ತಂದ ನನ್ನನ್ನು ಭೀಮನು ಬಂದು ತೋಳಿನಿಂದಲೇ ಬಿಡಿಸಿಕೊಂಡು ಹೋಗಲಿ !" ಎನ್ನುವನು

ಇಷ್ಟುಹೊತ್ತಿಗೆ ಉತ್ತರನು ಬಂದು ಅರ್ಜುನನ ಸಾಹಸವನ್ನು ವಿವರಿಸಿ ಬೃಹನ್ನಳೆಯೇ ಅರ್ಜುನನೆಂದು ಅವನ ಪರಿಚಯ ಮಾಡಿಕೊಡುವನು ಅರ್ಜುನನ ಗುರುತಾದಮೇಲೆ ಹಿಂದೆಯೇ ಪಾಂಡವರೆಲ್ಲರ ಗುರುತೂ ಆಗುವುದು. ಅಭಿಮನ್ಯುವು ಇದನ್ನು ತಿಳಿದು "ಅದಕ್ಕೋಸ್ಕರವೇ, ನಾನು ಹಳಿದರೂ ಇವರು ಕೋಪಿಸಿಕೊಳ್ಳಲಿಲ್ಲ;

ನಗುತ್ತ ನಗುತ್ತ ನನ್ನನ್ನು ಕೆಣಕಿದರು ಪಿತೃದರ್ಶನದಲ್ಲಿ ಪರಿಣಮಿಸಿದ್ದರಿಂದ ಗೋಗ್ರಹಣವು ಶುಭಕಾರಿಯೇ ಆಯಿತು !" ಎಂದು ಸಂತೋಷಗೊಳ್ಳುವನು ಹದಿಮೂರು ವರ್ಷಗಳಿಂದ ಬಿಟ್ಟಿದ್ದ ಮಗನನ್ನು ಅರ್ಜುನನ್ನು ಆಲಿಂಗಿಸಿಕೊಳ್ಳುವನು

ವಿರಾಟನು ಹೆಣ್ಣು ಹೆತ್ತವನು ಎಂತಿದ್ದರೂ ಅರ್ಜುನನು ಇದುವರೆಗೆ ಉತ್ತರೆಯೊಡನೆ ಇದ್ದನು ಎಂದು, ಉತ್ತರಗೋಗ್ರಹಣದಲ್ಲಿ ಉಂಟಾದ ವಿಜಯದ ನೆವ ಹಾಕಿಕೊಂಡು, ಅವನಿಗೆ ಉತ್ತರೆಯನ್ನು ಮದುವೆ ಮಾಡಿಕೊಡುವುದಾಗಿ ಹೇಳಿದನು ಆದರೆ ಅರ್ಜುನನು ಒಪ್ಪಲಿಲ್ಲ "ದೊರೆಯೇ, ನಾನು ಅಂತಃಪುರವನ್ನು ತಾಯಿಯಂತೆ ಭಾವಿಸಿಕೊಂಡಿರುತ್ತಿದ್ದೆ, ಆದ್ದರಿಂದ ಉತ್ತರೆಯನ್ನು ನಾನು ಪರಿಗ್ರಹಿಸಲಾರೆ, ನನ್ನ ಮಗನಿಗೆ ತಂದುಕೊಳ್ಳುತ್ತೇನೆ" ಎಂದನು ಲಗ್ನವು ಪ್ರಶಸ್ತವಾಗಿದ್ದದ್ದರಿಂದ ಅಂದೇ ಮದುವೆಯಾಗಿಬಿಡಬೇಕೆಂದು ನಿಷ್ಕರ್ಷೆಯಾಯಿತು

ಅತ್ತಲಾಗಿ ಕೌರವ ಶಿಬಿರಕ್ಕೆ ಅಭಿಮನ್ಯು ಸೆರೆಸಿಕ್ಕಿದ ವರ್ತಮಾನವು ಹೋಯಿತು ಒಬ್ಬ ಪದಾತಿಯು ಅವನನ್ನು ಎತ್ತಿಕೊಂಡು ಹೋದನೆಂದು ಕೇಳಿದ ಕ್ಷಣವೆ ಭೀಷ್ಮ ದ್ರೋಣರು ಅದು ಭೀಮನ ಕೆಲಸವೆಂದು ನಿಶ್ಚಯಿಸಿದರು ಆದರೆ, ದುರ್ಯೋಧನಾದಿಗಳಿಗೆ ಅದರಲ್ಲಿ ಸಂದೇಹ ಇದು ಆ ಮುದುಕರಿಗೆ ಇದ್ದ ಬರಿಯ ಪಾಂಡವ ಪಕ್ಷಪಾತವೆಂದು ಅವರ ಯೋಚನೆ ಅಷ್ಟು ಹೊತ್ತಿಗೆ ಸೂತನು ಭೀಷ್ಮರ ಪತಾಕೆಯಲ್ಲಿ ಸಿಕ್ಕಿಕೊಂಡಿದ್ದ ಒಂದು ಬಾಣವನ್ನು ತಂದು ಅದರಲ್ಲಿ ಹೆಸರು ಬರೆದಿದೆ ಎಂದು ಹೇಳಿ ಕೊಡುವನು. ಭೀಷ್ಮರು ಓದಿಕೊಂಡು, "ನನ್ನ ಕಣ್ಣು ಮಂಜು, ಸರಿಯಾಗಿ ಕಾಣುವುದಿಲ್ಲ ಇದನ್ನು ಓದು ಗಾಂಧಾರರಾಜ !" ಎಂದು ಶಕುನಿಯ ಕೈಗೆ ಕೊಡುವರು ಶಕುನಿಯು ಅರ್ಜುನನ ಹೆಸರನ್ನು ಓದಿ ನೋಡಿ ಆ ಬಾಣವನ್ನು ಬೀಸಾಡುವನು ಅದು ದ್ರೋಣರ ಕಾಲ ಮೇಲೆ ಬೀಳುವುದು ದ್ರೋಣರಿಗೆ ಅದನ್ನು ಕಂಡು ಸಂತೋಷ "ಅರ್ಜುನನು ಯುದ್ಧವಾರಂಭಿಸುವಾಗ ಭೀಷ್ಮರನ್ನು ವಂದಿಸಲು ಈ ಬಾಣ

ವನ್ನು ಮೇಲಕ್ಕೆ ಬಿಟ್ಟನು ಈಗ ಅದು ಬಂದು ನನಗೆ ನಮಸ್ಕರಿಸುತ್ತಿದೆ!" ಎನ್ನುತ್ತ ಅರ್ಜುನನನ್ನೇ ಕಂಡಂತೆ ಆ ಬಾಣವನ್ನು ಎದೆಗೆ ಅಪ್ಪಿಕೊಳ್ಳುವರು ಆಗಲೂ ಶಕುನಿಯು "ಅರ್ಜುನ ಎಂಬ ಹೆಸರುಳ್ಳ ಒಬ್ಬ ಯೋಧನಿರಬಾರದೇನು ?" ಎಂದು ಮುಂತಾಗಿ ಕುಹಕವನ್ನು ತೆಗೆಯುವನು ದುರ್ಯೋಧನನು ಸಂದೇಹವನ್ನು ಒಪ್ಪಿಕೊಂಡು ಧರ್ಮರಾಯನನ್ನು ನೋಡಿದ ಮೇಲೆ ಅರ್ಧರಾಜ್ಯವನ್ನು ಕೊಡುತ್ತೇನೆಂದು ತನ್ನ ಮಾತನ್ನು ಮುಂದಕ್ಕೆ ಹಾಕುವನು.

ಆಗ ವಿರಾಟನಗರದಿಂದ ಉತ್ತರಕುಮಾರನು ಬಂದು "ಧರ್ಮರಾಜನು ಹೇಳಿಕಳುಹಿಸಿದ್ದಾನೆ—'ಉತ್ತರೆ ಸೊಸೆಯಾಗಿ ದೊರೆತಿದ್ದಾಳೆ ಮದುವೆಗೆ ರಾಜಮಂಡಲವೆಲ್ಲ ಬರಬೇಕೆಂಬುದು ನಮ್ಮ ಕೋರಿಕೆ ಲಗ್ನವನ್ನು ಇಲ್ಲಿ ಬೆಳೆಸಬೇಕೋ ಅಲ್ಲಿ ಬೆಳೆಸಬೇಕೋ ಕೇಳಿಕೊಂಡು ಬಾ' ಎಂದು ಏನು ಹೇಳಲಿ?" ಎಂದು ಕೇಳಿದನು. ದುರ್ಯೋಧನನ ಕೊನೆಯ ಶಿಥಿಲ ಚಾಪಲ್ಯವೂ ತೀರಿತು ಆದ್ದರಿಂದ ಸತ್ಯಕ್ಕೆ ಬಿಟ್ಟುಬಿದ್ದು ಆಕ್ಷಣವೇ "ಇಗೋ, ಪಾಂಡವರಿಗೆ ಅರ್ಧರಾಜ್ಯವನ್ನು ಕೊಟ್ಟೆ" ಎಂದು ಗುರುಗಳ ಮುಂದೆ ನುಡಿದುಬಿಟ್ಟನು

ಇದು ಈ ನಾಟಕದ ಕಥಾಸಾರಾಂಶ ಈ ಸಂಗ್ರಹದಿಂದಲೇ ಮೂಲನಾಟಕವು ಎಷ್ಟು ರಸವತ್ತಾಗಿದೆ ಎಂದು ಸಹೃದಯರು ಊಹಿಸಬಹುದು ಅದು "ಪ್ರತಿಪಂಕ್ತಿ ರಸೋದಯಂ" ಅದನ್ನು ಬೇರೆ ರೂಪದಲ್ಲಿ, ಬೇರೆ ಯಾರೂ, ಬರೆಯುವುದೆಂದರೆ ಅಸಾಧ್ಯ. ಆ ಪ್ರಯತ್ನವು ಕಿಲುಬು ಕಟ್ಟಿದ ಥಾಲಿಯಲ್ಲಿ ಗಂಗೆಯನ್ನು ತಂದಂತೆಯೇ !

ಮಹಾಭಾರತವು ಒಂದು ಮಹಾರಣ್ಯ. ವಿರಾಟಪರ್ವವು ಅದರಲ್ಲಿ ಒಂದು ಮರ ಇದರ ಒಂದು ತುಂಡನ್ನು ತೆಗೆದುಕೊಂಡು ಭಾಸನು ಕೊಚ್ಚಿ, ಕೆತ್ತಿ, ನಯಮಾಡಿ, ಜೋಡಿಸಿ, ಮಧ್ಯೆ ಮಧ್ಯೆ ದಂತದ ಚಿತ್ರಗಳಿಂದ ಅಲಂಕರಿಸಿ, ಹದವಾದ ತಂತಿಗಳನ್ನು ಕಟ್ಟಿ ಶ್ರುತಿಮಾಡಿ ನುಡಿಸುತ್ತಿದ್ದಾನೆ ಹೀಗೆ, ಇದರಲ್ಲಿ, ಪಾಂಡವರು ವಿರಾಟನಗರಕ್ಕೆ ಬಂದು ಊರ ಹೊರಗಿನ ಶ್ಮಶಾನದಲ್ಲಿ ಆಯುಧ

ಗಳನ್ನು ಇಟ್ಟಿದ್ದು, ಒಬ್ಬೊಬ್ಬರಾಗಿ ವಿರಾಟನ ಅರಮನೆಗೆ ಬಂದು ಬೇರೆ ಬೇರೆ ಕಸಬುಗಳನ್ನು ಅವಲಂಬಿಸಿ ಅವನ ಊಳಿಗದಲ್ಲಿ ನಿಂತದ್ದು, ಸುಶರ್ಮ ವಿರಾಟರ ಯುದ್ಧ, ಮುಂತಾದ ಅನಾವಶ್ಯಕ ವಾದ ಸಂಗತಿಗಳಿಲ್ಲ ಇರುವವು ಸಂದರ್ಭ ಬಂದಾಗ ಸೂಚಿಸಲ್ಪಟ್ಟಿವೆ; ಕೀಚಕನಿಂದ ದ್ರೌಪದಿಗೆ ಉಂಟಾದ ಕಿರುಕುಳ ವಿರಾಟನು ಧರ್ಮರಾಯನನ್ನು ದಾಳದಿಂದ ಹೊಡೆದು ರಕ್ತ ಸುರಿದದ್ದು ಮುಂತಾದ ಅಹಿತವಾದ ಕಠಿಣ ಸಂಗತಿಗಳಿಲ್ಲ ಗೋಗ್ರಹಣವಾದದ್ದು ಸುಶರ್ಮದುರ್ಯೋಧನರ ದುರಭಿಸಂಧಿಯಿಂದಲ್ಲ, ಪಾಂಡವರ ಮಂಗಳಾ ಕಾಂಕ್ಷಿಗಳಾದ ಭೀಷ್ಮರ ಉಪಾಯದಿಂದ. ಭೀಷ್ಮದ್ರೋಣರು ಇಲ್ಲಿ ಯುದ್ಧ ಮಾಡಿ ಹಿಮ್ಮೆಟ್ಟುವುದಿಲ್ಲ, ತಮ್ಮ ಶಿಷ್ಯನ ಕೈಚಳಕವನ್ನು ಅರಿತು ಶಾಂತರಾಗಿ ಸಮಯ ನಿರೀಕ್ಷಣೆ ಮಾಡಿಕೊಂಡು ಸುಮ್ಮನಾಗುವರು. ಕಥೆಯು ಆರಂಭವಾಗುವುದು ದುರ್ಯೋಧನನು ಧರ್ಮಾಚಾರ್ಯರಿಗೆ ಕೊಟ್ಟ ದಕ್ಷಿಣೆಯ ಧಾರ್ಮಿಕ ವೃತ್ತಾಂತದಿಂದ, ಮುಗಿಯುವುದು ವೀರ ರಸದ ಗಟ್ಟಿಯಾದ ಅಭಿಮನ್ಯುವು ಪಾಂಡವರ ಕೈಗೆ ಸೆರೆಸಿಕ್ಕಿ ಶತ್ರುಶಿಬಿರ ದಲ್ಲಿ ಕನ್ಯಾರತ್ನವನ್ನು ಪಡೆಯುವ ವಿನೋದವೂ ಮಂಗಳವೂ ಆದ ವೈವಾಹಿಕ ವೃತ್ತಾಂತದಿಂದ ನಾಟಕದ ಉದ್ದಕ್ಕೂ, ಎಲ್ಲಿ ನೋಡಿದರೂ ಒಂದು ವಿಧವಾದ ಉದಾತ್ತತೆ, ಘನತೆ, ಗಾಂಭೀರ್ಯ. ಉತ್ತರನ ಜಂಬ ಹೇಡಿತನಗಳ ಗ್ರಾಮ್ಯವಾದ ನಿಕೃಷ್ಟ ಅಪಹಾಸ್ಯವಿಲ್ಲ. ಹಾಸ್ಯ ವಿರುವ ಕಡೆಯಲ್ಲಿ ಬಹು ಉಲ್ಲಾಸಕರವಾದ, ಪ್ರೇಮಸಂಬಂಧಿಯಾದ, ಯಾರಿಗೂ ಅಹಿತವಲ್ಲದ ಮೃದುಲಲಿತ ಹಾಸ್ಯ, ಶಾಂತವೂ ಘನವೂ ಆದ ವೀರ್ಯ, ಶೌರ್ಯ, ಔದಾರ್ಯ ನಿರ್ಮಲವೂ ಪವಿತ್ರವೂ ಆದ ಆದರ್ಶ ಧಾರ್ಮಿಕ ವಾತಾವರಣ ಈ ಶೋಧಿಸಿದ ಮಧುರಪಾಕದಲ್ಲಿ ಸರ್ಪ ಧ್ವಜನಾದ ದುರ್ಯೋಧನನೂ ಅಮೃತಮಯನಾಗುವನು.

ಭಾಸನ ಮನೋಧರ್ಮವೇ ಇಂತಹದೆಂದೂ, ವಿಧಿಸಂಕಲ್ಪದಲ್ಲಿ ನೆರವಾದ ಸೀತಾ ಕೈಕೆಯರಲ್ಲಿ ದೋಷವನ್ನು ಕಲ್ಪಿಸದೆ ಅವರ ಪಾತ್ರ ಗಳನ್ನು ಮಾರ್ಪಡಿಸಿದನೆಂದೂ ಹಿಂದಿನ ಅಧ್ಯಾಯದಲ್ಲಿ ವಿವರಿಸಿದೆ.

ಈ ವಿಚಾರದಲ್ಲಿ ರಾಮಾಯಣ ಕಥೆಗೆ " ಪ್ರತಿಮಾನಾಟಕ " ವು ಹೇಗೋ ಭಾರತ ಕಥೆಗೆ " ಪಂಚರಾತ್ರ " ವು ಹಾಗೆ ಇದರಲ್ಲಿ ಬರುವ ಪಾತ್ರಗಳೆಲ್ಲರೂ ಸ್ನೇಹಪರರು, ದುರ್ಯೋಧನ ಕರ್ಣರು ಪ್ರತಿಪಕ್ಷಿಗಳಾದರೂ ಕ್ರೂರಿಗಳಲ್ಲ, ಮತ್ಸರಿಗಳಲ್ಲ ಶಕುನಿಯು ಮತ್ಸರಿಯಾದರೂ, ಅವನ ಸೂಕ್ಷ್ಮವಾದ ಬುದ್ಧಿ ಕೃತ್ರಿಮ ಕುಶಲತೆಗಳನ್ನು ನೋಡಿ ಮನಸ್ಸು ಪಕ್ಷಪಾತಗೊಳ್ಳುತ್ತದೆ ಇಷ್ಟನ್ನೂ ಕವಿಯು ಹತ್ತು ಹನ್ನೆರಡು ಪಾತ್ರಗಳಲ್ಲಿ, ಬಹು ಸ್ವಲ್ಪ ಅವಕಾಶದಲ್ಲಿ, ಖಚಿತವಾಗಿ ಚಿತ್ರಿಸಿದ್ದಾನೆ ಎಂಥವನಾದರೂ ಒಂದೆರಡು ನಡೆನುಡಿಗಳಿಂದಲೇ ಚಿರಪರಿಚಿತರಾಗಿಬಿಡುತ್ತಾರೆ. ಎಲ್ಲರೂ ಭಾರತದಲ್ಲಿ ಕಂಡವರೇ, ಆದರೂ ಎಲ್ಲರೂ ಹೊಸಬರು ಇದು ಮೇಲಿನ ಕಥಾಸಾರಾಂಶದಿಂದಲೇ ಸ್ವಲ್ಪ ಮಟ್ಟಿಗೆ ತಿಳಿದುಬಂದಿದೆ. ಆದರೂ ಅಲ್ಲಿ ಸೇರಿಸುವುದಕ್ಕಾಗದೆ ಹೋದ ಕೆಲವು ಅಂಶಗಳನ್ನು ತಿಳಿಸದಿದ್ದರೆ ಗ್ರಂಥದ ಯೋಗ್ಯತೆಯು ಗೊತ್ತಾಗುವುದಿಲ್ಲ

ಮೊದಲು ಕುರುಕುಲ ಪಿತಾಮಹರಾದ ಭೀಷ್ಮರು —ಅವರು ಮಹಾಭಾರತದ ಅಗಾಧ ಸಂಸಾರವನ್ನು ನಡೆಸಬಲ್ಲ ಸಮರ್ಥರು, ಅಂಥ ಸಂಸಾರದ ಯಜಮಾನನಿಗೆ ಇರಬೇಕಾದ ತಾಳ್ಮೆ ದೂರಾಲೋಚನೆ ಗೌರವ ಘನತೆ ಗಾಂಭೀರ್ಯಗಳನ್ನುಳ್ಳವರು ಇಂಥಿಂಥವರ ಯೋಗ್ಯತೆ ಇಷ್ಟಿಷ್ಟೇಯೆ, ಹೀಗೆ ಹೀಗೆ ಕಾರ್ಯವು ಆರಂಭವಾದರೆ ಹೀಗೆ ಹೀಗೇ ಮುಗಿಯುತ್ತದೆಂದು ಅರಿತ ಸೂಕ್ಷ್ಮದರ್ಶಿಗಳು, ನಿಷ್ಕೃಷ್ಟಬುದ್ಧಿಗಳು ವೀರಕ್ಷತ್ರಿಯರಾದರೂ ಧರ್ಮಪ್ರಿಯರಾದ ಉಪಶಾಂತರು, ಆದ್ದರಿಂದ ದುರ್ಯೋಧನನು ಯಜ್ಞಾನಂತರ ಮೊದಲು ತಮಗೆ ನಮಸ್ಕಾರ ಮಾಡುವುದಕ್ಕೆ ಬರಲು ಆ ಗೌರವವನ್ನು ದ್ರೋಣಾಚಾರ್ಯರಿಗೆ ಕೊಡಿಸುವರು ದುರ್ಯೋಧನನು ಆಮೇಲೆ ತಮಗೆ ನಮಸ್ಕರಿಸಿದಾಗ " ಉಪಶಾಂತನಾಗು " ಎಂದು ಅವನನ್ನು ಹರಸುವರು, " ಮಿತ್ರಮುಖವುಳ್ಳ ಶತ್ರು " ವಾದ ಶಕುನಿಯ ಮಾತನ್ನು ಕೇಳಬೇಡವೆಂದು ಉಪದೇಶಿಸುವರು ದ್ರೋಣ ಶಕುನಿಗಳಿಗೆ ಕಲಹ ಹತ್ತಿಕೊಂಡಾಗ ಇಬ್ಬರಿಗೂ ತಕ್ಕಂತೆ ಬುದ್ಧಿ ಹೇಳಿ ಶಮನಗೊಳಿಸು

ವರು ಕೀಚಕನ ವಧೆಯನ್ನು ಕೇಳಿ ಅದು ಭೀಮನ ಕಾರ್ಯವೇ ಎಂದು ತಮ್ಮ ತೀಕ್ಷ್ಣ ಬುದ್ಧಿಯಿಂದ ಊಹಿಸಿ ದ್ರೋಣಾಚಾರ್ಯರನ್ನು "ಪಂಚ ರಾತ್ರ"ಕ್ಕೆ ಒಪ್ಪಿಸಿದ ಮೇಲೆ ದ್ರೋಣರು ಅತ್ಯುತ್ಸಾಹವನ್ನು ತೋರಿಸಲು, ಆವರು ಕವಟೆಯ ಎದುರಿಗೆ ಧೃತಿಮೀರಿ ಮಾತನಾಡಿದ್ದು ಅವಿವೇಕವಾಯಿತೆಂದುಕೊಂಡು, ವಿರಾಟನ ಮೇಲೆ ಯಜ್ಞಕ್ಕೆ ಬರದಿದ್ದ ನೆವಹಾಕಿ ತಮ್ಮ "ಅಪ್ರಕಾಶ ವೈರ"ವನ್ನು ಕಲ್ಪಿಸಿ ಅದಕ್ಕಾಗಿ ಗೋಗ್ರಹಣವನ್ನು ಸೂಚಿಸುವವರು ವೀರಕ್ಷತ್ರಿಯರಾದ್ದರಿಂದ ಪರಾಕ್ರಮ ಪಕ್ಷಪಾತಿಗಳು, "ಅಭಿಮನ್ಯುವನ್ನು ಹಿಡಿದುಕೊಂಡು ಹೋದ ಪದಾತಿಯನ್ನು ವರ್ಣಿಸು" ಎಂದಾಗ ಸೂತನು "ಏನು, ಅವನ ರೂಪವನ್ನು ವರ್ಣಿಸಲೇ? ಪರಾಕ್ರಮವನ್ನೇ?" ಎಂದು ಕೇಳುವನು, ಆಗ ಅವರು "ಹೆಂಗಸರ ವಿಚಾರವನ್ನು ಹೇಳಬೇಕಾದರೆ ರೂಪವನ್ನು ವರ್ಣಿಸಬೇಕು, ಪರಾಕ್ರಮವನ್ನು ವರ್ಣಿಸಿಯೇ ಗಂಡಸರ ಸಮಾಚಾರವನ್ನು ಹೇಳಬೇಕು ಆದ್ದರಿಂದ ಪರಾಕ್ರಮವನ್ನೇ ಹೇಳು" ಎನ್ನುವರು "ಅಭಿಮನ್ಯುವನ್ನು ಹಿಡಿದುಕೊಂಡು ಹೋದವನು ಭೀಮನೇ ಆಗಬೇಕೇ? ಬೇರೆ ಯಾರೂ ಬಲಶಾಲಿಗಳೇ ಇಲ್ಲವೇ? ಪ್ರಪಂಚದ ತುಂಬ ಕೇವಲ ಪಾಂಡವರು ಮಾತ್ರವೇ ನಿಮ್ಮ ಕಣ್ಣಿಗೆ ಕಾಣುವಂತಿದ" ಎಂದು ಶಕುನಿಯು ಅವರನ್ನು ಆಕ್ಷೇಪಿಸಲು, ಅವರು "ಕೇಳು ಗಾಂಧಾರರಾಜ! ಇದು ಸಕಾರಣವಾದ ಊಹೆ ನಾವೆಲ್ಲಾ ಬಿಲ್ಲು ಬಾಣ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ರಥದಲ್ಲಿ ಕುಳಿತು ಯುದ್ಧಕ್ಕೆ ಹೋಗುವವರು ತಮ್ಮ ದೋರ್ದಂಡ ಮಾತ್ರ ಸಹಾಯವಾಗಿ ಯುದ್ಧಕ್ಕೆ ಹೋಗತಕ್ಕವರು, ಭೀಮ, ಬಲರಾಮ ಇಬ್ಬರೇ!" ಎಂದು ಮೆಚ್ಚಿಗೆಯಿಂದ ಮಾತನಾಡುವರು

ದ್ರೋಣರು ಭೀಷ್ಮರ ಪಂಕ್ತಿಗೆ ಸೇರತಕ್ಕವರೇ; ಆದರೂ ಬ್ರಾಹ್ಮಣ—ಬ್ರಾಹ್ಮಣರ ಋಜುಬುದ್ಧಿಯುಳ್ಳವರು, ಮೃದುಹೃದಯವುಳ್ಳವರು, ಪಾಂಡವರ ಕಷ್ಟವನ್ನು ನೆನೆದು ಹೆಂಗರುಳಿನಿಂದ ಗಳಗಳನೆ ಅತ್ತುಬಿಟ್ಟವರು, ಹೀಗೆ, ಸಂತೋಷವಾದಾಗಲೂ ಅದನ್ನು ಸುಲಭವಾಗಿ ಪ್ರಕಾಶ ಮಾಡಿಬಿಡತಕ್ಕವರು. ಆಜೀವ ಬ್ರಹ್ಮಚರ್ಯ

ದಿಂದ ತನುಮನಗಳ ಮೇಲೆ ಅದ್ಭುತ ಸಂಯಮವನ್ನುಳ್ಳ ಭೀಷ್ಮರಂತೆ ಉಪಶಾಂತರಲ್ಲ ತೇಜಸ್ವಿಯಾದ ಬ್ರಾಹ್ಮಣ ಅನ್ಯಾಯ ಅವಮಾನ ಗಳನ್ನು ತಡೆಯತಕ್ಕವರಲ್ಲ ಶಕುನಿಯು 'ಧರ್ಮವಂಚನೆ'ಯಿಂದ ದುರ್ಯೋಧನನು ಮೋಸಹೋದನೆಂದು ಅವರನ್ನು ದೂರಲು ಅವರು ರೇಗಿ, "ನಿನ್ನ ಸೋದರರಿಗೆ ಪಿತ್ರಾರ್ಜಿತವಾದ ಸ್ವತ್ತನ್ನು ಹಂಚಿ ಕೊಡೆಂದರೆ ವಂಚನೆಯಾಯಿತೇ? ಯಾಚಿತನಾಗಿ ಕೊಡುವುದು ಒಳ್ಳೆ ಯದೋ, ಬಲಾತ್ಕಾರವಾಗಿ ಹೋಗಲಾಡಿಸಿಕೊಳ್ಳುವುದು ಒಳ್ಳೆ ಯದೋ?" ಎಂದು ಗದರಿಸುವರು 'ಬಲಾತ್ಕಾರ' ವೆಂಬ ಮಾತನ್ನು ಕೇಳಿ ದುರ್ಯೋಧನನು "ಅಂಥ ಬಲಾತ್ಕಾರ ಸಮರ್ಥರು ಹಿಂದೆ, ಸಭೆಯಲ್ಲಿ ಅವಮಾನವಾದಾಗ, ಏಕೆ ರೋಷವನ್ನು ತಡೆದು ಕೊಂಡರು?" ಎಂದು ಮೂದಲಿಸಲು, ಅವರು ಕ್ಷತ್ರಿಯೋಚಿತವಾದ ಚಿತ್ತವೃತ್ತಿಯಿಂದ "ಧರ್ಮವೆಂದು ಮೋಸಹೋದ ಆ ಜೂಜುಕೋರ ಧರ್ಮರಾಯನನ್ನೇ ಕೇಳಬೇಕು! ಆಗ ಭೀಮನು ಸಭಾಸ್ತಂಭವನ್ನು ನೋಡಲು, ಅವನನ್ನು ಧರ್ಮರಾಯನು ತಡೆದನು ಆದೊಂದು ಸಂದರ್ಭದಲ್ಲಿ ಭೀಮನನ್ನು ಬಿಟ್ಟಿದ್ದರೆ, ಶಕುನಿ ಈಗ ನಮ್ಮನ್ನು ಆಕ್ಷೇ ಪಿಸುವಂತಿರಲಿಲ್ಲ" ಎಂದು ಉತ್ತರ ಕೊಟ್ಟರು. ಆಗ ಭೀಷ್ಮರು, ಒಂದುಮಾಡುವುದಕ್ಕೆ ಹೋಗಿ ಒಂದಾಯಿತೆಂದು ಚಿಂತಿಸಿ "ಆಚಾರ್ಯ! ಕಾರ್ಯ ಮುಖ್ಯವೇ ಹೊರತು ಕಲಹವಲ್ಲ, ಆದ್ದರಿಂದ ಕಾರ್ಯವನ್ನು ನೋಡೋಣ!" ಎಂದು ಸಮಾಧಾನ ಮಾಡಲು ಅವರು "ಕೀಳು ಮಾತುಗಳಿಂದ ಆಗುವ ಕಾರ್ಯ ಬೇಡ, ಕಲಹವೇ ಆಗಲಿ!" ಎಂದು ಕೆರಳುವರು. ಕೊನೆಗೆ, ಶಿಷ್ಯವಾತ್ಸಲ್ಯದಿಂದ ತಮ್ಮ ಕೋಪ ವನ್ನು ತಾವೇ ಹಳಿದು ನುಂಗಿಕೊಂಡು, ದುರ್ಯೋಧನನೊಡನೆ ಒಳ್ಳೆಯ ಮಾತನಾಡಿ, ಶಕುನಿಯಂಥ ನೀಚನನ್ನೂ ಆಲಿಂಗಿಸಿಕೊಂಡು ತಗ್ಗಿ ನಡೆಯುವರು, ಅವನನ್ನು 'ವತ್ಸ! ಗಾಂಧಾರರಾಜ! ಎಂದು ಸಂಬೋಧಿಸುವರು, ಗುರುಶಿಷ್ಯ ವೃತ್ತಿಯನ್ನೂ ಭಕ್ತಿ ಪ್ರೀತಿ ಗಳನ್ನೂ ಚೆನ್ನಾಗಿ ಅರಿತವರು ಭೀಷ್ಮರಲ್ಲಿ ದೇವಾಂಶ ಸಂಭೂತ ರೆಂದು ಗೌರವ; ಆದರೂ ಸರಿಸಮಾನ ಸ್ನೇಹಿತರಂತೆ 'ಗಾಂಗೇಯ!'

ಎಂದು ವ್ಯವಹಾರ ನಾಟಕಾರಂಭದಲ್ಲಿಯೇ ಬರುವ ಅವರ ಮಾತನ್ನು ನೋಡಿ !

" ಧರ್ಮಮಾಲಂಬಮಾನೇನ ದುರ್ಯೋಧನೇನಾಹಮೇವಾನುಗೃಹೀತೋ ನಾಮ, ಕುತಃ,

ಅತೀತ್ಯ ಬಂಧೂನವಲಂಘ್ಯ ಮಿತ್ರಾಣ್ಯಾಚಾರ್ಯಮಾಗಚ್ಛತಿ ಶಿಷ್ಯದೋಷಃ ।
ಬಾಲಂಹ್ಯಪತ್ಯಂ ಗುರವೇ ಪ್ರದಾತುರ್ನೈವಾಪರಾಧೋಽಸ್ತಿ ಪಿತುರ್ನ ಮಾತುಃ ॥ "

ಹೀಗೆ ಭಾರವನ್ನು ಹೊತ್ತುಕೊಳ್ಳುವ ಗುರುಗಳು ಅಪೂರ್ವ! ಅಂತು, ಇವರಿಬ್ಬರೂ, " ಶಕುನಿ ಕರ್ಣ ಕೃಪಾಶ್ವತ್ಥಾಮರೆಂಬ ಮಡು ಮಕರಗಳಿಂದ ತುಂಬಿದ್ದ ದುರ್ಯೋಧನ ಮಹಾನದವನ್ನು ಹದ್ದಿನಲ್ಲಿಟ್ಟಿದ್ದ ದಡಗಳಂತಿದ್ದರು "* ಇವರು ಈ ನಾಟಕದಲ್ಲಿ ' ಶಿಕ್ಷೆ ರಕ್ಷೆಗೆ ಕರ್ತೃ' ಗಳಾದ ಆದರ ಅಧಿದೇವತೆಗಳು ನಾಟಕವು ಮೊದಲಾಗುವುದು ಅವರಿಂದ, ನಡೆಯುವುದು ಅವರಿಂದ, ಮುಗಿಯುವುದು ಅವರಿಂದ

ಈ ನಾಟಕದ ಪಾತ್ರಗಳಲ್ಲಿ, ಎರಡನೆಯ ಗುಂಪು ದುರ್ಯೋಧನ, ಕರ್ಣ, ಶಕುನಿ, ಇವರದು ಮಹಾಭಾರತಾದಿ ಗ್ರಂಥಗಳಲ್ಲಿ ಪರಿಚಿತವಾದ ಇವರ ದುಷ್ಪ್ರಕೃತಿಯು ಭೀಷ್ಮ ದ್ರೋಣರ ಧಾರ್ಮಿಕ ಪ್ರಭೆಯಲ್ಲಿ ಸ್ವಲ್ಪ ಸಾತ್ವಿಕತೆಯನ್ನು ತಾಳಿದೆ ದುರ್ಯೋಧನನು ಧರ್ಮಶ್ರದ್ಧೆಯುಳ್ಳವನು, ಯಜ್ಞ ಮಾಡಿದ ಮೇಲೆ ಅದರಿಂದ ಉಂಟಾದ ಶಾಂತಿ ಸುಖ ಸಂತೋಷಗಳಿಂದ ಪ್ರತ್ಯಕ್ಷ ಸ್ವರ್ಗ ಬಂದಂತೆ ತೃಪ್ತಿಗೊಂಡವನು, ಆಚಾರ್ಯರಿಗೆ " ನೀವು ಬೇಕಾದದ್ದನ್ನು ಕೇಳಿ, ಕೊಡುತ್ತೇನೆ " ಎಂದು ಧಾರಾಳವಾಗಿ ಹೇಳಿ, ಮಾತಿಗೆ ತಪ್ಪದೆ—ವ್ಯಾಸರಿಗೆ ಸಗ್ಗದವನು ಭಾಸನಿಗೆ ಸಗ್ಗಿ—ಸತ್ಯಕ್ಕೆ ಕಟ್ಟುಬಿದ್ದು, ಗುರುಗೌರವದಿಂದ ಪಾಂಡವರಿಗೆ ಅರ್ಧರಾಜ್ಯವನ್ನು ಕೊಟ್ಟವನು. ಆದರೂ ಕಪಟಿ, ಭೀಷ್ಮ ದ್ರೋಣರಿಗಿಂತ ತನ್ನ ಸ್ನೇಹಿತರಾದ ಕರ್ಣ ಶಕುನಿಗಳಲ್ಲಿ ಅವನಿಗೆ ಹೆಚ್ಚು ವಿಶ್ವಾಸ. ಸಾಧ್ಯವಾದರೆ

---

* " ಊರುಭಂಗ "— ಮಂಗಳ ಶ್ಲೋಕ.

ಮಾತನ್ನು ಉಳಿಸಿಕೊಂಡು ಪಾಂಡವರಿಗೆ ರಾಜ್ಯಕೊಟ್ಟು ಶಾಸ್ತ್ರ ಮಾಡೋಣವೆಂದು "ಯಾವುದಾದರೂ ಒಂದು ಶತ್ರುಪೂರ್ಣವಾದ ಊಷರ ಪ್ರದೇಶವನ್ನು ಯೋಚಿಸು" ಎಂದು ಶಕುನಿಯನ್ನು ಕೇಳಿದವನು, ಶಕುನಿಯು ಕಲ್ಪಿಸಿದ "ಪಂಚರಾತ್ರದ" ಕುತಂತ್ರಕ್ಕೆ ಒಪ್ಪಿದವನು ಇತರ ಗ್ರಂಥಗಳಲ್ಲಿ ದುರ್ಯೋಧನನಿಗೆ ಕರ್ಣನಲ್ಲಿದ್ದ ಮೈತ್ರಿಯೂ ಅಭಿಮನ್ಯುವಿನಲ್ಲಿದ್ದ ಗೌರವವೂ ಪ್ರಸಿದ್ಧವಾಗಿವೆ ಇಲ್ಲಿ, ಕರ್ಣನು ಮಿತ್ರನಾದರೂ ಅವನ ಮೈತ್ರಿಗೆ ಕವಿಯು ಹೆಚ್ಚು ಗಮನ ಕೊಟ್ಟಿಲ್ಲ ಅಭಿಮನ್ಯುವಿನ ಮೇಲೆ ಪ್ರೀತಿಯನ್ನು ತೋರಿಸುವ ಒಂದು ಸಂದರ್ಭ ಮಾತ್ರ ಬಂದಿದೆ ಅವನು ಸೆರೆಸಿಕ್ಕಿದನೆಂದು ಕೇಳಿದಾಗ ದುರ್ಯೋಧನನು ಆಡುವ ಮಾತು ಇದು —

> "ಯಾರು ಅಭಿಮನ್ಯುವನ್ನು ಹಿಡಿದುಕೊಂಡು ಹೋದವರು? ನಾನೇ ಹೋಗಿ ಬಿಡಿಸಿಕೊಂಡು ಬರುತ್ತೇನೆ! ಏಕೆಂದರೆ, ದಾಯಾದ ವೈರವಿರುವುದು ನನಗೂ ಅವನ ತಂದೆಗಳಿಗೂ ಆದ್ದರಿಂದ ನನ್ನ ಮೇಲೆ ಅಪವಾದ ಬಂದೀತು! ಮತ್ತು, ಅವನನ್ನು ನಾನು ಪಾಂಡವರಿಗಿಂತ ಹೆಚ್ಚಾಗಿ ನನ್ನ ಮಗನೆಂದು ಭಾವಿಸುತ್ತೇನೆ ಕುಲಕ್ಕೆ ವಿರೋಧವಿದ್ದರೆ ಹುಡುಗರೇನು ಮಾಡಿದರು? ಅವರದೇನು ಅಪರಾಧ?"

ಕರ್ಣನು ಧರ್ಮಪಕ್ಷಪಾತಿ, ಉದಾರಿ, ಶೂರ, ಆದ್ದರಿಂದ ದುರ್ಯೋಧನನು ಯಾಗಮಾಡಿ ಧಾರಾಳವಾಗಿ ಖರ್ಚುಮಾಡಿದರೆ, ಅವನಿಗೆ ಮೆಚ್ಚಿಕೆ "ಕ್ಷತ್ರಿಯರಿಗೆ ಐಶ್ವರ್ಯವು ಬಾಣಾಧೀನವಾದದ್ದು, ಮಗನಿಗೆ ಗಳಿಸಿಕೊಡಬೇಕೆನ್ನುವುದು ಬರಿಯ ಮೋಸ! ದೊರೆಯಾದವನು, ಸಂಪಾದಿಸಿದ್ದ ಐಶ್ವರ್ಯವನ್ನು ಬ್ರಾಹ್ಮಣರಿಗೆ ದಾನಮಾಡಿ, ಮಕ್ಕಳಿಗೆ ಧನುಸ್ಸನ್ನು ಮಾತ್ರ ಕೊಡಬೇಕು" ಎನ್ನುವನು ಪಾಂಡವರಿಗೆ ರಾಜ್ಯ ಕೊಡೋಣವೋ ಬೇಡವೊ ಎಂದು ದುರ್ಯೋಧನನು ಕೇಳಲು ಅವನು ಹೇಳುವ ಮಾತೇನು?—"ನಿನ್ನ ಅಣ್ಣ ತಮ್ಮಂದಿರೊಡನೆ ನೀನು ರಾಜ್ಯವಾಳಲು ನನ್ನ ಆಕ್ಷೇಪಣೆ ಏನೂ ಇಲ್ಲ, ಅವರಿಗೆ

ರಾಜ್ಯ ಕೊಡುವ ಬಿಡುವ ವಿಚಾರ ನಿನಗೆ ಸೇರಿದ್ದು—ಯುದ್ಧ ಒದಗಿತೆಂದರೆ ಹೋರಾಡುವುದು ನಮ್ಮ ಕೆಲಸ!" ಅಭಿಮನ್ಯು ಶತ್ರುವಶನಾದನೆಂದು ಕೇಳಿದಾಗ, ಬಹಳವಾಗಿ ನೊಂದುಕೊಂಡು "ನಾವು ಕುಮಾರನನ್ನು ರಕ್ಷಿಸದೆ ಇದ್ದದ್ದರಿಂದ ಬಿಲ್ಲನ್ನು ಬಿಸಾಟು ನಾರುಮಡಿ ಉಟ್ಟುಕೊಂಡು ಹೊರಡುವುದು ಉತ್ತಮ" ಎಂದು ಹಳಿದುಕೊಳ್ಳುವನು ಕರ್ಣನ ಮಾತು ನಾಟಕಕ್ಕೆಲ್ಲಾ ಇದಕ್ಕಿಂತ ಹೆಚ್ಚಾಗಿಲ್ಲ ಆದರೂ ಅವನ ವೀರಚಿತ್ರವೂ ಘನಚಿತ್ತವೂ ಅಂತಃಕರಣದಲ್ಲಿ ಖಚಿತವಾಗಿ ನಿಲ್ಲುವುವು

ಶಕುನಿಯು ಕಪಟಿ, ಕುಹಕಿ, ಪಾಂಡವರ ದ್ವೇಷಿ ಅವನಿಗೆ ಯಾರೂ ಲಕ್ಷ್ಯವಿಲ್ಲ, ಯಾರಲ್ಲಿಯೂ ಗೌರವವಿಲ್ಲ ದುರ್ಯೋಧನನು ಯಾಗದಲ್ಲಿ ಮಾಡಿದ ವಿತರಣೆಯನ್ನು ಕರ್ಣನು ಮೆಚ್ಚಿದರೆ, ಕುಹಕದಿಂದ "ಗಂಗಾಸ್ನಾನದಿಂದ ಪವಿತ್ರನಾದ ಅಂಗರಾಜನು ಹೇಳಿದ್ದು ಶ್ಲಾಘ್ಯವಾಗಿದೆ!" ಎನ್ನುವನು—ಕರ್ಣನನ್ನು ಅವನ ತಾಯಿಯು, ಹುಟ್ಟುತ್ತಲೇ, ಗಂಗೆಗೆ ಹಾಕಿದ ಮತ್ತು ಅವನಿಗೆ ಪಿತ್ರಾರ್ಜಿತವಾದ ಯಾವ ಆಸ್ತಿಯೂ ಇಲ್ಲದ ಸಂಗತಿಯ ಮೇಲೆ ಅವನಿಗೆ ಕಣ್ಣು, ಆ ಅರ್ಥವನ್ನಿಟ್ಟು ನಿಂದಾಸ್ತುತಿಮಾಡುವನು ದುರ್ಯೋಧನನು ನಮಸ್ಕಾರ ಮಾಡಿದರೆ, "ಇದೇ ರೀತಿಯಲ್ಲಿ ಎಲ್ಲಾ ಕ್ರತುಗಳನ್ನೂ ಮಾಡು ಬೇಕಾದಷ್ಟು ಹಣವನ್ನು ಒದಗಿಸಿಕೊಂಡು, ರಾಜರನೆಲ್ಲಾ ಜಯಿಸಿ, ಜರಾಸಂಧನ ಹಾಗೆ, ರಾಜಸೂಯಾಗಕ್ಕೆ ಹಿಡಿದುಕೊಂಡು ಬಾ!" ಎಂದು ಆಶೀರ್ವಾದಮಾಡುವನು—ರಾಜಸೂಯಯಾಗ ಮಾಡಿದ್ದ ಧರ್ಮರಾಯನ ಮೇಲೆ ಅವನಿಗೆ ಕಣ್ಣು, ದುರ್ಯೋಧನನು ಅವನಿಗೆ ಸರಿಸಮಾನನಾಗಬೇಕು, ಅವನನ್ನು ಮೀರಿಸಬೇಕು, ಎಂಬ ಹುರುಡು ಪಾಂಡವರಿಗೆ ರಾಜ್ಯಕೊಡುವುದರಲ್ಲಿ ಅವನಿಗೆ ಸುತರಾಂ ಇಷ್ಟವಿಲ್ಲ, ದ್ರೋಣರು ದಕ್ಷಿಣಾರೂಪವಾಗಿ ಅವರಿಗೆ ಅರ್ಧ ರಾಜ್ಯವನ್ನು ಕೇಳಿದಾಗ ಅದು "ಧರ್ಮವಂಚನೆ" ಎಂದು ಜಗಳ ತೆಗೆದನು ದ್ರೋಣರೇ ಸೋತು ಅವನನ್ನು ಆಲಿಂಗಿಸಿದರೆ, "ಆಹಾ! ಆಚಾರ್ಯನದು ಏನು ಶಾಠ್ಯ! ಕಾರ್ಯಲೋಭದಿಂದ ನನ್ನನ್ನು ಸಮಾಧಾನಗೊಳಿಸುತ್ತಾನೆ"

ಎಂದು ಹಳಿದವನು ಪಂಚರಾತ್ರದ ಕುಯುಕ್ತಿಸಂಕೇತವನ್ನು ಯೋಚಿಸಿ ದುರ್ಯೋಧನನ ಪರವಾಗಿ ಅದನ್ನು ಒಡ್ಡಿದವನೂ ಅವನೇ ಅಭಿಮನ್ಯುವನ್ನು ಹಿಡಿದುಕೊಂಡು ಹೋದವನು ಭೀಮನೇ ಇರಬೇಕೆಂದು ದ್ರೋಣಾದಿಗಳು ಊಹಿಸಿದರೆ ಅದು ಅವನಿಗೆ ಸಹಿಸದು ಉತ್ತರನ ರಥದಲ್ಲಿ ಯುದ್ಧಮಾಡಿ ಗೆದ್ದವನು ಅರ್ಜುನನೆಂದರೆ, ಸಂದೇಹ, ಭೀಷ್ಮರ ನಿದರ್ಶನಗಳು ಅವನಿಗೆ ಒಪ್ಪವು, ಕೊನೆಗೆ ಭೀಮಾರ್ಜುನರನ್ನೇ ಕಣ್ಣಿಂದ ಕಂಡ ಮೇಲೆ ಸುಮ್ಮನಾದನು ಆಗಲೂ "ಇವರು ಪಾಂಡವರ ವೇಷ ಹಾಕಿಕೊಂಡವರು ಎಂದನೋ ಏನೋ!" ತಲೆ ಕುಯಿದು ಇಟ್ಟರೂ "ಇದು ನೋರೆಯ ಕಾಯಿ" ಎನ್ನುವಂಥ ಮನುಷ್ಯ!

ವಿರಾಟ, ಉತ್ತರ ಮತ್ತು ಪಾಂಡವರು—ಇವರು ಮೂರನೆಯ ಗುಂಪು ಇವರಲ್ಲಿ ಅಭಿಮನ್ಯುವಿನ ಪಾತ್ರವು ಬಹು ಶ್ಲಾಘ್ಯವಾಗಿ ಚಿತ್ರಿಸಲ್ಪಟ್ಟಿದೆ ಆ ಚಿತ್ರಕ್ಕೆ ಸಂಬಂಧಪಟ್ಟ ಬಹುಭಾಗವು ಆಗಲೇ ಕಥಾಸಾರಾಂಶದಲ್ಲಿ ಬಂದಿದೆ, ಹೆಚ್ಚು ತಿಳಿಯಬೇಕಾದರೆ ನಾಟಕವನ್ನೇ ಓದಬೇಕು ಕಥಾ ಚಿತ್ರವನ್ನೂ ಸನ್ನಿವೇಶ ವೈಶೇಷ್ಯವನ್ನೂ ಪಾತ್ರ ಪರಿಚಯವನ್ನೂ ಈ ಸಂದರ್ಭದಲ್ಲಿ ಬೇರೆ ಮಾಡಿ ತೋರಿಸುವುದು ಅಸಾಧ್ಯ ಧರ್ಮರಾಯ ಭೀಮಾರ್ಜುನರ ಪಾತ್ರಗಳೂ ಗುಟ್ಟು ಹೊರಬಿದ್ದೀತೆಂದು ಹೆದರುತ್ತ, ಪರಸ್ಪರ ಸ್ನೇಹವನ್ನು ತೋರುತ್ತ, ವೀರರಾಗಿ ಹೋರುತ್ತ ಇರುವ ಆಯಾ ಸನ್ನಿವೇಶಗಳಲ್ಲಿಯೇ, ಅರಿಯತಕ್ಕವಾಗಿವೆ

ಈ ನಾಟಕದಲ್ಲಿ ಸ್ತ್ರೀ ಪಾತ್ರಗಳಿಲ್ಲದ್ದರಿಂದ ಪ್ರಾಕೃತವು ಕಡಮೆ ಅದು ಎರಡನೆಯ ಅಂಕದ ಆದಿಯಲ್ಲಿ ಮಾತನಾಡುವ ಗೊಲ್ಲರ ಮಾತಿನಲ್ಲಿ ಮಾತ್ರ ಬರುತ್ತದೆ, ಬೃಹನ್ನಳೆಯ ಪಾತ್ರವು ಪ್ರಾಕೃತವನ್ನೇ ಆಡಬೇಕು, ಆದರೆ ಅವನು ಯುದ್ಧವರ್ಣನೆಗೆ ಆರಂಭಿಸಲು, ಒಂದು ವಾಕ್ಯವನ್ನು ಪ್ರಾಕೃತದಲ್ಲಿ ಎಂದನೋ ಇಲ್ಲವೋ, ವಿರಾಟನು "ಊರ್ಜಿತಂ ಕರ್ಮ, ಸಂಸ್ಕೃತಮಭಿಧೀಯತಾಂ" (ತೇಜಸ್ವಿಯಾದ ವಿಷಯವಾದ್ದರಿಂದ ಸಂಸ್ಕೃತದಲ್ಲಿಯೇ ಹೇಳು) ಎನ್ನುವನು ಆದ್ದ

ರಿಂದ ಅವನ ಪ್ರಾಕೃತ ಮಾತು ಅಷ್ಟಕ್ಕೇ ನಿಂತು ಹೋಗುವುದು ಇದರಿಂದ ಪ್ರಾಚೀನ ನಾಟಕಗಳಲ್ಲಿ ಸಂಸ್ಕೃತ ಪ್ರಯೋಗಕ್ಕೆ ಒಂದು ಉಪಯೋಗವು ಗೊತ್ತಾಗುತ್ತದೆ

---

# ಏಕಾಂಕ ನಾಟಕಗಳು

---

## ೧. ಮಧ್ಯಮವ್ಯಾಯೋಗ, ೨. ದೂತವಾಕ್ಯ, ೩ ದೂತ ಘಟೋತ್ಕಚ, ೪. ಕರ್ಣಭಾರ, ೫. ಊರುಭಂಗ

---

### ೧ ಮಧ್ಯಮವ್ಯಾಯೋಗ

"ಮಧ್ಯಮವ್ಯಾಯೋಗ" ಮೊದಲಾದ ಮಿಕ್ಕ ಐದು ಭಾರತ ರೂಪಕಗಳೂ ಏಕಾಂಕ ನಾಟಕಗಳು, ಈಗಿರುವ ಸಂಸ್ಕೃತರೂಪಕ ಸಾಹಿತ್ಯದಲ್ಲಿ ನಾಲ್ಕೈದು ಅಂಕಗಳಿಗೆ ಮೇಲ್ಪಟ್ಟಿರುವ ದೊಡ್ಡ ನಾಟಕಗಳೇ ಪ್ರಚುರವಾಗಿವೆ, ಸಣ್ಣ ನಾಟಕಗಳು ತೀರ ಕಡಮೆ ಆದರೆ ಇವು ಹಿಂದೆ ಯಥೇಚ್ಛವಾಗಿ ಇದ್ದಿರಬೇಕು, ಲಕ್ಷಣ ಗ್ರಂಥಗಳನ್ನು ನೋಡಿದರೆ, ಭಾಣ ಪ್ರಹಸನ ವ್ಯಾಯೋಗ ವೀಧೀ ಉತ್ಸೃಷ್ಟಿಕಾಂಕ ಈಹಾಮೃಗ ಎಂಬ ರೂಪಕಗಳೂ, ಪ್ರೇಕ್ಷಣ ಶ್ರೀಗದಿತ ಎಂಬ ಉಪ ರೂಪಕಗಳೂ ಎಲ್ಲಾ ಒಂದೊಂದೇ ಅಂಕವುಳ್ಳವುಗಳೆಂದು ಗೊತ್ತಾಗುತ್ತದೆ ಏಕ ಕರ್ತೃಕಗಳಾಗಿ, ಏಕವಿಷಯಕವಾಗಿ, ಒಂದು ಅನುಕ್ರಮವುಳ್ಳವುಗಳಾಗಿರುವುದರಿಂದ ಇವೈದೂ ಒಂದು ದೊಡ್ಡ ನಾಟಕದ ಐದು ಅಂಕಗಳಾಗಿದ್ದಿರಬಹುದೆಂದೂ ಈಚೆಗೆ ನಟರು ಆ ನಾಟಕವನ್ನು ಒಡೆದು ಒಂದೊಂದು ಅಂಕಕ್ಕೂ ಮೊದಲು ತುದಿಗಳಲ್ಲಿ ನಾಂದೀ ಭರತ ಶ್ಲೋಕಗಳನ್ನು ಅಂಟಿಸಿ ಬೇರೆ ಬೇರೆಯಾಗಿ ಮಾಡಿದರೆಂದೂ ಕೆಲವರು ಅಭಿಪ್ರಾಯಪಡುತ್ತಾರೆ, ಆದರೆ ಈ ಊಹೆಯು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ, ಏಕೆಂದರೆ ಈಗಿನ ರೂಪದಲ್ಲಿ, ಇವು ಒಂದೊಂದೂ ಸ್ವತಂತ್ರವಾಗಿವೆ—ಪರಸ್ಪರ ಸಾಪೇಕ್ಷವಾಗಿಲ್ಲ, ತೊಟ್ಟು ತುದಿಗಳನ್ನು ಕಳೆದು ಜೋಡಿಸಿದರೆ ಹೊಂದುವಂತಿಲ್ಲ ಐದು ಸಣ್ಣ ಸಣ್ಣ ಹಣ್ಣುಗಳಂತಿವೆಯೇ ಹೊರತು, ಒಂದು ಹಣ್ಣನ್ನು ಕುಯ್ದು ಮಾಡಿದ ಐದು ಹೋಳುಗಳಂತಿಲ್ಲ—ದ್ರಾಕ್ಷೆಯ ಹಣ್ಣುಗಳಂತಿವೆಯೇ ಹೊರತು ಕಿತ್ತಿಳೆಯ ತೊಳೆಗಳಂತಿಲ್ಲ.

ಇವುಗಳಲ್ಲಿ ಭಾರತ ಕಥಾಕ್ರಮುವನ್ನು ಅನುಸರಿಸಿ ಮೊದಲು ಬರತಕ್ಕದ್ದು 'ಮಧ್ಯಮವ್ಯಾಯೋಗ' 'ಮಧ್ಯಮ'ನೆಂದರೆ, ಪಾಂಡವರಲ್ಲಿ ಮಧ್ಯಮ—ಭೀಮ* (ನ್ಯಾಯವಾಗಿ ಅರ್ಜುನನಾಗಬೇಕು) ಈ ಮಧ್ಯಮನು ಕೇಶವದಾಸನೆಂಬ ಬ್ರಾಹ್ಮಣನ ಮಧ್ಯಮಪುತ್ರನನ್ನು ಘಟೋತ್ಕಚನ ಕೈಯಿಂದ ಬಿಡಿಸಬೇಕೆಂದು ಹೋಗಿ ತನ್ನ ಮಗನೊಡನೆ ಮಾಡಿದ 'ವ್ಯಾಯೋಗ' (ಜಗಳ)ವೇ ಇದರ ವಸ್ತು ಇದನ್ನು ಓದಿದರೆ, ಒಂದು ಕಡೆ ಲವಕುಶರ ಕಾಳಗ ಬಭ್ರುವಾಹನ ಕಾಳಗಗಳೂ, ಇನ್ನೊಂದು ಕಡೆ ಶುನಶ್ಶೇಪನ ಕಥೆಯೂ ಜ್ಞಾಪಕಕ್ಕೆ ಬರುತ್ತವೆ ಇದು ಭಾರತದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ, ಆದ್ದರಿಂದ ಕವಿಕಲ್ಪಿತವೆಂದೇ ತೋರುತ್ತದೆ

ಕೇಶವದಾಸನೆಂಬ ಬ್ರಾಹ್ಮಣನು ತನ್ನ ಹೆಂಡತಿ ಮತ್ತು ಮೂವರು ಗಂಡುಮಕ್ಕಳೊಡನೆ (ಮಗ್ಗುಲ ಹಳ್ಳಿಯಲ್ಲಿದ್ದ) ತನ್ನ ನೆಂಟರ ಮನೆಗೆ ಉಪನಯನಕೋಸ್ಕರ ಪ್ರಯಾಣಮಾಡುತ್ತಿದ್ದನು ಆ ಊರಿನ ದಾರಿಯು ಒಂದು ಕಾಡಿನ ಮಾರ್ಗವಾಗಿ ಹೋಗುತ್ತಿತ್ತು ಅಲ್ಲಿ ಅವರನ್ನು ಘಟೋತ್ಕಚನು ಅಡ್ಡಗಟ್ಟಿ ತನ್ನ ತಾಯಿಗೆ ಅಂದು ಪಾರಣೆಯಾದ್ದರಿಂದ, ಆಕೆಯ ಅಪ್ಪಣೆಯಂತೆ, ಯಾರಾದರೂ ಒಬ್ಬ ಮನುಷ್ಯನನ್ನು ಪಾರಣೆಗಾಗಿ ಹಿಡಿದುಕೊಂಡು ಹೋಗಲು ಬಂದಿರುವುದಾಗಿಯೂ, ಅವರಲ್ಲಿ ಯಾರಾದರೂ ತನ್ನ ಹಿಂದೆ ಬರಬೇಕೆಂದೂ ಹೇಳಿದನು ಮುದುಕನೆಂದು ಆ ಬ್ರಾಹ್ಮಣನನ್ನೊಪ್ಪಲಿಲ್ಲ, ಹೆಂಗಸೆಂದು ಅವನ ಹೆಂಡತಿಯನ್ನೊಪ್ಪಲಿಲ್ಲ, ಮಕ್ಕಳಲ್ಲಿ ಹಿರಿಯವನನ್ನು ಬಿಟ್ಟುಕೊಡಲಾರೆನೆಂದು ತಂದೆಯೂ, ಕಿರಿಯವನನ್ನು ಬಿಟ್ಟುಕೊಡಲಾರೆನೆಂದು ತಾಯಿಯೂ ನಿಲ್ಲಿಸಿಕೊಂಡರು ಉಳಿದವನು ನಿರ್ಭಾಗ್ಯನಾದ "ಮಧ್ಯಮ" "ತಂದೆ ತಾಯಿಗಳಿಗೇ ಬೇಡವಾದವನು ಮತ್ತಾರಿಗೆ ಬೇಕು?" ಎಂದು ಕ್ಷಣಮಾತ್ರ ನೊಂದುಕೊಂಡರೂ ತನ್ನಿಂದ ಗುರುಹಿರಿಯರು ಬದುಕಿಕೊಂಡರಲ್ಲಾ ಎಂದು ಸಂತೋಷದಿಂದ

---

* ಭೀಮನು ಕೌಂತೇಯರಲ್ಲಿ "ಮಧ್ಯಮ"ನಾಗುತ್ತಾನೆ.

ಅವನು ಘಟೋತ್ಕಚನ ಹಿಂದೆ ಹೋಗಲು ಒಪ್ಪಿ ತಾಯಿತಂದೆಗಳಿಗೆ ನಮಸ್ಕರಿಸುವನು ತಾಯಿಯು 'ಚಿರಂಜೀವಿಯಾಗು' ಎಂದು ಹರಸುವಳು, ಆಮೇಲೆ ಅಲ್ಲಿ ಇದ್ದ ಒಂದು ಕೊಳಕ್ಕೆ ಹೋಗಿ ನೀರು ಕುಡಿದು ಆತ್ಮತರ್ಪಣವನ್ನು ಕೊಟ್ಟುಕೊಂಡು ಬರುತ್ತೇನೆಂದು ಕೇಳಿ ಹೋಗುವನು ಅವನು ಹಿಂತಿರುಗಿ ಬರುವತನಕ ಘಟೋತ್ಕಚನಿಗೆ ತಾಳ್ಮೆಯಿಲ್ಲ ತಾಯಿಯು ಉಪವಾಸಮಾಡಿದ್ದಾಳೆ, ಅವಳ ಊಟಕ್ಕೆ ಹೊತ್ತಾಗುತ್ತದೆ, ಎಂಬ ಚಿಂತೆ, ಆದ್ದರಿಂದ ಅವನು 'ಮಧ್ಯಮ ಮಧ್ಯಮ!!' ಎಂದು ಕೂಗುವನು

ಈ ವೃತ್ತಾಂತವು ನಡೆದ ಸ್ಥಳಕ್ಕೆ ಸಮೀಪದಲ್ಲಿಯೇ ಆಗ ಪಾಂಡವರು ಆಶ್ರಮ ಮಾಡಿಕೊಂಡಿದ್ದು, ಭೀಮನನ್ನು ಮನೆಗೆ ಕಾವಲು ಹಾಕಿ ಮಿಕ್ಕವರೆಲ್ಲರೂ ಧೌಮ್ಯಾಶ್ರಮಕ್ಕೆ ಯಜ್ಞವನ್ನು ನೋಡಲು ಹೋಗಿದ್ದರು ಭೀಮನು ವ್ಯಾಯಾಮ ಮಾಡುತ್ತಿದ್ದವನು, ಮೇಲಿಂದ ಮೇಲೆ 'ಮಧ್ಯಮ, ಮಧ್ಯಮ!' ಎಂಬ ಕೂಗನ್ನು ಕೇಳಿ, ತನ್ನನ್ನು ಯಾರೋ ಕರೆಯುತ್ತಾರೆಂದು ಹಾಗೇ ಅಲ್ಲಿಗೆ ಬಂದನು ಅವನೂ ಒಬ್ಬ ಮಧ್ಯಮ, ಎಲ್ಲದರಲ್ಲಿಯೂ ಮಧ್ಯಮ —

"ಮಧ್ಯಮೋಽಹಮವಧ್ಯಾನಾಂ ಉತ್ಸಿಕ್ತಾನಾಂ ಚ ಮಧ್ಯಮಃ |
ಮಧ್ಯಮೋಽಹಂ ಕ್ಷಿತೌ ಭದ್ರೇ ಭ್ರಾತೄಣಾಮಪಿ ಮಧ್ಯಮಃ ||
ಮಧ್ಯಮಃ ಪಂಚಭೂತಾನಾಂ ಪಾರ್ಥಿವಾನಾಂ ಚ ಮಧ್ಯಮಃ |
ಭವೇ ಚ ಮಧ್ಯಮೋ ಲೋಕೇ ಸರ್ವಕಾರ್ಯೇಷು ಮಧ್ಯಮಃ ||

ಭೀಮನೆಂದರಿತು ಬ್ರಾಹ್ಮಣನು ಅವನ ಮರೆಹೊಗುವನು ಇಷ್ಟು ಹೊತ್ತಿಗೆ ಮಧ್ಯಮ ಬಾಲಕನೂ ಬರುವನು ಭೀಮನು ಒಳ್ಳೆಯ ಮಾತಿನಲ್ಲಿ ಘಟೋತ್ಕಚನನ್ನು ಕುರಿತು "ಯಾಕಯ್ಯ ಹಿಡಿದುಕೊಂಡಿದ್ದೀಯೆ ಇವರನ್ನ, ಚಂದ್ರನನ್ನು ರಾಹು ಹಿಡಿದುಕೊಂಡಂತೆ?" ಎಂದು ಕೇಳಲು, ಅವನು "ಹೌದು, ರಾಹುವೆ!" ಎಂದು ಗರ್ವಿತನಾಗಿ ಉತ್ತರ ಕೊಡುವನು ತಂದೆ ಮಕ್ಕಳು ಒಬ್ಬರನ್ನೊಬ್ಬರು ಅರಿಯರು; ಆದರೆ ಅವರ ಮಾತು ಕತೆಗಳೂ ನಡೆನುಡಿಗಳೂ ತಮ್ಮ ತಮ್ಮ ಬಂಧುಸಾದೃಶ್ಯವನ್ನು ಜ್ಞಾಪಿಸುವುವು, ಸೌಂದರ್ಯ ತೇಜಸ್ಸು ದರ್ಪ ಗರ್ವ

ಗಳಿಗಾಗಿ ಒಬ್ಬರನ್ನೊಬ್ಬರು ಮೆಚ್ಚುವರು ಅವರನ್ನು ಬಿಟ್ಟುಬಿಡೆಂದು ಭೀಮನು ಮೇಲಿಂದ ಮೇಲೆ ಹೇಳಿದರೂ ಘಟೋತ್ಕಚನು ಮಾತ್ರ ಒಪ್ಪದೆ, "ಇದು ನಮ್ಮ ತಾಯಿಯ ಆಜ್ಞೆ, ಆದ್ದರಿಂದ ನಮ್ಮ ಅಪ್ಪ ಬಂದು 'ಬಿಡು' ಎಂದು ಹೇಳಿದರೂ ಬಿಡುವುದಿಲ್ಲ" ಎನ್ನುವನು —

"ಮಾತಾ ಕಿಲ ಮನುಷ್ಯಾಣಾಂ ದೈವತಾನಾಂ ಚ ದೈವತಂ ।
ಮಾತುರಾಜ್ಞಾಂ ಪುರಸ್ಕೃತ್ಯ ವಯಮೇತಾಂ ದಶಾಂ ಗತಾಃ ॥"

ಇಂಥ ತಾಯಿ ಯಾರೆಂದು ಕೇಳಲು, ಹಿಡಿಂಬೆಯೆಂಬ ಉತ್ತರ ಬರುವುದು ಭೀಮನಿಗೆ ಸಂತೋಷ, ಆದರೂ ತನ್ನ ಗುರುತನ್ನು ಹೇಳುವುದಿಲ್ಲ ಆಮೇಲೆ ಅವರವರಿಗೆ ಮಾತು ಬೆಳೆದು ಭೀಮನು ಬಾಹುವೇ ತನ್ನ ಆಯುಧವೆನ್ನುವನು

ಘಟೋತ್ಕಚ— ಈ ಮಾತು ನನ್ನ ತಂದೆಯಾದ ಭೀಮಸೇನನಿಗೆ ತಕ್ಕದ್ದು

ಭೀಮ— ಯಾರು ಭೀಮನೆಂದರೆ? ಬ್ರಹ್ಮ, ಶಿವ, ವಿಷ್ಣು, ಇಂದ್ರ, ಯಮ— ಇವರಲ್ಲಿ ಯಾರಿಗೆ ಸಮ?

ಘಟೋ— ಎಲ್ಲರಿಗೂ !

ಭೀಮ— ಛಿ ! ಸುಳ್ಳು

ಪಿತೃನಿಂದೆಯನ್ನು ಅವನು ಸೈರಿಸನು. ಆದ್ದರಿಂದ ಅವರ ವರಿಗೆ ಹೋರಾಟವಾಗುವುದು. ಮಲ್ಲಯುದ್ಧದಲ್ಲಿ ಘಟೋತ್ಕಚನು ಭೀಮನನ್ನು ತೋಳುಗಳಲ್ಲಿ ಬಿಗಿದು ಸಿಕ್ಕಿಸಿಕೊಳ್ಳುವನು ಭೀಮನಿಗೆ ಸಂತೋಷ— ಬಂಧನದಲ್ಲಿದ್ದರೂ ಸಂತೋಷ ತನಗೆ ಆದ ಅಪಜಯದ ಮಾತಿರಲಿ, ಭಾರತ ಯುದ್ಧಕ್ಕೆ ಇಂಥ ಮಗನ ಸಹಾಯ ದೊರಕುತ್ತದಲ್ಲಾ ಎಂಬ ಮುಂದಿನ ಯೋಚನೆ. ಆದ್ದರಿಂದ ಅವನ ಕೈಯಲ್ಲಿ ಸಿಕ್ಕಿಕೊಂಡೇ "ಎಲೋ ಸುಯೋಧನ, ನೋಡು, ನಿನ್ನ ಶತ್ರುಪಕ್ಷವು ವರ್ಧಿಸುತ್ತಿದೆ ! ನಿನ್ನನ್ನು ರಕ್ಷಿಸಿಕೋ !" ಎಂದುಕೊಳ್ಳುವನು ಕೊನೆಗೆ ಮಗನ "ಮಾಯಾಪಾಶ"ವನ್ನು ಮಾಹೇಶ್ವರ ಮಂತ್ರದಿಂದ ಬಿಡಿಸಿಕೊಳ್ಳಬೇಕಾಯಿತು ಭೀಮನೇ ಗೆದ್ದಹಾಗಾಯಿತು ತಾನು ಯಾರ ನಿರ್ಬಂಧಕ್ಕೂ ಬರತಕ್ಕವನಲ್ಲವೆಂದೂ,

ನಿರ್ಬಂಧಕ್ಕೆ ಬರಬೇಕಾದರೆ ಮೊದಲು ಪರಾಜಿತನಾಗಬೇಕೆಂದೂ ಒಂದು ಕರಾರಾಗಿತ್ತು ಆದ್ದರಿಂದ ಘಟೋತ್ಕಚನು ನಿರ್ಬಂಧಪಡಿಸುವಂತಿರಲಿಲ್ಲ "ಹೇಗಾದರೂ ಆಗಲಿ, ಬಂದರೆ ಸರಿ, ತನ್ನ ತಾಯಿಯ ಹೊಟ್ಟೆ ತುಂಬಿದ್ದೆಲ್ಲಾ ಒಂದು" ಎಂದು ಭೀಮನನ್ನು ಕರೆದುಕೊಂಡು ಹೋಗುವನು ಆದರೂ ಅವನೇನು ಆ ರಾಕ್ಷಸ ಕಿಶೋರನಿಗೆ ಲಕ್ಷ್ಯವಿಲ್ಲ ಮನೆಗೆ ಹೋದಕೂಡಲೇ ತಾಯಿಯು "ಮಗು, ಎಂಥ ಮನುಷ್ಯನನ್ನು ತಂದೆಯೋ?" ಎಂದು ಕೇಳಿದಳು

ಘಟೋ—ಅಮ್ಮ, ಕೇವಲ ಮಾತಿನಲ್ಲಿ ಮನುಷ್ಯ, ಅಷ್ಟೇಯೆ, ವೀರ್ಯದಲ್ಲಲ್ಲ

ಹಿಡಿಂಬೆ—ಹಾಗಾದರೆ ಬ್ರಾಹ್ಮಣನೇನೋ ?

ಘಟೋ—ಬ್ರಾಹ್ಮಣನಲ್ಲ

ಹಿಡಿಂಬೆ—ಮುದುಕನೇ ?

ಘಟೋ—ಮುದುಕನೂ ಅಲ್ಲ

ಹಿಡಿಂಬೆ—ಹುಡುಗನೇ ?

ಘಟೋ—ಅಲ್ಲ

ಹಿಡಿಂಬೆ—ಹಾಗಾದರೆ ಎಲ್ಲಿ ನೋಡೋಣ ಬಾ !

ಎಂದು ಇಬ್ಬರೂ ಬಂದು, ಬಾಗಿಲಿನಲ್ಲಿ ನಿಂತಿರುವ "ಮನುಷ್ಯ"ನನ್ನು ನೋಡುತ್ತಾರೆ—ಭೀಮನೇನ! ಹಿಡಿಂಬೆಗೆ ಆಶ್ಚರ್ಯವಾಯಿತು. "ಅಯ್ಯೋ! ಈತನನ್ನು ಯಾಕೆ ಕರೆತಂದೆಯೋ ಹುಚ್ಚ! ಈತ ಮನುಷ್ಯನಲ್ಲ —ದೇವರು" ಎನ್ನುವಳು

"ಯಾರಿಗೆ ದೇವರು ?"

"ನಿನಗೂ ನನಗೂ ಇಬ್ಬರಿಗೂ!"

ಹೀಗೆಂದು ಹಿಡಿಂಬೆಯು ಮಗನಿಂದ ತಂದೆಗೆ ನಮಸ್ಕಾರ ಮಾಡಿಸುವಳು ಎಲ್ಲರೂ ಆಶ್ರಮದ್ವಾರದವರೆಗೆ ಹೋಗಿ ಕೇಶವದಾಸನನ್ನೂ ಅವನ ಹೆಂಡತಿ ಮಕ್ಕಳನ್ನೂ ಕಳುಹಿಸಿಕೊಟ್ಟು ಬರುವರು

ಇದು ಕ್ಷಣಕ್ಷಣಕ್ಕೂ ಕುತೂಹಲವನ್ನುಂಟುಮಾಡುವ ಒಂದು ವಿಚಿತ್ರ ಸಾಂಸಾರಿಕ ಕಥೆ ಇದರಲ್ಲಿ ತಾಯಿತಂದೆಗಳ ಪ್ರೇಮವೂ ತಂದೆ

ಮಕ್ಕಳ ಚಿತ್ರವೂ ಬಹು ಚೆನ್ನಾಗಿ ಚಿತ್ರಿಸಲ್ಪಟ್ಟಿವೆ ಭೀಮನು ಶಕ್ತಿಬಲ ಪಕ್ಷಪಾತಿ, ಅಣ್ಣತಮ್ಮಂದಿರನ್ನೆಲ್ಲಾ ಯಜ್ಞ ನೋಡುವುದಕ್ಕೆ ಕಳು ಹಿಸಿ ತಾನು ಮನೆಗೆ ಕಾವಲಾಗಿ ಉಳಿದುಕೊಂಡು ಸಾಧನೆಮಾಡುತ್ತ ಮೈಗಟ್ಟಿಮಾಡಿಕೊಳ್ಳುತ್ತಿದ್ದಾನೆ ಘಟೋತ್ಕಚನು ಅವನ ಮರಿ, ಹುಡುಗನಾದರೂ ಅವನ ಸಮಕ್ಕೂ ಹೋರಾಡುವವನು, ಪಂಚರಾತ್ರ ದಲ್ಲಿ ಅಭಿಮನ್ಯುವು ಭೀಮನಿಂದ ಪರಾಜಿತನಾದಂತೆ ಇಲ್ಲಿ ಇವನೂ ಪರಾಜಿತನಾದರೂ, ಅಲ್ಲಿ ಅವನು ಹೋರಾಡಿದಂತೆ ಮುಂದೆ ಮಹಾ ಭಾರತ ಯುದ್ಧದಲ್ಲಿ ಇವನೂ ಹೋರಾಡಿ ತಂದೆಗೆ ಅನುವಾಗುವನೆಂಬ ಸೂಚನೆಯಿದೆ ಅದಕ್ಕೇ ಭೀಮನಿಗೆ ಅಷ್ಟು ಸಂತೋಷ ಹಿಡಿಂಬೆಯು "ಜಾತಿಯಲ್ಲಿ ರಾಕ್ಷಸಿ, ಆಚಾರದಲ್ಲಲ್ಲ" ಎಂದು ಭೀಮನು ಹೇಳು ವಂತೆ, ಅವಳ ಗಂಡ ಮಕ್ಕಳೂ ಇಲ್ಲಿ ರಾಕ್ಷಸ ಪ್ರಾಯರಲ್ಲ, ಕುರು ಕ್ಷೇತ್ರದಲ್ಲಿ ಘೋರವಾಗಿ ಕಾದುವ ಶೂರರಲ್ಲ, ಶಾಂತ ಸಂಸಾರದಲ್ಲಿ ಸಂತೋಷದಿಂದಿರುವ ಪ್ರಚಂಡರಾದ ತಂದೆ ಮಕ್ಕಳು, ಆದರೆ ಊರನ್ನು ಬಿಟ್ಟು, ಹಿಂಸ್ರಜಂತುಗಳಿಗೂ ರಾಕ್ಷಸರಿಗೂ ಆವಾಸವಾದ ಕಾಡಿನಲ್ಲಿ ಆಸುರ ವೃತ್ತಿಯಿಂದ ಜೀವಿಸುತ್ತಿದ್ದರು

## ೨. ದೂತವಾಕ್ಯ

ಪಾಂಡವರು ಹೀಗೆ ಹನ್ನೆರಡುವರ್ಷ ವನವಾಸವನ್ನೂ ಒಂದು ವರ್ಷ ಅಜ್ಞಾತವಾಸವನ್ನೂ ಮಾಡಿ ಮುಗಿಸಿದರು ಈಗ ಅವರಿಗೆ ಕ್ರಮಪ್ರಾಪ್ತವಾಗಿ ಅರ್ಧರಾಜ್ಯವು ಬರಬೇಕು. ಅದಕ್ಕೆ ನ್ಯಾಯವಾಗಿ ಸಾತ್ವಿಕ ರೀತಿಯಿಂದ ದುರ್ಯೋಧನನೊಡನೆ ಮಾಡಿದ ಸಂಧಾನ ಗಳೆಲ್ಲವೂ ವ್ಯರ್ಥವಾದುವು ದುರ್ಯೋಧನನು ತನ್ನ ಮಂತ್ರಿಮಂಡಲ ವನ್ನು ಕೂಡಿಸಿ, ಯುದ್ಧವನ್ನು ನಿಶ್ಚಯಿಸಿ, ಸರ್ವಾನುಮತದಿಂದ ಭೀಷ್ಮರಿಗೆ ಸೇನಾಧಿಪತ್ಯವನ್ನು ಗೊತ್ತುಮಾಡಿದನು ಈ ಸಮಯ ದಲ್ಲಿ ಲೋಕನಾಶಕವಾದ ಯುದ್ಧವು ಆರಂಭವಾಗುವುದಕ್ಕೆ ಮೊದಲು ತಾನೂ ಸಂಧಿಗಾಗಿ ಒಂದು ಪ್ರಯತ್ನಮಾಡಿ ನೋಡಿಬಿಡಬೇಕೆಂದು ಕೃಷ್ಣನು, ದುರ್ಯೋಧನನ ಆಸ್ಥಾನಕ್ಕೆ ಬಂದನು. ಅವನ ಸಂಧಾನ ಪ್ರಯತ್ನವೂ ನಿಷ್ಫಲವಾಯಿತು.

ಇದೇ "ದೂತವಾಕ್ಯ"ದ ಕಥೆ ಇದರಲ್ಲಿ ದುರ್ಯೋಧನನ ದೌಷ್ಟ್ಯ ಧೂರ್ತತೆಗಳೂ, ಜ್ಞಾತಿಮಾತ್ಸರ್ಯ ರಾಜ್ಯಲೋಭಗಳೂ, ಕೃಷ್ಣನು ಸಾಮಮಾರ್ಗದಿಂದ ಸಂಧಾನಕ್ಕೆ ಆರಂಭಮಾಡಿ ದುರ್ಯೋಧನನ ಹೀನ ಮಾತುಗಳಿಂದ ರೇಗಿ ಕೊನೆಗೆ ಧೃತರಾಷ್ಟ್ರನ ಭಕ್ತಿ ಪ್ರದರ್ಶನದಿಂದ ತಣ್ಣಗಾಗಿ ಹಿಂತಿರುಗುವುದೂ, ಈ ಸಂದರ್ಭದಲ್ಲಿ ಕೃಷ್ಣ ದುರ್ಯೋಧನರ ವಾಗ್ಯುದ್ಧವೂ ಚೆನ್ನಾಗಿ ಚಿತ್ರಿತವಾಗಿವೆ

ದುರ್ಯೋಧನನು ಸಭೆಯಲ್ಲಿದ್ದಾಗ ಕಂಚುಕಿಯು "ಪುರುಷೋತ್ತಮನಾದ ನಾರಾಯಣನು" ಬಂದಿರುವನೆಂದು ತಿಳಿಸುವನು ಅದನ್ನು ಕೇಳಿ ದುರ್ಯೋಧನನು "ಗೋಪಾಲಕನು ನಿನಗೆ ಪುರುಷೋತ್ತಮನೇ ? ತೊಲಗು !" ಎಂದು ಗದರಿಸಿಕೊಳ್ಳುವನು ಕೊನೆಗೆ "ಕೇಶವನು ದೂತನಾಗಿ ಬಂದ"ನೆಂದು ಅವನು ಹೇಳಬೇಕಾಯಿತು ತನ್ನಂತೆಯೇ ತನ್ನ ಸಭಿಕರೆಲ್ಲರೂ ಕೃಷ್ಣನಲ್ಲಿ ಅಲಕ್ಷ್ಯ ತೋರಿಸಬೇಕೆಂದೂ, ಯಾರಾದರೂ ಅವನನ್ನು ಕಂಡು ಎದ್ದರೆ, ಹನ್ನೆರಡು ಸ್ವರ್ಣಭಾರವನ್ನು ದಂಡ ತೆರಬೇಕೆಂದೂ ನಿಯಮಿಸಿ ತಾನು ದ್ರೌಪದೀ ವಸ್ತ್ರಾಪಹರಣದ ಒಂದು ಚಿತ್ರಪಟವನ್ನು ತರಿಸಿ ಅದನ್ನು ಪರಿಶೀಲಿಸುತ್ತಾ ಕೃಷ್ಣನಿಗೆ ಹೇಳಿಕಳುಹಿಸುವನು ಅವನು ಬಂದ ಕೂಡಲೆ ದಂಡ ಭಯ ನಿಯಮ ನಿಶ್ಚಯಗಳನ್ನೆಲ್ಲಾ ಮರೆತು ಸಕಲ ಸಭಿಕರೂ ಎದ್ದು ನಿಂತರು, ದುರ್ಯೋಧನನು ಸುಮ್ಮನಿರಬೇಕೆಂದರೂ ಅವನ ಪದತಲಕ್ಕೆ ಉರುಳಿ ಬಂದು ಬಿದ್ದನು ಪಾಂಡವರ ಯೋಗಕ್ಷೇಮವನ್ನು ವಿಚಾರಿಸುವಾಗಲೇ ಕುಹಕಕ್ಕೆ ಆರಂಭ

ದುರ್ಯೋಧನ—ಧರ್ಮಾತ್ಮಜನೂ ವಾಯುಸುತನೂ ಇಂದ್ರಸೂನುವೂ ಅಶ್ವಿನೀಪುತ್ರರೂ ಕ್ಷೇಮವಾಗಿದ್ದಾರೆಯೇ ?

ಕೃಷ್ಣನು ದುರ್ಯೋಧನನ ಯೋಗ್ಯತೆಯೇ ಇಷ್ಟೆಂದು ಕೊಂಡು ಅದನ್ನು ಲಕ್ಷ್ಯಮಾಡದೆ ನಯವಾಗಿ ಮಾತಿಗೆ ಆರಂಭಿಸುವನು

ಕೃಷ್ಣ—ಯುಧಿಷ್ಠಿರ ಮುಂತಾದ ಪಾಂಡವರು ನಿನ್ನ ಯೋಗಕ್ಷೇಮವನ್ನು ಕೇಳಿ, "ನಾವು ಬಹಳ ಕಷ್ಟವನ್ನು ಅನುಭವಿಸಿದೆವು, ಸಮಯವೂ ಪೂರೈಸಿತು, ಧರ್ಮವಾಗಿ ನಮಗೆ ಬರಬೇಕಾದ

ಪಿತ್ರಾರ್ಜಿತ ಸ್ವತ್ತನ್ನು ಹಂಚಿಕೊಂಡು" ಎಂದು ವಿಜ್ಞಾಪಿಸಿ ಕೊಳ್ಳುತ್ತಾರೆ

ದುರ್ಯೋ—ಏನು ಏನು "ಪಿತ್ರಾರ್ಜಿತ"ವೆ? ಚಿಕ್ಕಪ್ಪನು ಬೇಟೆಯಾಡುವುದಕ್ಕೆ ಹೋಗಿ ಮುನಿಶಾಪ ಪಡೆದ ಮೇಲೆ ಹೆಂಡತಿಯನ್ನೇ ಕಾಣಲಿಲ್ಲ ಅವನು ಹೆರರ ಮಕ್ಕಳಿಗೆ ಹೇಗೆ ತಂದೆಯಾದಾನು?

ಕೃಷ್ಣ—ನೀನು ಚರಿತ್ರೆಯನ್ನು ಬಲ್ಲವನು—ನೀನು ಹೇಳು, "ವಿಚಿತ್ರವೀರ್ಯನು ಕ್ಷಯದಿಂದ ಮೃತನಾದಮೇಲೆ ವ್ಯಾಸರಿಂದ ಅಂಬಿಕೆಯಲ್ಲಿ ಹುಟ್ಟಿದ ನಿಮ್ಮ ತಂದೆ ಧೃತರಾಷ್ಟ್ರನಿಗೆ ರಾಜ್ಯ ಹೇಗೆ ಬರಬೇಕು?" ಹೀಗೆಲ್ಲಾ ವೈರವನ್ನು ಬೆಳಸಿಕೊಂಡು ಹೋದರೆ ಕುರುಕುಲವೇ ನಾಶವಾಗಿ ಹೋದೀತು! ಯುಧಿಷ್ಠಿರಾದಿಗಳು ವಿಶ್ವಾಸದಿಂದ ಕೇಳುವ ಮಾತನ್ನು ನಡೆಸಿಕೊಡು

ದುರ್ಯೋ—ಅಯ್ಯಾ ದೂತ! ನೀನು ರಾಜ್ಯವ್ಯವಹಾರವನ್ನು ಅರಿಯೆ, ರಾಜ್ಯವೆನ್ನುವುದು ಶತ್ರುಗಳನ್ನು ಜಯಿಸಿ ಸಂಪಾದಿಸತಕ್ಕದ್ದು, ದೀನರಾಗಿ ಬೇಡಿ ಪಡೆಯತಕ್ಕದ್ದಲ್ಲ, ಬೇಡಿದರೆ ಕೊಡ ತಕ್ಕದ್ದೂ ಅಲ್ಲ ಅವರಿಗೆ ರಾಜ್ಯಬೇಕಾದರೆ ಸಾಹಸವನ್ನು ಮಾಡಲಿ, ಶಾಂತಿ ಬೇಕಾದರೆ ಸಮಾಧಾನಚಿತ್ತರಾಗಿ ಋಷ್ಯಾಶ್ರಮವನ್ನು ಸೇರಿಕೊಳ್ಳಲಿ

ಕೃಷ್ಣ— ನೆಂಟರಿಷ್ಟರನ್ನು ವಂಚಿಸಬಾರದಯ್ಯ!

ದುರ್ಯೋ—ನಿನಗಿಂತ ಹಿರಿಯನೂ ರಾಜನೂ ಆಗಿದ್ದ ಕಂಸನಲ್ಲಿಯೇ ನಿನಗೆ ದಯವಿರಲಿಲ್ಲ, ಅಂಥದರಲ್ಲಿ ಈ ನಿತ್ಯಾಪಕಾರಿಗಳ ಮೇಲೆ ನನಗೆ ಹೇಗೆ ಬಂದೀತು?

ಕೃಷ್ಣ—ಅದು ನನ್ನ ದೋಷವೆಂದರಿಯಬೇಡ ನನ್ನ ತಾಯಿಯ ಹೊಟ್ಟೆಯುರಿಸಿದ್ದಕ್ಕಾಗಿಯೂ ನನ್ನ ಮುಪ್ಪಿನ ತಂದೆಯನ್ನು ಬಂಧನದಲ್ಲಿರಿಸಿದ್ದಕ್ಕಾಗಿಯೂ-ಅವನೇ ಮೃತ್ಯುವನ್ನು ತಂದುಕೊಂಡ ಅದಿರಲಿ, ದೋಷಗಳನ್ನು ಮರೆತು ನಿನ್ನ ಸೋದರರಲ್ಲಿ ಪ್ರೀತಿ ತೋರಿಸು. ಬಂಧುಪ್ರೇಮದಿಂದ ಇಹಪರಗಳೆರಡಕ್ಕೂ ಶ್ರೇಯಸ್ಸು.

ದುರ್ಯೋ–ಅಯ್ಯಾ, ಅವರು ದೇವತೆಗಳ ಮಕ್ಕಳು, ನಾವು ಮನುಷ್ಯರು. ಅವರಿಗೂ ನಮಗೂ ಹೇಗೆ ಬಂಧುತ್ವ ಸಂಭವಿಸೀತು ! ಈ ಪಿಷ್ಟಪೇಷಣವನ್ನು ಬಿಡು

ಇಲ್ಲಿಗೆ ಸಾಮೋಪಾಯ ಮುಗಿಯಿತು ಆದ್ದರಿಂದ ಕೃಷ್ಣನು, ಅರ್ಜುನನು ಶಿವನೊಡನೆ ಯುದ್ಧಮಾಡಿ ಪಾಶುಪತಾಸ್ತ್ರ ಪಡೆದದ್ದು, ಖಾಂಡವದಹನದಲ್ಲಿ ಶರಜಾಲವನ್ನು ಕಟ್ಟಿದ್ದು, ನಿವಾತಕವಚರನ್ನು ಸಂಹರಿಸಿದ್ದು, ಉತ್ತರಗೋಗ್ರಹಣದಲ್ಲಿ ಭೀಷ್ಮಾದಿ ಸಕಲ ಕೌರವರನ್ನೂ ಜಯಿಸಿದ್ದು, ಘೋಷಯಾತ್ರೆಯಲ್ಲಿ ಚಿತ್ರಸೇನನಿಂದ ದುರ್ಯೋಧನನನ್ನು ಬಿಡಿಸಿದ್ದು ಮುಂತಾದ ವೃತ್ತಾಂತಗಳನ್ನೆಲ್ಲಾ ಜ್ಞಾಪಿಸಿ "ದುರ್ಯೋಧನ, ನನ್ನ ಮಾತನ್ನು ಕೇಳಿ ಅರ್ಧ ರಾಜ್ಯವನ್ನು ಕೊಡು, ಇಲ್ಲದಿದ್ದರೆ ಪಾಂಡವರು ಸಮಸ್ತ ರಾಜ್ಯವನ್ನೂ ಕಿತ್ತುಕೊಳ್ಳುವರು" ಎಂದು ಭಯ ತೋರಿಸಿದನು ಆದರೆ ದುರ್ಯೋಧನನು ಒಂದು ಹುಲ್ಲು ಕಡ್ಡಿಯನ್ನೂ ಕೊಡಲು ಒಪ್ಪದೆ, ಕೃಷ್ಣನನ್ನು ಬೈಯುವುದಕ್ಕೆ ಹೋರಟನು ಕೃಷ್ಣನೂ ಇದರಿಂದ ಪ್ರಯೋಜನವಿಲ್ಲವೆಂದುಕೊಂಡು ಅವನನ್ನು ಬೈದು ಹೊರಟಾಗ ದುರ್ಯೋಧನನು ಅವನನ್ನು ಬಂಧಿಸಲು ಅಪ್ಪಣೆ ಮಾಡುವನು ಆದರೆ ದುಶ್ಶಾಸನಾದಿಗಳಾರಿಂದಲೂ ಅದು ಸಾಧ್ಯವಾಗುವುದಿಲ್ಲ ಆದ್ದರಿಂದ ಅವನೇ ಕಟ್ಟುವುದಕ್ಕೆ ಹೊರಡುವನು ಆಗ ಸ್ವಾಮಿಯು ವಿಶ್ವರೂಪವನ್ನು ತಾಳಿ ಅವನ ಪ್ರಯತ್ನವನ್ನು ವಿಫಲಮಾಡುವನು ಅವನನ್ನು ಕಟ್ಟುವುದಕ್ಕೆ ಬಂದ ರಾಜರು ತಾವು ತಾವೇ ಕಟ್ಟುಪಡೆದು ಬೀಳುವರು ಕೃಷ್ಣನು "ಆಗಲಿ, ಪಾಂಡವರ ಕೆಲಸವನ್ನು ನಾನೇ ಮಾಡುತ್ತೇನೆ" ಎಂದು ಸುದರ್ಶನವನ್ನು ನೆನೆಯುವನು ಅದು ಬಂದು ಸಮಯವನ್ನರಿತು "ಸ್ವಾಮಿ, ನೀನು ಅವತರಿಸಿರುವುದು ಭೂಭಾರವನ್ನು ನೀಗುವುದಕ್ಕೆ ಆದ್ದರಿಂದ ಈ ಕೆಲಸವು ಕಾರ್ಯಕಾರಿಯಾಗುವುದಿಲ್ಲ" ಎಂದು ಜ್ಞಾಪಿಸಲು ಕೃಷ್ಣನು ಶಾಂತನಾಗಿ ಅದನ್ನು ಬೀಳ್ಕೊಡುವನು ಕೃಷ್ಣ ಸಹಾಯಕ್ಕಾಗಿಯೇ ಅದೇ ಕಾಲದಲ್ಲಿ ಒಂದೊಂದಾಗಿ ಬಂದ ಶಾರ್ಙ್ಗ, ಕೌಮೋದಕಿ, ಪಾಂಚಜನ್ಯ, ನಂದಕ,—ಈ ಆಯುಧಗಳನ್ನೂ ಗರುಡನನ್ನೂ ಈಗ

ಕೆಲಸವಿಲ್ಲವೆಂದು ಹೇಳಿ ಸುದರ್ಶನವು ಹಿಂದಕ್ಕೆ ಕಳುಹಿಸುವುದು * ಧೃತರಾಷ್ಟ್ರನು ಈ ವೃತ್ತಾಂತವನ್ನು ಅರಿತು ಅರ್ಘ್ಯ ವಾದ್ಯಗಳಿಂದ ಸತ್ಕರಿಸಿ ಮಗನಿಗಾಗಿ ಕ್ಷಮೆ ಬೇಡಿ ಅವನನ್ನು ಶಾಂತಿಗೊಳಿಸುವನು

ಇದರಲ್ಲಿ ರಂಗದ ಮೇಲೆ ಬರತಕ್ಕ ಪ್ರಧಾನ ಪಾತ್ರಗಳು ಕೃಷ್ಣ ದುರ್ಯೋಧನರಿಬ್ಬರೇ—ಕಂಚುಕಿ, ಸುದರ್ಶನ, ಧೃತರಾಷ್ಟ್ರ ಇವರು ಕ್ಷಣಮಾತ್ರ ಬಂದು ಹೋಗುವರು ಇದರ ಕಥೆಯಲ್ಲಿ ಭೀಷ್ಮ ದ್ರೋಣರ ಆಪ್ತವಾಕ್ಯಗಳೂ, ವಿದುರನ ಭಕ್ತಿ ಆಗ್ರಹಗಳೂ, ಗಾಂಧಾರಿಯ ಪುತ್ರವಾತ್ಸಲ್ಯವೂ ಬರುವುದಿಲ್ಲ ಆದ್ದರಿಂದ ಕವಿಯ ಮತ್ತು ಪಾರಕ ಪ್ರೇಕ್ಷಕರ ದೃಷ್ಟಿಯೆಲ್ಲವೂ ಶ್ರೀಕೃಷ್ಣ ದುರ್ಯೋಧನರ ಮೇಲೆಯೇ ಕೇಂದ್ರೀಕರಿಸಲ್ಪಟ್ಟಿದೆ

ಇದರ ಭಾಷೆಯೆಲ್ಲಾ ಸಂಸ್ಕೃತ, ಪ್ರಾಕೃತದ ಒಂದು ಪಂಕ್ತಿಯೂ ಇಲ್ಲ

## ೩. ದೂತಘಟೋತ್ಕಚ

ಯುದ್ಧವು ಅನಿವಾರ್ಯವಾಯಿತು ಭೀಷ್ಮರು ಕಾದಿ ಶರಶಯ್ಯೆಯಲ್ಲಿ ಮಲಗಿದರು- ಹತ್ತು ದಿನದ ಭಾರತ ಯುದ್ಧವು ಅವರದಾಯಿತು, ಹನ್ನೊಂದನೆಯ ದಿನ ದ್ರೋಣರು ಸೇನಾಧಿಪತ್ಯದಲ್ಲಿ ಅಭಿಷಿಕ್ತರಾಗಿ ಯುದ್ಧಕ್ಕೆ ಆರಂಭಿಸಿದರು ಹದಿಮೂರನೆಯ ದಿನ, ಅತ್ತ ಅರ್ಜುನನು ಸಂಶಪ್ತಕರೊಡನೆ ಯುದ್ಧ ಮಾಡುತ್ತಿರಲು, ಇತ್ತ ಅವನ ವೀರಕುವರನಾದ ಅಭಿಮನ್ಯುವು ಭೀಮಾದಿಗಳಿಗೂ ಅಸಾಧ್ಯವಾದ ಪದ್ಮವ್ಯೂಹವನ್ನು ಭೇದಿಸಿ ನುಗ್ಗಿ ಅತಿರಥ ಮಹಾರಥರೊಡನೆ ಅಸಹಾಯನಾಗಿ ಕಾದಿ ವೀರಸ್ವರ್ಗವನ್ನು ಪಡೆದನು ದ್ರೋಣಪರ್ವದಲ್ಲಿ ಈ ವೀರಕಿಶೋರನ ಶೌರ್ಯವೇ ಅತ್ಯದ್ಭುತವಾದ ವೃತ್ತಾಂತ ದ್ರೋಣಾಚಾರ್ಯರ ಸಾಹಸವೂ ಅಶ್ವತ್ಥಾಮನ ಆಗ್ರಹಾವೇಶಗಳೂ

---

* ಈ ಆಯುಧಗಳ ವರ್ಣನೆಯು ಪ್ರಕ್ಷಿಪ್ತವೆಂದು ಕೆಲವರು ಅಭಿಪ್ರಾಯ ಪಡುತ್ತಾರೆ—(ವುಲ್ನರ್ ಮತ್ತು ಸರೂಪರ ಟಿಪ್ಪಣಿಯನ್ನು ನೋಡಿ)

ಅದರ ಮುಂದಲ್ಲ ಆದ್ದರಿಂದ ಇದನ್ನು ಭೀಷ್ಮ ದ್ರೋಣಪರ್ವಗಳ ಸಾರವಾಗಿ ಭಾಸನು ದೂತಘಟೋತ್ಕಚದಲ್ಲಿ ಪ್ರತಿಪಾದಿಸಿರಬಹುದು —ಎಂದರೆ ಅಭಿಮನ್ಯುವಿನ ಯುದ್ಧವನ್ನು ರಂಗದಲ್ಲಿ ತೋರಿಸಿಲ್ಲ ನಾಟಕವು ಆರಂಭವಾಗುವಾಗ ಅಭಿಮನ್ಯುವು ಆಗಲೇ ಹತನಾಗಿ ದ್ದಾನೆ ಅವನು ಸತ್ತಬಗೆಯನ್ನು ಕೇಳಿದಾಗ ಧೃತರಾಷ್ಟ್ರನು ನೊಂದು ಕೊಂಡದ್ದೂ, ಮರುದಿನ ಸೂರ್ಯಾಸ್ತದೊಳಗಾಗಿ ಸೈಂಧವನನ್ನು ಕೊಲ್ಲುತ್ತೇನೆಂದು ಅರ್ಜುನನು ಮಾಡಿದ ಪ್ರತಿಜ್ಞೆಯನ್ನು ಘಟೋತ್ಕ ಚನು ಕೌರವರಿಗೆ ತಿಳಿಸಿದ್ದೂ ವಿಸ್ತೃತವಾದ ವಿಷಯ ಆದ್ದರಿಂದ ನಾಟಕದ ಪೂರ್ವಾರ್ಧದಲ್ಲಿ ಧೃತರಾಷ್ಟ್ರನ ಚಿತ್ರವೂ ಉತ್ತರಾರ್ಧದಲ್ಲಿ ಘಟೋತ್ಕಚನ ಪಾತ್ರವೂ ಚೆನ್ನಾಗಿ ಚಿತ್ರಿತವಾಗಿವೆ

ಅಭಿಮನ್ಯುವು ಚಿಕ್ಕವನಾದರೂ ಅಸಹಾಯ ಶೂರ, ಏಕಾಕಿ ಯಾಗಿದ್ದ ಅವನೊಬ್ಬನನ್ನು ತಡೆದು ಕೊಲ್ಲಬೇಕಾದರೆ ಕೌರವರು ಮಹಾಸಾಹಸಮಾಡಬೇಕಾಯಿತು, ನೂರಾರು ರಾಜರು ಸಾಯಬೇಕಾ ಯಿತು ಇಂಥ ಸಾಹಸ ಮಾಡಿದೆವೆಂದು ದುರ್ಯೋಧನಾದಿಗಳು ಗರ್ವಿತರಾದರೂ ಧೃತರಾಷ್ಟ್ರನಿಗೆ ಮಾತ್ರ ಅದು "ವಂಶಕ್ಷಯ" ಕಾರಕ ವಾದ "ಶಿಶುವಧ"ವಾಗಿ ತೋರಿತು ತನ್ನ ಏಕಮಾತ್ರ ಪುತ್ರಿ ಯಾಗಿ, ನೂರು ಜನ ಗಂಡುಮಕ್ಕಳಿಗಿಂತ ಅತಿಶಯವಾದ ಪ್ರೇಮದಲ್ಲಿ ಬೆಳೆದ ದುಶ್ಶಲೆಯ ವೈಧವ್ಯವು ನಿಯತವಾಗಿ ಕಂಡಿತು (ಅವಳೂ ಅದು ನಿಯತವೆಂದೇ ತಿಳಿದು ಗಂಡ ಬದುಕಿರುವಾಗಲೇ ಉತ್ತರೆಯಂತೆ ಸಹಗಮನ ವೇಷವನ್ನು ಧರಿಸಲು ಸಿದ್ಧಳಾಗುವಳು) ಆದ್ದರಿಂದ ದುರ್ಯೋಧನಾದಿಗಳು ಬಂದು ನಮಸ್ಕರಿಸಿದರೂ ಆವನಿಗೆ ಆಶೀರ್ವದಿ ಸುವುದಕ್ಕೆ ಮನಸ್ಸೂ ಬಾಯೂ ಬಾರವು ಅಭಿಮನ್ಯುವಿನ ಕೊಲೆ ಗಾಗಿ ಕೃಷ್ಣಾರ್ಜುನರ ತೀವ್ರ ಕೋಪಕ್ಕೆ ಈಡಾದ ಅವರನ್ನು ಆಶೀ ರ್ವದಿಸಿ ಏನು ಪ್ರಯೋಜನ? ಅದು ಫಲಿಸುವ ಸಂಭವವುಂಟೆ? ಅರ್ಜುನನನ್ನು ನಿರೋಧಿಸಲು ಕರ್ಣನಿರುವನೆಂದರೆ ಅವನು ಅರ್ಧ ರಥ, ಅಲ್ಲದೆ ಕವಚವನ್ನು ಇಂದ್ರನಿಗೆ ಕೊಟ್ಟೂ, ಅಸ್ತ್ರಗಳನ್ನು ವಿಫಲ ಮಾಡಿಕೊಂಡೂ ಪೊಳ್ಳಾಗಿ ಉಳಿತಿರುವನು, ಅರ್ಜುನನಾದರೋ

ಇಂದ್ರಾಗ್ನಿ ರುದ್ರರಿಂದ ಅಸ್ತ್ರಗಳನ್ನು ಪಡೆದು ತೇಜಸ್ವಿಯಾಗಿರುವನು

ಅವನು ಹೆದರಿದಂತೆಯೇ, ಅರ್ಜುನನು ಅಭಿಮನ್ಯುವನ್ನು ತಡೆದ ಜಯದ್ರಥ (ಸೈಂಧವ)ನನ್ನು ಮರುದಿನ ಸೂರ್ಯಾಸ್ತವಾಗುವುದರೊಳಗಾಗಿ ಕೊಲ್ಲುವೆನೆಂದು ಪ್ರತಿಜ್ಞೆಮಾಡಿದನು ಈ ಪ್ರತಿಜ್ಞೆಯನ್ನು ಘಟೋತ್ಕಚನು ಕೃಷ್ಣನ ಆಜ್ಞೆಯಂತೆ, ಕೌರವರಿಗೆ ತಿಳಿಸಬೇಕೆಂದು ಬರಲು ಅವರ ಶಿಬಿರದಲ್ಲಿ ಧೃತರಾಷ್ಟ್ರನನ್ನು ಕಂಡನು ಘಟೋತ್ಕಚನು ಅವನನ್ನು ವರ್ಣಿಸಿರುವ ರೀತಿ ಇದು —

"ಈತನದು ಎಂಥ ಲಲಿತ ಗಂಭೀರಾಕೃತಿ ! ಮುದುಕನಾದರೂ ಮೈಕೈಗಳಲ್ಲಿ ಸುಕ್ಕುಗಳಿಲ್ಲ ಧೀರರಾದ ನೂರು ಮಕ್ಕಳ ತಂದೆಯಾಗಿರುವುದರಿಂದ ಆತ್ಮವಿಶ್ವಾಸಪೂರ್ಣವಾದ ಮುಖಚಹರೆ ದೇವತೆಗಳು ನಮ್ಮ ಸ್ವರ್ಗವನ್ನು ಈತನಿಂದ ಕಾಪಾಡಿಕೊಳ್ಳುವುದು ಹೇಗೆಂದು ಎಲ್ಲೋ ಹೆದರಿ ಇವನನ್ನು ಅಂಧನಾಗಿ ಸೃಷ್ಟಿಸಿದರೆಂದು ತೋರುತ್ತದೆ ! "

ಘಟೋತ್ಕಚನದು ದುರ್ಯೋಧನಾದಿಗಳ ದೌರ್ಜನ್ಯ ದುರ್ಬುದ್ಧಿಗಳಿಗೆ ತೀರ ವಿರುದ್ಧಗುಣ ಮಧ್ಯಮವ್ಯಾಯೋಗದಲ್ಲಿ ಪರಿಚಿತವಾದ ಅವನ ಪಿತೃಗುರುಭಕ್ತಿಯೇ ಇಲ್ಲಿಯೂ ಕಂಡುಬರುತ್ತದೆ. ಮುದುಕನೂ ಕುರುಡನೂ ಆದ ಧೃತರಾಷ್ಟ್ರನಲ್ಲಿ ತೋರಿದ ಭಕ್ತಿಯೇ ಇದಕ್ಕೆ ಸೂಚಕ ಅವನು ಸಮುದಾಚಾರವನ್ನು ಎಂದಿಗೂ ಮೀರತಕ್ಕವನಲ್ಲ ಕೊನೆಗೆ ಧೃತರಾಷ್ಟ್ರನನ್ನು ನಮಸ್ಕರಿಸುವುದಕ್ಕೆಂದು ಹೋಗಿ, "ಅಭಿವಾದಯೇ ಘಟೋತ್ಕ—" ಎಂದು "ಅಲ್ಲ ಅಲ್ಲ, ಯುಧಿಷ್ಠಿರ ಮುಂತಾದ ಹಿರಿಯರು ನಮಸ್ಕಾರ ಮಾಡುತ್ತಾರೆ ಆಮೇಲೆ ನಾನು ಘಟೋತ್ಕಚ ನಮಸ್ಕಾರಮಾಡುತ್ತೇನೆ" ಎನ್ನುತ್ತಾನೆ. ಅನಂತರ ಶ್ರೀಕೃಷ್ಣನು ಹೇಳಿಕಳುಹಿಸಿದ ಸಂದೇಶ ಕೃಷ್ಣನ ಹೆಸರು ಕೇಳಿದ ಕ್ಷಣವೇ ಧೃತರಾಷ್ಟ್ರನು ಮಹಾಪ್ರಸಾದವನ್ನು ಸ್ವೀಕರಿಸುವಂತೆ ಭಕ್ತಿಪೂರ್ವಕವಾಗಿ ಧಟ್ಟನೆ ಎದ್ದು ನಿಂತು "ಭಗವಂತನಾದ ಚಕ್ರಾಯುಧನು ಏನು ಆಜ್ಞೆಮಾಡಿವನು ?" ಎಂದು ಕೇಳುತ್ತಾನೆ. ಇದು ದುರ್ಯೋಧನ ದುಶ್ಶಾಸನ ಶಕುನಿಗಳಿಗೆ ಸೈರಿಸುವುದಿಲ್ಲ ದುಶ್ಶಾಸ

ೂ " ರಾಕ್ಷಸ ಸ್ವಭಾವ " ದವರೆಂದೂ ರಾಕ್ಷಸಿಯ ಮಗನೆಂದು
ಕ್ಕೆ ಹೆದರುವುದಿಲ್ಲವೆಂದೂ ಘಟೋತ್ಕಚನನ್ನು ಕೆರಳಿಸು
ವನು ಘಟೋತ್ಕಚನು ಅವರವರ ಯೋಗ್ಯತೆಗೆ ತಕ್ಕಂತೆ ಉತ್ತರ ಕೊಟ್ಟು ಕರುಳು ಕರುಳಿಗೆ ನೀರು ಬಿಡುವನು .—

"ಅಯ್ಯೋ ಎಲ್ಲಾದರೂ ಉಂಟೆ ? ನೀವು ರಾಕ್ಷಸರಿಗಿಂತಲೂ ಹೆಚ್ಚು ಕ್ರೂರರು ! ರಾಕ್ಷಸರು ಅರಗಿನ ಮನೆಯಲ್ಲಿ ಅಣ್ಣತಮ್ಮಂದಿರನ್ನು ಮಲಗಿಸಿ ಸುಡುವುದಿಲ್ಲ; ಅತ್ತಿಗೆಯನ್ನು ಮುಂದಲೆ ಹಿಡಿದು ಎಳೆಯುವುದಿಲ್ಲ, ಯುದ್ಧದಲ್ಲಿ ಮಕ್ಕಳನ್ನು ಕೊಂದು ಅದನ್ನು ಹೇಳಿಕೊಳ್ಳುವುದಿಲ್ಲ, ವಿಕಾರಸ್ವರೂಪರಾದರೂ ದಯಾದಾಕ್ಷಿಣ್ಯ ವರ್ಜಿತರಲ್ಲ—"

ದುರ್ಯೋಧನನು ಈ ಮಾತು ಕೇಳಿ ರೇಗಿ, "ನೀನೇನು ದೌತ್ಯಕ್ಕೆ ಬಂದಿದ್ದೀಯೋ ಯುದ್ಧಕ್ಕೆ ಬಂದಿದ್ದೀಯೋ ? ದೌತ್ಯಕ್ಕೆ ಬಂದಿದ್ದರೆ ಉತ್ತರವನ್ನು ತೆಗೆದುಕೊಂಡು ಹೋಗು ! ನಾವು ದೂತರನ್ನು ಕೊಲ್ಲುವವರಲ್ಲ. " ಎಂದು ಹೆದರಿಸುವನು ಘಟೋತ್ಕಚನು, " ಏನು, ನಾನು ದೂತನೆಂದು ಬೆದರಿಸುತ್ತೀರೋ ? ನಾನು ದೂತನೇ ಅಲ್ಲ ! ನೀವೆಲ್ಲರೂ ಸೇರಿ ಏನುಮಾಡಬಲ್ಲರಿ ? ಹೊಡೆಯಿರಿ ! ಇಲ್ಲಿರುವನೇನು ಬಿಲ್ಲಿನ ಹೆದೆ ಕತ್ತರಿಸಿ ಹೋಗಿ ದುರ್ಬಲನಾದ ಅಭಿಮನ್ಯುವಲ್ಲ ನನಗೂ ಬಹು ದಿನದಿಂದ ಈ ಆಶೆಯಿತ್ತು ! ಬರಲಿ ಯಾವ ಗಂಡಸು ಬರುತ್ತಾನೆಯೋ, ಯಮಾಲಯಕ್ಕೆ ಹೋಗಬೇಕೆಂದಿರುವವನು ! " ಎಂದು ಸಿಂಹನಾದ ಮಾಡಿ ಹಲ್ಲುಮಿಡಿಕಚ್ಚಿ ಮುಷ್ಟಿಯನ್ನು ಬಿಗಿಹಿಡಿದು ಯಮದೂತನಂತೆ ನಿಲ್ಲುವನು ಧೃತರಾಷ್ಟ್ರನ ಮಾತಿನಿಂದ ಅವನ ಕೋಪ ಇಳಿಯುವುದು " ನಾಳೆ ದಿನ ಸೂರ್ಯೋದಯದೊಡನೆ ನಿಮ್ಮ ಭಾಗದ ಯಮನು ಪಾಂಡವರೂಪಧಾರಿಯಾಗಿ ಬರುತ್ತಾನೆ . . . . . . " ಎಂದು ಕಡೆಯ ಸಂದೇಶವನ್ನು ಹೇಳಿ ಘಟೋತ್ಕಚನು ಹೊರಟು ಹೋಗುವನು

ಈ ನಾಟಕದ ವಸ್ತುವು ಪೂರ್ತಿಯಾಗಿ ಕವಿ ಕಲ್ಪಿತವಾಗಿ ತೋರುತ್ತದೆ.

## ೪. ಕರ್ಣಭಾರ

ಶ್ರೀಕೃಷ್ಣನ ದಯೆಯಿಂದ ಅರ್ಜುನನ ಪ್ರತಿಜ್ಞೆಯು ಕೈಗೂಡಿತು, ಅವನ ತಂತ್ರದಿಂದಲೇ ಕುಮಾರ ಘಟೋತ್ಕಚನು ಹತನಾಗಿ ತನ್ನ ಆಯುಸ್ಸನ್ನು ಅರ್ಜುನನಿಗೆ ಧಾರೆಯೆರೆದನು, ದ್ರೋಣಾಚಾರ್ಯರು ಸ್ವರ್ಗಸ್ಥರಾದರು, ಅಶ್ವತ್ಥಾಮನ ಆಗ್ರಹವು ಶಾಂತವಾಯಿತು ಹದಿನಾರನೆಯ ದಿನ ಕರ್ಣನು ಸೇನಾನಾಯಕನಾಗಿ ಶಲ್ಯನ ಸಾರಥ್ಯದಲ್ಲಿ ಯುದ್ಧಕ್ಕೆ ಮೊದಲು ಮಾಡಿದನು ಕರ್ಣನು ಪಾಂಡವರಿಗೆ ಜನ್ಮದಲ್ಲಿ ಮಾತ್ರ ಅಗ್ರಜನಲ್ಲ, ಶೌರ್ಯೌದಾರ್ಯಾದಿ ಸಕಲ ಸದ್ಗುಣಗಳಲ್ಲಿಯೂ ಅಗ್ರಜ, ಆದರೂ ದೈವಬಲವಿಲ್ಲದ್ದರಿಂದ ಅವನ ಗುಣವೇ ಅವನಿಗೆ ಸೇಣಾಯಿತು, ಪಾಂಡವರು ಬದುಕಿದರು ಹೀಗೆ ತನ್ನ ವೀರೋದಾರಗುಣವೇ ತನಗೆ ಶೂಲವಾದ ಅಂಶವನ್ನು ಭಾಸನು "ಕರ್ಣಭಾರ" ದಲ್ಲಿ ಚಿತ್ರಿಸಿದ್ದಾನೆ ಇದರಲ್ಲಿ ಕೃಷ್ಣಾರ್ಜುನರ ತಂತ್ರ ಕೌಶಲ್ಯಗಳ ಮೇಲೆ ನಮ್ಮ ಮನಸ್ಸು ಹೋಗುವಹಾಗಿಲ್ಲ, ಏಕೆಂದರೆ, ಇಲ್ಲಿ ಆ ಪಾತ್ರಗಳ ಪ್ರವೇಶವೇ ಇಲ್ಲ ನಾಟಕದ ತುಂಬ ಕರ್ಣನೇ! ಶಲ್ಯನು ಬಂದರೆ ಅವನು ಸಾರಥಿ, ಇಂದ್ರನು ಯಾಚಕ ಬ್ರಾಹ್ಮಣ. ಕಥೆಯು ಕರ್ಣನ ಸಾವಿನವರೆಗೆ ಹೋಗುವುದಿಲ್ಲ, ಅಲ್ಲಿ ಧರ್ಮಾಧರ್ಮ ಸಮಸ್ಯೆಯನ್ನು ಹೂಡುವುದಿಲ್ಲ ಅವನು ಅಂಧಕಾರಮಯವಾದ ಘೋರರಾತ್ರಿಯಲ್ಲಿ, ಆಕಾಶದ ತುಂಬ ಸಣ್ಣಪುಟ್ಟ ನಕ್ಷತ್ರಗಳು ನಿಶ್ಚಲವಾಗಿ ನಿಂತು ನೋಡುತ್ತಿರಲು, ರಭಸದಿಂದ ನುಗ್ಗುವ ಉಜ್ವಲವಾದ ಮಹಾ ಉಲ್ಕದಂತೆ ಯುದ್ಧರಂಗವನ್ನೆಲ್ಲಾ ಬೆಳಗುತ್ತ ಅರ್ಜುನನ ಕಡೆಗೆ ನುಗ್ಗುತ್ತಿರುವುದು ಮಾತ್ರ ಕಂಡುಬರುತ್ತದೆ. ಉಲ್ಕೆಯು ತೇಜೋಹೀನವಾಗಿ ಭೂಗತವಾಗುವುದು ಕಾಣದು, ವಾಲಿ ದಶರಥ ದುರ್ಯೋಧನರ ಸಾವನ್ನು ರಂಗದಲ್ಲಿ ತಂದರೂ, ಅಭಿಮನ್ಯು ಘಟೋತ್ಕಚ ಕರ್ಣ ಮುಂತಾದ ವೀರಪ್ರಪಂಚದ ಸಾತ್ವಿಕ ದಿವ್ಯಜ್ಯೋತಿಗಳನ್ನು ರಣರಂಗದಲ್ಲಿ ನಿಷ್ಕರುಣವಾಗಿ ಕಡಿದು ಬೀಸಾಡುವುದು ಭಾಸನ ಮನೋವೃತ್ತಿಗೆ ಸಲ್ಲದುದೆಂದು ತೋರುತ್ತದೆ ಕ್ಷತ್ರಿಯನಲ್ಲಿರಬೇಕಾದದ್ದು ಶೌರ್ಯ, ಔದಾರ್ಯ ಇವು ಕರ್ಣನಲ್ಲಿ ಅಪರಿಮಿತವಾಗಿದ್ದುವು. ಇವುಗಳ ಅತಿ-

ಪ್ರಮಾಣವೇ ಅವಗುಣವಾಗಿ, ಅಪ್ರತಿಹತ ಯೋಧನಾಗಿದ್ದರೂ ಪ್ರತಿಕೂಲ ದೈವನಾದ ಕರ್ಣನ ವೀರ ಜೀವನವು ಶೋಕರಸದಿಂದ ಬಿರಿಯುತ್ತಿರುವ ಘೋರ ರುದ್ರನಾಟಕವಾಯಿತು ಈ ಎರಡು ಗುಣಗಳ ಗಟ್ಟಿಯನ್ನೂ ಕವಿಯು ಕರಾಳ ಕುರುಕ್ಷೇತ್ರದ ಕಾಲಮುಖವೆಂಬ ಒರೆಗಲ್ಲಿನ ಮೇಲೆ ಉಜ್ಜಿ ಒಂದೊಂದು ಗೆರೆಯನ್ನು ಮಾತ್ರ ತೋರಿಸಿದ್ದಾನೆ ಅದರ ಬಣ್ಣದಿಂದ ಗಟ್ಟಿಯ ಬಣ್ಣವನ್ನು ಊಹಿಸಿಕೊಳ್ಳಬೇಕು

ಕರ್ಣನು ಕುರುಕ್ಷೇತ್ರದಲ್ಲಿ ಸಂಧಿಸಿದ್ದ ಸೇನಾಮಹಾರ್ಣವವನ್ನು ಸೇರುವ ಹೊತ್ತಿಗೆ, ದಾರಿಯುದ್ಧಕ್ಕೂ ದೊಡ್ಡ ದೊಡ್ಡ ಕಾಲುವೆಗಳಿಂದ ಸಾವಿರಾರು ಎಕರೆ ಭೂಮಿಗೆ ಜೀವದಾನಮಾಡಿ ಆಕಾರಕ್ಕೆ ಮಾತ್ರ ನದಿಯಾಗಿ ಸಮುದ್ರವನ್ನು ಸೇರುವ ಪ್ರವಾಹದಂತಾಗಿದ್ದಾನೆ. ಪರಶುರಾಮ, ಕುಂತಿ, ಇಂದ್ರ ಇವರೆಲ್ಲರೂ ಅವನ ಜೀವವನ್ನು ಒಬ್ಬೊಬ್ಬರಾಗಿ ಹೀರಿದ್ದರು ರಣರಂಗದಲ್ಲಿ ಅವನಿಗೆ ಉಳಿದಿದ್ದದ್ದು ಪ್ರಾಣರತ್ನಗಳಂತಿದ್ದ ಕರ್ಣಕುಂಡಲಗಳು, ಮತ್ತು ಜೀವರಸದಂತೆ ಹೃದಯದಲ್ಲಿ ಹುದುಗಿದ್ದ ಅಮೃತಕಲಶ ಇವುಗಳನ್ನೂ ಕೃಷ್ಣನು ಕೊನೆಗಾಲಕ್ಕೆ ಕಿತ್ತುಕೊಂಡು ಅರ್ಜುನನ ಪ್ರತಾಪಕ್ಕೆ ಲಕ್ಷ್ಯವಾಗಿ ಕರ್ಣನ ದೇಹ ಪಂಜರವನ್ನು ಬಿಡುವನು ಭಾಸಕವಿಯು ವಿಷ್ಣುಭಕ್ತನೆಂದು ತೋರುತ್ತದೆ. (ನಾಟಕಗಳ ಮಂಗಳಶ್ಲೋಕದಲ್ಲಿ ಪ್ರಾಯಿಕವಾಗಿ ಬರುವ ವಿಷ್ಣುಸ್ತೋತ್ರವನ್ನು ನೋಡಿ) ಆದ್ದರಿಂದ ಕುಂಡಲಾಪಹರಣವನ್ನು ಪುತ್ರಪಕ್ಷಪಾತಿಯಾದ ಇಂದ್ರನ ತಲೆಗೇ ಕಟ್ಟಿದ್ದಾನೆ, ಅಮೃತ ಕಲಶಕ್ಕಾಗಿ ಅವನ ಎದೆಯನ್ನು ಇರಿಯಿಸಿಲ್ಲ, ರಥಕ್ಕೆ ಹೆಗಲು ಕೊಟ್ಟು ಎತ್ತುತ್ತಿರುವಾಗ ರಣಧರ್ಮವನ್ನು ಚಿಂತಿಸಿ ಹಿಂದೆಗೆದ ಅರ್ಜುನನಿಂದ ನಿರ್ಬಂಧವಾಗಿ ಅವನನ್ನು ಕೊಲ್ಲಿಸಿಲ್ಲ —

ನಾಟಕದ ಮೊದಲನೆಯ ಭಾಗದಲ್ಲಿ, ಕರ್ಣನು ಸಾರಥಿಯಾದ ಶಲ್ಯನೊಡನೆ ಮಾತನಾಡುತ್ತ, ಹಿಂದೆ ತಾನು ಪರಶುರಾಮರಲ್ಲಿ ಸುಳ್ಳು ಹೇಳಿ ಅಸ್ತ್ರಶಿಕ್ಷಣವನ್ನು ಪಡೆದದ್ದನ್ನೂ, ಸುಳ್ಳು ಹೇಳಿದ್ದಕ್ಕಾಗಿ "ಇವು ನಿನಗೆ ಸಮಯದಲ್ಲಿ ವಿಫಲವಾಗಲಿ!" ಎಂದು ಅವರು ಕೊಟ್ಟ ಶಾಪವನ್ನೂ ತಿಳಿಸುವನು. ಇದನ್ನು ನೆನೆದು ಅಸ್ತ್ರಗಳನ್ನು ಪರೀಕ್ಷಿಸಿ

ನೋಡಲು ಅವು ನಿರ್ವೀರ್ಯಗಳಾಗಿವೆ! ಕುದುರೆಗಳು ಮುಂಕಾಗಿ ಮುಗ್ಗರಿಸುತ್ತಿವೆ, ಆನೆಗಳು ಹಿಂಜರಿಯುತ್ತಿವೆ, ಶಂಖ ದುಂದುಭಿಗಳು ಮೊಳಗಲಾರದೆ ಹೋಗಿವೆ ಆದರೂ ಅವನು ಹಿಂದೆಗೆಯುವುದಿಲ್ಲ. "ಸತ್ತರೆ ಸ್ವರ್ಗವಾಯಿತು, ಗೆದ್ದರೆ ಕೀರ್ತಿಬಂತು! ಗೋಬ್ರಾಹ್ಮಣರಿಗೆ ಅಕ್ಷಯವಾಗಲಿ! ಪತಿವ್ರತೆಯರಿಗೆ ಅಕ್ಷಯವಾಗಲಿ! ರಣದಲ್ಲಿ ಹಿಮ್ಮೆಟ್ಟದ ಯೋಧರಿಗೆ ಅಕ್ಷಯವಾಗಲಿ! ಕಾಲ ಒದಗಿಬಂದಿರುವ ನನಗೆ ಅಕ್ಷಯವಾಗಲಿ!" ಎಂದು ನುಗ್ಗುವನು

ಆಗ ಇಂದ್ರನು, "ಕರ್ಣ! ಒಂದು ದೊಡ್ಡ ಭಿಕ್ಷವನ್ನು ಬೇಡುತ್ತೇನೆ!" ಎಂದುಕೊಂಡು ಬ್ರಾಹ್ಮಣವೇಷದಲ್ಲಿ ಬಂದನು (ಇಲ್ಲಿಂದ ಎರಡನೆಯ ಭಾಗ) ಕರ್ಣನು ನಮಸ್ಕರಿಸುವನು, ನಮಸ್ಕಾರ ಮಾಡಿದವನಿಗೆ ಆಶೀರ್ವಾದಮಾಡಬೇಕು "ದೀರ್ಘಾಯುಷ್ಮಾನ್ ಭವ" ಎಂದು ಆಶೀರ್ವದಿಸುವುದು ಸಂಪ್ರದಾಯ ಹಾಗೆ ಆಶೀರ್ವದಿಸಿದರೆ ಹಾಗೆ ಆಗಿಬಿಟ್ಟೀತು ಅದು ಇಷ್ಟವಿಲ್ಲ, ಆಶೀರ್ವಾದ ಮಾಡದೆ ಸುಮ್ಮನೆ ಇದ್ದುಬಿಟ್ಟರೆ ತನ್ನನ್ನು ಮೂಢನೆಂದು ತಿಳಿದುಕೊಳ್ಳುತ್ತಾನೆ ಆದ್ದರಿಂದ ಅವನ ಆಯುಸ್ಸಿನ ಪ್ರಸ್ತಾಪವನ್ನೇ ಬಿಟ್ಟು, "ಅಯ್ಯಾ ಕರ್ಣ! ಸೂರ್ಯನಂತೆ ಇಂದ್ರನಂತೆ ಹಿಮವಂತನಂತೆ ನೆಲಸಲಿ ನಿನ್ನ ಯಶಸ್ಸು!" ಎಂದನು. ಕರ್ಣನಿಗೆ ಇದು ಗೊತ್ತಾಗದೆ ಹೋಗುವುದಿಲ್ಲ ಆದರೂ ಅವನು ಮಾತ್ರ ಹಿಂದೆಗೆಯಡೆ "ದೀರ್ಘಾಯುಸ್ಸಿನಿಂದ ಆಗುವುದೇನು? ಇದೇ ಶ್ರೇಯಸ್ಸು" ಎಂದುಕೊಂಡು, "ಸ್ವಾಮಿ, ತಮಗೇನು ಬೇಕು? ಏನು ಕೊಡಲಿ?" ಎಂದು ಕೇಳಿದನು ಇಂಥ ವಸ್ತುವು ಬೇಕೆಂದು ಇಂದ್ರನು ಹೇಳುವುದಿಲ್ಲ. ಆದರೆ ಕರ್ಣನು ಒಂದಾದಮೇಲೆ ಒಂದನ್ನು ಹೇಳಿ, ಇದು ಬೇಕೇ ಇದು ಬೇಕೇ, ಎಂದು ಪ್ರಶ್ನಿಸುವನು. ಕೇಳುವವನ ಆಶೆಗೆ ಪಾರವಿಲ್ಲದುದುಂಟು, ಆದರೆ ಇಲ್ಲಿ ಕೊಡುವವನ ದಾನಕ್ಕೆ ಪಾರವಿಲ್ಲ, ಅವನು ಯಾವುದನ್ನು ಕೊಡಲಿ ಎಂದು ಯೋಚಿಸುವ ಹಾಗಿಲ್ಲ ಇದನ್ನು ಕವಿ ಚೆನ್ನಾಗಿ ಚಿತ್ರಿಸಿದ್ದಾನೆ.

ಇಂದ್ರ—ಒಂದು ದೊಡ್ಡ ಭಿಕ್ಷವನ್ನು ಬೇಡುತ್ತೇನೆ.

ಕರ್ಣ—ದೊಡ್ಡ ಭಿಕ್ಷವನ್ನೇ ಕೊಡುತ್ತೇನೆ, ಸ್ವರ್ಣಾಲಂಕೃತವಾದ ಸಾವಿರ ಗೋವುಗಳನ್ನು ಕೊಡುತ್ತೇನೆ.

ಇಂದ್ರ—ಗೋಸಹಸ್ರವೇ ? ಒಂದುಗಳಿಗೆ ಹಾಲುಕುಡಿದೇನು ಅಷ್ಟೇಯೆ! ಬೇಡ ಕರ್ಣ, ಬೇಡ !

ಕರ್ಣ—ಬೇಡವೇ ? ಸೂರ್ಯಾಶ್ವಗಳಂತೆ ವೇಗಶಾಲಿಗಳಾದ ಸಾವಿರಾರು ಕುದುರೆಗಳನ್ನು ಕೊಡುತ್ತೇನೆ.

ಇಂದ್ರ—ಕುದುರೆಯೆ ? ಒಂದುಗಳಿಗೆ ಸವಾರಿಮಾಡಿಯೇನು ಅಷ್ಟೇಯೆ ! ಬೇಡ ಕರ್ಣ, ಬೇಡ !

ಕರ್ಣ—ಬೇಡವೇ ! ಹಾಗಾದರೆ ಮೇಘಗಂಭೀರಘೋಷವುಳ್ಳ ಗಜಸಮೂಹವನ್ನು ಕೊಡುತ್ತೇನೆ.

ಇಂದ್ರ—ಆನೆಯೇ ? ಒಂದುಗಳಿಗೆ ಅದರಮೇಲೆ ಕೂತುಕೊಂಡೇನು ಅಷ್ಟೇಯೆ ! ಬೇಡ ಕರ್ಣ, ಬೇಡ !

ಕರ್ಣ—ಬೇಡವೇ ? ಹೋಗಲಿ, ಯಥೇಚ್ಛವಾದ ಬಂಗಾರವನ್ನು ಕೊಡುತ್ತೇನೆ.

ಇಂದ್ರ—ಹುಂ, ತೆಗೆದುಕೊಂಡು ಹೋಗುತ್ತೇನೆ (ಸ್ವಲ್ಪ ದೂರ ಹೋಗಿ ಬಂದು) ಬೇಡ ಕರ್ಣ, ಬೇಡ

ಕರ್ಣ—ಹಾಗಾದರೆ ಭೂಮಿಯನ್ನು ಗೆದ್ದು ಕೊಡುತ್ತೇನೆ

ಇಂದ್ರ—ಭೂಮಿಯನ್ನು ಇಟ್ಟುಕೊಂಡು ಏನುಮಾಡಲಿ ?

ಕರ್ಣ—ಹಾಗಾದರೆ ಅಗ್ನಿಷ್ಟೋಮಫಲವನ್ನು ಕೊಡುತ್ತೇನೆ.

ಇಂದ್ರ—ಅಗ್ನಿಷ್ಟೋಮಫಲದಿಂದೇನಾಗುತ್ತದೆ ?

ಕರ್ಣ—ಹಾಗಾದರೆ ನನ್ನ ತಲೆಯನ್ನು ಕೊಡುತ್ತೇನೆ.

ಇಂದ್ರ—ಅಯ್ಯೋ ! ಅಯ್ಯೋ !!

ಕರ್ಣ—ಹೆದರಬೇಡಿ, ಹೆದರಬೇಡಿ ಮತ್ತೂ ಒಂದಿದೆ. ತಮಗೆ ಬೇಕಾದರೆ, ದೇವಾಸುರರ ಶಸ್ತ್ರಾಸ್ತ್ರಗಳಿಗೂ ದುರ್ಭೇದ್ಯವಾದ ಈ ಕವಚ ಕುಂಡಲಗಳನ್ನು ಕೊಡುತ್ತೇನೆ.

ಇಂದ್ರ—ಕೊಡು ! ಕೊಡು !!

ಕರ್ಣ—ಇದೇ ಈತನಿಗೆ ಬೇಕಾಗಿದ್ದದ್ದು (ಸ್ವಗತ) ಇದು ಬಹು ಕಪಟ ಬುದ್ಧಿಯಾದ ಕೃಷ್ಣನ ಉಪಾಯವಾಗಿರಬಹುದೇ? ಆಗಿದ್ದರೆ ಆಗಿರಲಿ! ಮಾಡಿದ್ದಕ್ಕೆ ಚಿಂತಿಸಬಾರದು (ಪ್ರಕಾಶ) ಇಗೋ ತೆಗೆದುಕೊಳ್ಳಿ!

ಶಲ್ಯನು ಅಡ್ಡಿಮಾಡುವನು ಆದರೆ ಕರ್ಣನು ನೀಡಿದ ಕೈಯನ್ನು ಹಿಂದೆಗೆಯುವುದಿಲ್ಲ. ಇಂದ್ರನು ತನ್ನನ್ನು ಸೋಲಿಸುವುದಕ್ಕೆ ಬಂದು ಅವನೇ ಸೋತನೆಂಬುದು ಕರ್ಣನ ತೀರ್ಮಾನ

ಇಷ್ಟು ಹೊತ್ತಿಗೆ ಪಾರ್ಥನ ಶಂಖಧ್ವನಿಯಾಗುವುದು ಅದನ್ನು ಕೇಳಿ ಕರ್ಣನು, ಬ್ರಾಹ್ಮಣ ಗೌರವದಿಂದ ರಥವಿಳಿದಿದ್ದವನು ಪುನಃ ಹತ್ತಿ, "ಶಲ್ಯರಾಜ, ಅರ್ಜುನನಿರುವ ಕಡೆಗೆ ರಥವನ್ನು ಬಿಡು!" ಎಂದು ಹೇಳಿ ಅವನ ಮೇಲೆ ಯುದ್ಧಕ್ಕೆ ಹೊರಟನು

## ೫. ಊರುಭಂಗ

ಕಲಿ ಕರ್ಣನು ತನ್ನ ಔದಾರ್ಯಕ್ಕೆ ಬಲಿಯಾಗಿ ವೀರಸ್ವರ್ಗವನ್ನು ಪಡೆದನು ಅವನ ಸಾರಥಿಯಾಗಿದ್ದ ಶಲ್ಯನು, ಹದಿನೆಂಟನೆಯ ದಿನ, 'ಹಾಳೂರಿಗೆ ಉಳಿದವನೇ ಗೌಡ' ನೆಂಬಂತೆ ಸೇನಾಧಿಪತ್ಯವನ್ನು ವಹಿಸಿಕೊಂಡು ಸೇನೆಯನ್ನು ನಡೆಸಿದನು ಅವನನ್ನು ಕೊಲ್ಲುವುದಕ್ಕೆ ಭೀಮಾರ್ಜುನರು ಬೇಕಾಗಲಿಲ್ಲ, ಅಜಾತಶತ್ರುವಾದ ಧರ್ಮರಾಯನೇ ಸಾಕಾಯಿತು ಈಗ ಹದಿನೆಂಟು ದಿನದ ಯುದ್ಧದಲ್ಲಿ ಹದಿನೆಂಟು ಅಕ್ಷೌಹಿಣೀ ಸೈನ್ಯವು ಹತವಾಗಿ ಕುರುಕ್ಷೇತ್ರವು ಶವರಾಶಿಗಳಿಂದ ಮುಚ್ಚಿಹೋಯಿತು, ಸಮಂತ ಪಂಚಕಗಳು ರಾಜದೇಹಗಳಿಂದ ತುಂಬಿ ಹೋದುವು ಕೌರವರ ಕಡೆ ದುರ್ಯೋಧನನೂ ಪಾಂಡವರ ಕಡೆ ಪಾಂಡವ ಜನಾರ್ದನರೂ ಮಾತ್ರ ಯೋಧ್ಧೃಗಳಾಗಿ ಉಳಿದುಕೊಂಡರು ಆದರೆ ದುರ್ಯೋಧನನು ತೊಡೆ ಮುರಿದು ಸಾಯುವವರೆಗೂ ಭೀಮ ಪ್ರತಿಜ್ಞೆ ಪೂರೈಸುವಂತಿರಲಿಲ್ಲ ಯುದ್ಧವು ಮುಗಿಯುವಂತಿರಲಿಲ್ಲ. ದುರ್ಯೋಧನನಿಗೆ ಈಗ ಭೀಷ್ಮ ದ್ರೋಣರ ಸಹಾಯವಿಲ್ಲ, ಕರ್ಣ ದುಶ್ಶಾಸನರ ಬೆಂಬಲವಿಲ್ಲ, ರಥವಿಲ್ಲ, ಕುದುರೆಯಿಲ್ಲ. ಬಳಲಿದ್ದೇನೆಂದು ಹೇಳಿದರೂ ಕೇಳದೆ ಪಾಂಡವರು ಅವನನ್ನು ಎಳ

ತಂದರು .ಅವನು ನಿರಾಶನಾದರೂ ಏಕಾಂಗವೀರನಂತೆ ಗದೆಯನ್ನು ಹಿಡಿದು ಭೀಮನೊಡನೆ ಹೋರಿ ಮಡಿದನು. ಇದು ಶಲ್ಯಪರ್ವದ ಕಥೆ ಇದರಲ್ಲಿ ಶಲ್ಯನ ಯುದ್ಧವನ್ನೂ, ಕೌರವನು ಕೊಳದಲ್ಲಿ ಅವಿತು ಕೊಂಡದ್ದನ್ನೂ ಕವಿಯು ಬಿಟ್ಟಿದ್ದಾನೆ, ಗದಾಯುದ್ಧವೂ ವಿಷ್ಕಂಭದಲ್ಲಿ ವರ್ಣನಾಮಾತ್ರ ಪರ್ಯವಸಾಯಿಯಾಗಿದೆ. ಈ ರುದ್ರ ನಾಟಕದ ಅಂತ್ಯದೃಶ್ಯವೊಂದೇ "ಊರುಭಂಗ" ದಲ್ಲಿ ಪ್ರತಿಪಾದ್ಯವಾದ ವಿಷಯ

ಇಲ್ಲಿಯ ದುರ್ಯೋಧನನು "ದೂತವಾಕ್ಯ" "ದೂತಘಟೋತ್ಕಚ" ಗಳ ದುರ್ಯೋಧನನಲ್ಲ ಅವನಿಗೆ ಜ್ಞಾನೋದಯವಾಗಿದೆ; ಉಪ ಶಾಂತಿಯುಂಟಾಗಿದೆ ಯಾರ ಕಡೆಗೂ ಯುದ್ಧಮಾಡುವುದಿಲ್ಲವೆಂದು ಹೊರಟು ಹೋಗಿದ್ದ ಬಲರಾಮನು ಗದಾಯುದ್ಧ ಕಾಲಕ್ಕೆ ಬಂದು ಭೀಮನ ಅಧರ್ಮ ಯುದ್ಧವನ್ನು ಕಣ್ಣಾರ ನೋಡಿ ಕೆರಳಿ ಕುಪಿತ ನಾಗಿ ಪಾಂಡವರನ್ನು ಪುಡಿಗುಟ್ಟುವುದಾಗಿ ಹೇಳುವನು ಆದರೆ ದುರ್ಯೋಧನನು ಒಪ್ಪುವುದಿಲ್ಲ ಅವನು

"ಪ್ರತಿಜ್ಞಾವಸಿತೇ ಭೀಮೇ ಗತೇ ಭ್ರಾತೃಶತೇ ದಿವಂ।
ಮಯಿ ಚೈವಂಗತೇ ರಾಮ ವಿಗ್ರಹಃ ಕಿಂ ಕರಿಷ್ಯತಿ॥"

ಎನ್ನುವನು "ಭೀಮನಿಂದ ನೀನು ವಂಚಿತನಾದೆ" ಎಂದು ಬಲ ರಾಮನು ಕೆರಳಲು ದುರ್ಯೋಧನನು ಅವನ ಮಾತನ್ನು ಒಪ್ಪುವು ದಿಲ್ಲ "ಆ ಸಾಕ್ಷಾತ್ ಹರಿಯೇ ಭೀಮಗದೆಯನ್ನು ಪ್ರವೇಶಿಸಿ ನನ್ನನ್ನು ಮೃತ್ಯುವಿಗಿತ್ತನು" ಎಂದು ಉತ್ತರ ಕೊಡುವನು

ಹನ್ನೊಂದು ಅಕ್ಷೋಹಿಣೀ ಸೇನೆಗೆ ಒಡೆಯನಾದ ಚಕ್ರವರ್ತಿ ಯಾಗಿದ್ದರೂ ದುರ್ಯೋಧನನು ಕೊನೆಗಾಲಕ್ಕೆ ಹಸ್ತ್ಯಶ್ವರಥಪದಾತಿ ಗಳೊಂದೂ ಇಲ್ಲದೆ ತೊಡೆ ಮುರಿದು ಬಿದ್ದು ಏಕಾಕಿಯಾಗಿ ಕೊರಗಿ ಸಾಯುವ ದುಃಖದೃಶ್ಯವನ್ನು ಹಲವರು ಚಿತ್ರಿಸಿದ್ದಾರೆ, ನೂರು ಜನ ವೀರಪುತ್ರರನ್ನು ಕಳೆದುಕೊಂಡರೂ ದುರ್ಯೋಧನನನ್ನು ನೋಡಿ ಹೊಟ್ಟೆ ಹಿಡಿದುಕೊಂಡು ಬಂದಿರುವ ಮುಪ್ಪಿನ ಮುದುಕರಾದ ಅಂಧ ತಾಯಿ ತಂದೆಗಳನ್ನು ಅಲ್ಲಿಗೆ ಕರೆತಂದು ಅವನೊಡನೆ ಮಾತನಾಡಿಸಿ ಆ ದುಃಖ

ದೃಶ್ಯವನ್ನು ದಾರುಣವಾಗಿ ಮಾಡಿದ್ದಾರೆ ಭಾಸನು ಇಲ್ಲಿಯೂ ತನ್ನ ಕಲ್ಪನಾಶಕ್ತಿಯನ್ನು ಪ್ರಯೋಗಿಸಿ ಆ ದಾರುಣ ವೃತ್ತಾಂತವನ್ನು ದಾರುಣತರವಾಗಿ ಮಾಡುತ್ತಾನೆ—ಧೃತರಾಷ್ಟ್ರ ಗಾಂಧಾರಿಯರೊಡನೆ ದುರ್ಯೋಧನನನ್ನು ಹುಡುಕಿಕೊಂಡು ಅವನ ಹೆಂಡತಿಯರಾದ ಮಾಲವಿ ಪೌರವಿಯರೂ ಮಗುವಾದ ದುರ್ಜಯನೂ ಬರುತ್ತಾರೆ ಇದರಿಂದ, ಅದರಲ್ಲಿಯೂ ಆ ಮಗುವಿನಿಂದ, ಕರುಣರಸವು ಶತಾಧಿಕ ವಾಗುತ್ತದೆ ಕರುಣರಸವನ್ನು ಇಷ್ಟು ತೀವ್ರಗೊಳಿಸುವುದಕ್ಕೆ ಮಗು ವನ್ನು ಉಪಯೋಗಿಸಿಕೊಂಡಿರುವುದು ಸಂಸ್ಕೃತ ನಾಟಕಗಳಲ್ಲಿ ಇದೊಂದೇ ಎಂದು ತೋರುತ್ತದೆ. ರೋಹಸೇನ, ರೋಹಿತಾಶ್ವ, ಸರ್ವದಮನ, ಲವಕುಶಾದಿಗಳೂ ಮಕ್ಕಳೇ, ಆದರೆ ಅವರು ಕ್ಷಣಕಾಲ ಕಷ್ಟಕ್ಕೆ ಸಿಕ್ಕಿದರೂ ಮುಂದೆ ಸುಖವಾಗಿರುತ್ತಾರೆ, ಅವರ ಕ್ಷಣಿಕ ಶೋಕವು ಶಾಶ್ವತ ಸುಖ ಪರ್ಯವಸಾಯಿಯೆಂಬುದು ಪಾರಕ ಪ್ರೇಕ್ಷಕ ರಿಗೆ ಗೊತ್ತಿದೆ. ಅವರು ಹುಡುಗರಾದರೂ (ರೋಹಸೇನ ಹೊರತು) ಶೂರರು, ಇದು ವೀರಶಿಶುವಾದರೂ ಇನ್ನೂ ಸಣ್ಣ ಮಗು—ತೊಡೆಯ ಮೇಲೆ ಆಡುವ ಮಗು. ಆ ತೊಡೆಯೂ ಅದರ ಪಾಲಿಗೆ ಹೆಚ್ಚು ದಿವಸವಿರುವುದಿಲ್ಲ ಆ ಭಾಗವನ್ನು ಇಲ್ಲಿ ಸ್ಥೂಲವಾಗಿ ತಿಳಿಸಿದೆ :—

[ಧೃತರಾಷ್ಟ್ರ ಗಾಂಧಾರಿ ಪೌರವಿ ಮಾಳವಿ ದುರ್ಜಯ ಇವರು ರಣರಂಗದಲ್ಲಿ ದುರ್ಯೋಧನನನ್ನು ಹುಡುಕುತ್ತಿರು ವರು. ತಾಯಿತಂದೆಗಳನ್ನು ಕಾಣುತ್ತಿದ್ದ ಹಾಗೇ ದುರ್ಯೋಧ ನನು ಏಳುವುದಕ್ಕೆ ಹೋಗುವನು ತೊಡೆ ಮುರಿದಿದ್ದದ್ದರಿಂದ ಕಾಲು ಮಡಿಸಿಕೊಂಡು ಬಿದ್ದು ಹಾಗೇ ಕುಳಿತಿರುವನು ]

ಧೃತರಾಷ್ಟ್ರ—ಇದು ಯಾರು ನನ್ನ ಸೆರಗನ್ನು ಹಿಡಿದು ದಾರಿತೋರಿಸು ತ್ತಿರುವವರು

ದುರ್ಜಯ—ತಾತ, ನಾನು ದುರ್ಜಯ.

ಧೃತರಾಷ್ಟ್ರ—ಮಗು, ಅಪ್ಪನನ್ನು ಹುಡುಕು.

ದುರ್ಜಯ—ನನಗೆ ಕಾಲು ನೋಯುತ್ತೆ ತಾತ!

ಧೃತರಾಷ್ಟ್ರ—ನಡೆಯಪ್ಪ, ನಿಮ್ಮ ತಂದೆಯ ತೊಡೆಯ ಮೇಲೆ ಕೂತು ಕೊಳ್ಳುವೆಯಂತೆ

ದುರ್ಜಯ—ಆಗಲಿ ಹೋಗುತ್ತೇನೆ. (ಮುಂದೆ ಹೋಗಿ) ಅಪ್ಪಾ, ಎಲ್ಲಿ ದ್ದೀಯಪ್ಪಾ ?

ರಾಜ—ಅಯ್ಯೋ ಇವನೂ ಬಂದನೇ ? ಇವನು ದುಃಖವೆಂಬುದನ್ನೇ ಕಾಣ, ತೊಡೆಯ ಮೇಲೆ ಮಲಗುವ ಕೂಸು, ನಾನು ಸೋತು ಬಿದ್ದಿರುವುದನ್ನು ನೋಡಿ ಏನೆಂದುಕೊಳ್ಳುತ್ತಾನೆಯೋ !

ದುರ್ಜಯ—ಇಗೋ ಇಲ್ಲಿ ಮಹಾರಾಜನು ನೆಲದ ಮೇಲೆ ಕೂತು ಕೊಂಡಿದ್ದಾನೆ !

ರಾಜ—ಯಾಕೆ ಬಂದೆ ಮಗು ?

ದುರ್ಜಯ—ನೀನು ತಡಮಾಡಿದೆ, ಅದಕ್ಕೆ.

ರಾಜ—ಅಯ್ಯೋ ! ಇಂಥ ಅವಸ್ಥೆಯಲ್ಲಿರುವುದರಿಂದ, ಪುತ್ರಸ್ನೇಹವು ಹೊಟ್ಟೆಯಲ್ಲಿ ಉರಿ ಎಬ್ಬಿಸುತ್ತಿದೆ !

ದುರ್ಜಯ—ನಾನು ತೊಡೇ ಮೇಲೆ ಕೂತುಕೋಬೇಕು ! (ಎಂದು ತೊಡೆಯ ಮೇಲೆ ಕುಳಿತುಕೊಳ್ಳುವನು )

ರಾಜ—(ತಡೆದು) ಅಯ್ಯೋ ದುರ್ಜಯ, ದುರ್ಜಯ, ಬೇಡ—ಆಹಾ, ಕಾಲ ವಿಪರ್ಯಾಸದಿಂದ ಚಂದ್ರನು ಅಗ್ನಿಯಾದನಲ್ಲ !

ದುರ್ಜಯ—ಯಾಕೆ ತೊಡೆ ಮೇಲೆ ಕೂತಕೋಬೇಡ ಅಂತೀಯ ಅಪ್ಪ ?

ರಾಜ—ಇನ್ನು ಮೇಲೆ ನೀನು ಇನ್ನೆಲ್ಲಿಯಾದರೂ ಕೂತುಕೋಬೇಕಪ್ಪ ! ಇವೊತ್ತಿನಿಂದ ನಿನಗೆ ಈ ಆಸನವಿಲ್ಲ

ದುರ್ಜಯ—ಹಾಗಾದರೆ ನೀನು ಎಲ್ಲಿಗೆ ಹೋಗುತ್ತೀ ?

ರಾಜ—ನನ್ನ ನೂರು ಜನ ತಮ್ಮಂದಿರ ಹಿಂದೆ !

ದುರ್ಜಯ—ನನ್ನನ್ನೂ ಕರೆದುಕೊಂಡು ಹೋಗಪ್ಪ !

ರಾಜ—ವೃಕೋದರನಿಗೆ ಹಾಗೆಂದು ಹೇಳು ಹೋಗು ಮಗು !

ದುರ್ಜಯ—ಬಾಪ್ಪ ! ನಿನ್ನನ್ನು ಎಲ್ಲಾ ಹುಡುಕುತ್ತಿದ್ದಾರೆ !

ರಾಜ—ಯಾರು ಯಾರು ?

ದುರ್ಜಯ—ಅಜ್ಜಿ, ತಾತ, ಅಂತಃಪುರದವರೆಲ್ಲಾ.

ರಾಜ—ಹೋಗು ಮಗು, ನನ್ನ ಕೈಲಿ ಬರುವುದಕ್ಕಾಗುವುದಿಲ್ಲ
ದುರ್ಜಯ—ನಾನು ಕರೆದುಕೊಂಡು ಹೋಗುತ್ತೇನೆ
ರಾಜ—ನೀನು ಮಗು !
ದುರ್ಜಯ—ತಾತಾ, ಅಪ್ಪ ಇಲ್ಲಿದ್ದಾನೆ
ಧೃತರಾಷ್ಟ್ರ—ಎಲ್ಲಿ ?
ದುರ್ಜಯ—ಇಲ್ಲಿ ನೆಲದ ಮೇಲೆ ಕೂತಿದ್ದಾನೆ.

ದುರ್ಯೋಧನನು ಅಳುತ್ತಿರುವ ತಾಯಿತಂದೆಗಳನ್ನೂ ಹೆಂಡತಿಯರನ್ನೂ ಸಮಾಧಾನಗೊಳಿಸುವುದು ಹೇಗೆ? ಧೀರನಂತೆ!—"ನಾನು ಯುದ್ಧದಲ್ಲಿ ಬೆನ್ನು ತೋರಿಸದೆ ವೀರನಂತೆ ಸತ್ತೆ, ಮಾನದಿಂದ ಸತ್ತೆ! ಯೇನೈವ ಮಾನೇನ ಸಮಂ ಪ್ರಸೂತಃ ತೇನೈವ ಮಾನೇನ ದಿವಂ ಪ್ರಯಾಮಿ!" ಎಂದು ಇದೇ "ದುಯೋಧನಮಾನ"

ಇದು ದುರ್ಜಯನನ್ನು ಕುರಿತು ಹೇಳುವ ಮಾತು :—

"ಮಗು, ಇನ್ನು ಮೇಲೆ ಪಾಂಡವರನ್ನು ನನ್ನಂತೆ ಶುಶ್ರೂಷೆ ಮಾಡು, ಅಜ್ಜಿ ಕುಂತಿಯರು ಹೇಳಿದಹಾಗೆ ಕೇಳು, ಅಭಿಮನ್ಯುವಿನ ತಾಯಿ, ದ್ರೌಪದಿ, ಇಬ್ಬರನ್ನೂ ತಾಯಿಯರ ಹಾಗೆ ಪೂಜಿಸು, ಅಭಿಮಾನದೀಪ್ತ ಹೃದಯನಾದ ನಿನ್ನ ತಂದೆ ದುರ್ಯೋಧನನು ಸರಿಸಮಾನನೊಡನೆ ಎದುರೆದುರಿಗೆ ನಿಂತು ಹತನಾದನೆಂದು ಅರಿತು, ದುಃಖವನ್ನು ಬಿಡು, ನನ್ನ ಕಾಲಾನಂತರದಲ್ಲಿ ಪಾಂಡವರೊಡನೆ ಬೆರೆದು ಅವರ ಜೊತೆಯಲ್ಲಿ ತರ್ಪಣವನ್ನು ಕೊಡು!"

ಇದಾದಮೇಲೆ ಅಶ್ವತ್ಥಾಮನು ಬಂದು "ಕುರುರಾಜ, ಇದೇನು?" ಎಂದು ಕೇಳುವನು ದುರ್ಯೋಧನನು "ಇದು ಅಪರಿತೋಷದ ಫಲ!" ಎಂದು ಉತ್ತರ ಕೊಡುವನು ಅವನಿಗೆ ವೈರವು ಹರಿದುಹೋಯಿತು. ಆದ್ದರಿಂದ ಶತ್ರುನಾಶ ಮಾಡುತ್ತೇನೆಂಬ ಅಶ್ವತ್ಥಾಮನನ್ನು ಕುರಿತು, "ಬೇಡ ಬೇಡ! ಪಟ್ಟಾಭಿಷಿಕ್ತರೆನಿಸಿಕೊಂಡಿದ್ದ ರಾಜರೆಲ್ಲ ಹೋದರು, ನೂರುಜನ ತಮ್ಮಂದಿರು ಹೋದರು, ನಾವೂ ಹೀಗಾಗಿದ್ದೇವೆ; ಆದ್ದರಿಂದ ಬಿಲ್ಲನ್ನು ಬಿಸುಡು!"ಎಂದು ಬುದ್ಧಿ ಹೇಳುವನು! ಅಶ್ವತ್ಥಾಮ

ನಿಗೆ ಕೆಚ್ಚು, ಅವನಿಗೆ ಇದು ಒಪ್ಪುವುದಿಲ್ಲ, ಆದ್ದರಿಂದ "ನಿನ್ನ ತೊಡೆ ಮುರಿದಾಗ ನಿನ್ನ ದರ್ಪವೂ ಮುರಿದುಹೋಯಿತೇ ದುರ್ಯೋಧನ ?" ಎಂದು ಮೂದಲಿಸುವನು.

ದುರ್ಯೋ—"ಹಾಗಲ್ಲ! ರಾಜರು ಮಾನಶರೀರರು ಮಾನಾರ್ಥವಾಗಿ ನಾನು ಯುದ್ಧವನ್ನು ಕೈಕೊಂಡದ್ದು ದ್ರೌಪದಿಯನ್ನು ಮುಂದಲೆ ಹಿಡಿದು ಎಳೆಸಿ ತಂದದ್ದು, ಅಭಿಮನ್ಯುವನ್ನು ಕೊಂದದ್ದು, ಜೂಜಿನಲ್ಲಿ ಸೋಲಿಸಿ ಅಟ್ಟಿದ್ದು, ಇವುಗಳಿಗೆ ಬದಲಾಗಿ ನನ್ನ ದರ್ಪವನ್ನು ಅವರು ಕಿತ್ತುಕೊಂಡದ್ದು ಅತ್ಯಲ್ಪವಲ್ಲವೇ ? ಯೋಚಿಸಿನೋಡು!"

ಆದರೆ ಇದು ಅವನಿಗೆ ಒಪ್ಪುವುದಿಲ್ಲ ಬೇಡವೆಂದು ನಿಷೇಧಿಸಿದರೂ ಶತ್ರುನಿಗ್ರಹ ಮಾಡುವೆನೆಂದು ತನ್ನ ಪ್ರತಿಜ್ಞೆಯನ್ನು ತಾನು ಮಾಡುವನು (ಉಪಪಾಂಡವರ ಮರಣಕ್ಕೆ ದುರ್ಯೋಧನನು ಸ್ವಲ್ಪವೂ ಕಾರಣನಲ್ಲ) ದುರ್ಜಯನನ್ನು ಕರೆದು, "ಮಗು! ಇಗೋ ನಿನ್ನ ವಿಕ್ರಮ ಸಂಪಾದಿತವೂ ಪಿತ್ರಾರ್ಜಿತವೂ ಆದ ರಾಜ್ಯದಲ್ಲಿ ನೀನು ರಾಜನಾಗಿದ್ದೀಯೆ! ಅಭಿಷೇಕವಿಲ್ಲದಿದ್ದರೂ, ವಿಪ್ರವಾಕ್ಯದಿಂದಲೇ ಪಟ್ಟಾಭಿಷಿಕ್ತನಾಗಿದ್ದೀಯೆ!" ಎಂದು ಆಶೀರ್ವದಿಸಿದನು

ದುರ್ಯೋಧನನ ಮನೋಗತವು ನೆರವೇರಿತು ಆದ್ದರಿಂದ ಸ್ವರ್ಗಕ್ಕೆ ತೆರಳಲು ಸಿದ್ಧನಾದನು ಶಂತನು ಮೊದಲಾದ ಅವನ ಪಿತೃ ಪಿತಾಮಹರೂ ಕರ್ಣನನ್ನು ಮುಂದಿಟ್ಟುಕೊಂಡು ನೂರು ಜನ ತಮ್ಮಂದಿರೂ, ಅಭಿಮನ್ಯುವೂ, ಅಪ್ಸರೆಯರೂ, ಗಂಗಾಸಾಗರಾದಿ ಮಹಾತೀರ್ಥಗಳೂ ಅವನನ್ನು ಕರೆದೊಯ್ಯುವುದಕ್ಕೆ ಬಂದರು ಸಹಸ್ರ ಹಂಸಗಳನ್ನು ಹೂಡಿದ ವೀರವಾಹಿಯಾದ ವಿಮಾನವನ್ನು ಯಮನು ಕಳುಹಿಸಿಕೊಟ್ಟಿರಲು, ಅದರಲ್ಲಿ ಮಾನಧನನಾದ ದುರ್ಯೋಧನನು ಸ್ವರ್ಗಕ್ಕೆ ತೆರಳಿದನು.

ಇಲ್ಲಿಗೆ ಭಾರತ ಯುದ್ಧವು ಮುಗಿಯಿತು, ಇನ್ನೂ ಒಂಬತ್ತು

ವರ್ತಮಾನವೇ ಇರಲಿಲ್ಲ ಅವನ ಮಂತ್ರಿಗಳೇ ರಾಜ್ಯವನ್ನು ನಡೆಸುತ್ತಿದ್ದರು ಅರಮನೆಯೊಳಕ್ಕೆ ಒಬ್ಬರನ್ನೂ ಬಿಡುತ್ತಿರಲಿಲ್ಲ, ರಾಜನ ವರ್ತಮಾನವನ್ನೂ ಹೇಳುತ್ತಿರಲಿಲ್ಲ

ಈ ಮಧ್ಯೆ ಕುರಂಗಿಯು ಒಂದು ದಿನ ಉದ್ಯಾನದಲ್ಲಿ ಓಡಾಡುತ್ತಿರುವಾಗ ಒಂದು ಮದದಾನೆಯ ಕೈಗೆ ಸಿಕ್ಕಿದಳು ಆಗ ಅವಳನ್ನು ಒಬ್ಬ ಚಂಡಾಲಯುವಕನು ಉಳಿಸಿದನು ಅವನು ನಿಜವಾಗಿ ಚಂಡಾಲನಲ್ಲ, ಚಂಡಾಲ ವೇಷದಲ್ಲಿದ್ದ ವಿಷ್ಣುಸೇನ (ಅವನಿಗೂ ಅವನ ತಾಯಿ ತಂದೆ ಮುಂತಾದವರಿಗೂ ಒಬ್ಬ ಋಷಿಯ ಶಾಪ ಬಂದು ಅವರು ಒಂದು ವರ್ಷ ಚಂಡಾಲರಂತೆ ವೈರಂತ್ಯಪುರಿಯ ಊರಹೊರಗೆ ಅಜ್ಞಾತವಾಸದಲ್ಲಿದ್ದರು) ಇಬ್ಬರಿಗೂ ಪರಸ್ಪರ ಪ್ರೇಮವು ಉತ್ಪನ್ನವಾಯಿತು ಕುರಂಗಿಯ ಸಖಿಯರ ಸಹಾಯದಿಂದ ಅವನು ಅಂತಃಪುರವನ್ನು ಹೊಕ್ಕು ಅಲ್ಲಿ ಒಂದು ವರ್ಷ ಇದ್ದುಬಿಟ್ಟನು, ಕೊನೆಗೆ ಅದು ರಾಜನಿಗೆ ಗೊತ್ತಾಗಲು, ತಲೆತಪ್ಪಿಸಿಕೊಂಡು ಕಾಡಿಗೆ ಓಡಿಹೋದನು

ಅಲ್ಲಿ ಅಲೆದಾಡುತ್ತ, ಪ್ರಿಯಾಸಮಾಗಮದಲ್ಲಿ ನಿರಾಶನಾಗಿ, ಬೆಟ್ಟದಿಂದ ಬಿದ್ದು ಆತ್ಮಹತ್ಯ ಮಾಡಿಕೊಳ್ಳಬೇಕೆಂದಿರಲು, ಆಗ ಒಬ್ಬ ವಿದ್ಯಾಧರನು ಕಂಡು, ಕರುಣೆಯಿಂದ, ಅವನಿಗೆ ಅದೃಶ್ಯಕಾರಿಯಾದ ಉಂಗುರವನ್ನು ಕೊಟ್ಟನು ಈ ಉಂಗುರದ ಸಹಾಯದಿಂದ ಅವನು ಪುನಃ ಅಂತಃಪುರವನ್ನು ಸೇರಿ ಸುಖವಾಗಿದ್ದನು

ಕುಂತಿಭೋಜನಿಗೆ ಇದು ತಿಳಿಯದು. ಆದ್ದರಿಂದ ತನ್ನ ಇನ್ನೊಬ್ಬ ಭಾವನಾದ ಕಾಶಿರಾಜನ ಮಗ ಜಯವರ್ಮನಿಗಾದರೂ ಕುರಂಗಿಯನ್ನೂ ಕೊಟ್ಟು ಮದುವೆಮಾಡಬೇಕೆಂದಿದ್ದನು. ಆಗ ನಾರದರು ಬಂದು ವಿಷ್ಣುಸೇನನು ಅವನ ಅರಮನೆಯಲ್ಲಿಯೇ ಇರುವುದನ್ನೂ, ಅವಿಮಾರಕ ಕುರಂಗಿಯರಿಗೂ ಜಯವರ್ಮರು ಅಣ್ಣತಮ್ಮಂದಿರೆಂಬುದನ್ನೂ ತಿಳಿಸಿ, ಅವಿಮಾರಕ ಕುರಂಗಿಯರಿಗೂ ಜಯವರ್ಮ ಸುಮಿತ್ರೆಯರಿಗೂ ಮದುವೆ ಮಾಡಿಸುವರು.

ಈ ಕಥೆಯಲ್ಲಿ ಮಹಾಭಾರತದ ಗಂಡುಕಡಲಿನ ಹೆದ್ದೆರೆಗಳಿಲ್ಲ.

ಮದದಾನೆಯಿಂದ ಒಬ್ಬ ಹುಡುಗಿಯನ್ನು ತಪ್ಪಿಸಿದ್ದನ್ನು ಬಿಟ್ಟರೆ, ಮತ್ತಾವ ಸಾಹಸಕಾರ್ಯವೂ ಇಲ್ಲ ಕ್ಷತ್ರಿಯ ರಾಜಕುಮಾರನು ಚಂಡಾಲನಂತೆ ಬಹಿಷ್ಕೃತನಾಗಿದ್ದು, ಹೆಂಗಸರ ಸಹಾಯದಿಂದ, ಕಳ್ಳನ ವೇಷದಲ್ಲಿ, ಬಾಗಿಲುಗಳು ಹಾರು ಹೊಡೆದಿದ್ದ ಅರಮನೆಗೆ ಅರ್ಧರಾತ್ರಿಯಲ್ಲಿ ನುಸಿಯುತ್ತಾನೆ ರಾಜನಿಗೆ ಈ ವರ್ತಮಾನ ತಿಳಿದ ಗಳಿಗೆಗೇ ತಲೆತಪ್ಪಿಸಿಕೊಂಡು ಕಾಡಿಗೆ ಓಡಿಹೋಗಿ ಅಲ್ಲಿ ದಿಕ್ಕು ತೋರದೆ ಬೆಂಕಿಯಲ್ಲಿ ಬಿದ್ದು ಬದುಕಿಕೊಂಡು, ಅಕಸ್ಮಾತ್ತಾಗಿ ಬಂದ ವಿದ್ಯಾಧರನ ಕರುಣೆಯಿಂದ ಅದರ್ಶನಶಕ್ತಿಯನ್ನು ಸಂಪಾದಸಿ ಪುನಃ ಅಂತಃಪುರಕ್ಕೆ ಹೋಗಿ ನೇರಿಕೊಳ್ಳುತ್ತಾನೆ ಇವನು ಅಗ್ನಿ ಪ್ರಸಾದದಿಂದ ಹುಟ್ಟಿದವನಂತೆ, ಇನ್ನೂ ಬಾಲ್ಯದಲ್ಲಿಯೇ ಅವಿ (ಕುರಿ) ಯಾಗಿ ಬಂದ ಒಬ್ಬ ರಾಕ್ಷಸನನ್ನು ಕೊಂದಿದ್ದನಂತೆ

ಈ ನಾಟಕದ ಕಥೆಯು ತೊಡಕು ತೊಡಕಾಗಿದೆಯೇ ಹೊರತು, ಅದರ ವಸ್ತುವಿನಲ್ಲಿ ಸಂವಿಧಾನ ಕೌಶಲವಿಲ್ಲ, ರಸವತ್ತಾದ ಸನ್ನಿವೇಶಗಳಿಲ್ಲ ಮದಿಸಿದಾನೆ, ರಾಕ್ಷಸ, ವಿದ್ಯಾಧರ, ಅದೃಶ್ಯಾಂಗುಳೀಯ, ಚಂಡಭಾರ್ಗವ, ನಾರದ, ನೇಪಥ್ಯಭಾಷಿತ ಇಂಥ ಅಶ್ರದ್ಧೇಯ ಆಕಸ್ಮಿಕ ಅಮಾನುಷ ಅಸಾಮಾನ್ಯ ಸಾಧನಗಳಿಂದ ಕಥೆಯ ಚಮತ್ಕಾರವು ಹೆಚ್ಚುವಂತೆ ಮಾಡಿದ ಒಂದು ಕೃತಕ ಪ್ರಯತ್ನವು ಸ್ಪಷ್ಟವಾಗಿ ಕಂಡುಬರುತ್ತದೆ ಚಂಡಾಲನು ಪ್ರಚ್ಛನ್ನನಾದ ಯಾರೋ ಮಹಾಪುರುಷನಿರಬೇಕೆಂದು ಮಂತ್ರಿಯು ಮೊದಲೇ ಊಹಿಸುವುದರಿಂದ, ಎದ್ದಿದ್ದ ಕುತೂಹಲಕ್ಕೆ ಮೊದಲೇ ಭಂಗವಾಗುತ್ತದೆ. ಅಂತಃಪುರದ ರಕ್ಷಣೆಯು ಮಂತ್ರಿಗೆ ಸೇರಿತ್ತಂತೆ, ಆದ್ದರಿಂದ ಅವನು ಕಾಶೀರಾಜನ ಜೊತೆಯಲ್ಲಿ ಹೋಗಿದ್ದಾಗ ಅದು ಅರಕ್ಷಿತವಾಗಿ, ಅವಿಮಾರಕನಿಗೆ ಸುಲಭವಾಗಿ ಅವಕಾಶ ಮಾಡಿಕೊಟ್ಟಿತು. ವಿದೂಷಕನು ನೆನೆಯುವ ಹೊತ್ತಿಗೆ ಸರಿಯಾಗಿ ಅವನ ಸ್ನೇಹಿತನು ಬರುವನು. ಕುರಂಗಿಯು ಸೆರಗಿನಿಂದ ನೇಣು ಹಾಕಿಕೊಳ್ಳಬೇಕೆನ್ನುವ ಹೊತ್ತಿಗೆ ಗುಡುಗುವುದು, ಅದನ್ನು ಕೇಳಿ ಅವಳು ಮೂರ್ಛೆಹೋಗಲು, ಅವಿಮಾರಕನು ಸಿದ್ಧನಾಗಿದ್ದು ಉಪಚರಿಸುವನು. ಸೌವೀರ ರಾಜನು ಶಾಪಪಡೆದ

ವೃತ್ತಾಂತವೂ ಸುದರ್ಶನೆಯು ಅಗ್ನಿ ಪ್ರಸಾದದಿಂದ ಪುತ್ರನನ್ನು ಪಡೆದು ತನ್ನ ಅಕ್ಕನಿಗೆ ಕೊಟ್ಟುಬಿಟ್ಟ ವೃತ್ತಾಂತವೂ ವಿಚಿತ್ರವಾಗಿವೆ

ಪಾತ್ರಗಳು ಹೆಚ್ಚು (ಸುಮಾರು ಇಪ್ಪತ್ತೈದು ಇವೆ). ಇವುಗಳ ಮಾತೂ ಹೆಚ್ಚು ನಾರದನು ಬಂದು ಹಿಂದಿನ ಕಥೆಯನ್ನೆಲ್ಲಾ ಹೇಳುವನು, ಇದರಲ್ಲಿ ಬಹುಭಾಗವು ಪ್ರೇಕ್ಷಕರಿಗೆ ಗೊತ್ತಿದ್ದದ್ದೇ, ವರ್ಣನೆಯೂ ಹೆಚ್ಚು, ಅರ್ಧರಾತ್ರಿಯಲ್ಲಿದ್ದ ನಗರಿಯ ವರ್ಣನೆಯು ಸುಮಾರು ಆರು ಪುಟಗಳಷ್ಟಾಗುತ್ತದೆ, ಇದು ಪ್ರೌಢ ಚಂಪೂ ಕಾವ್ಯದಲ್ಲಿಯೂ ಅಕ್ಷಮ್ಯವಾದೀತು ಸಖಿಯರು ನಾಯಕನಾಯಿಕೆಯರನ್ನು ತಂದು ಸೇರಿಸುವ ಬಗೆಯು ಚಮತ್ಕಾರವಾಗಿ ತೋರಿದರೂ ಗಂಭೀರವಾಗಿಯಾಗಲಿ ನಂಬುವಂತಾಗಲಿ ಇಲ್ಲ. ಒಟ್ಟಿನ ಮೇಲೆ ಇದು ಶೃಂಗಾರಾದ್ಭುತಗಳನ್ನು ಪ್ರತಿಪಾದಿಸಲು ಪ್ರಯತ್ನ ಪಟ್ಟ "ಒಂದು ಅರೇಬಿಯನ್ ನೈಟ್ಸ್" ಕಥೆಯಂತೆ ಇದೆ ಈ ಕಾರಣಗಳಿಂದ ಈ ನಾಟಕವು ಕವಿಯ ಪ್ರಥಮ ಪ್ರಯತ್ನಗಳಲ್ಲಿ ಒಂದಾಗಿದ್ದರೂ ಇರಬಹುದು ಅಂತು, ಇದು ಭಾಸನ ಪ್ರತಿಭಾ ಪರ್ವತ ಶ್ರೇಣಿಯಲ್ಲಿ ಉನ್ನತವಾದ ಶಿಖರವೇನೂ ಅಲ್ಲ ಇದಕ್ಕೆ ಬಹಳ ಮಟ್ಟಿಗೆ ಮೂಲವು ಕಾರಣವಾಗಿದ್ದರೂ ಇರಬಹುದು ಆದರೆ ಇದು ಯಾವುದು ಎಂಬುದು ನಮಗೆ ಗೊತ್ತಾಗಿಲ್ಲ ಇದರಲ್ಲಿ ಸಾಮಾನ್ಯ ಬುದ್ಧಿವಂತಿಕೆಯ ಕೆಲವು ನೀತಿ ಶ್ಲೋಕಗಳು ಬರುತ್ತವೆ. ನೀತಿ ಶ್ಲೋಕಗಳನ್ನು ಕಡೆದು ಪೋಣಿಸುವುದರಿಂದ ನಾಟಕಕ್ಕೇನು ಕಳೆಯೇರುವುದಿಲ್ಲ, ಬರಿಯ ಭಾರ. ಅವುಗಳಲ್ಲಿ ಕೆಲವನ್ನು ಇಲ್ಲಿ ಉದಾಹರಣೆಗಾಗಿ ಕೊಟ್ಟಿದೆ .—

೧ ಜಾಮಾತೃ ಸಂಪತ್ತಿಮಚಿಂತಯಿತ್ವಾ
ಪಿತ್ರಾ ತು ದತ್ತಾ ಸ್ವಮನೋಭಿಲಾಷಾತ್ |
ಕುಲದ್ವಯಂ ಹಂತಿ ಮದೇನ ನಾರೀ
ಕೂಲದ್ವಯಂ ಕ್ಷುಬ್ಧಜಲಾ ನದೀವ ॥ (I. ೩.)

೨ ಏಕಃ ಪರಗೃಹಂ ಗಚ್ಛೇತ್ ದ್ವಿತೀಯೋ ನ ತು ಮಂತ್ರಯೇತ್|
ಬಹುಭಿಃ ಸಮರಂ ಕುರ್ಯಾತ್ ಇತ್ಯಯಂ ಶಾಸ್ತ್ರನಿರ್ಣಯಃ ॥
(II ೧೦.)

೩. ಯತ್ನೇ ಕೃತೇ ಯದಿ ನ ಸಿಧ್ಯತಿ ಕೋತ್ರ ದೋಷಃ
ಕೋ ವಾ ನ ಸಿಧ್ಯತಿ ಮಮೇತಿ ಕರೋತಿ ಕಾರ್ಯಂ।
ಯತ್ನೈಃ ಶುಭೈಃ ಪುರುಷತಾ ಭವತೀಹ ನೃಣಾಂ
ದೈವಂ ವಿಧಾನಮನುಗಚ್ಛತಿ ಕಾರ್ಯಸಿದ್ಧಿಃ (III ೧೨)

---

## ೨. ಬಾಲಚರಿತೆ

'ಬಾಲಚರಿತ'ದಲ್ಲಿ ಶ್ರೀಕೃಷ್ಣನ ಚರಿತ್ರೆ ಅಥವಾ ಮಾಹಾತ್ಮ್ಯವು ವಿವರಿಸಲ್ಪಟ್ಟಿದೆ —

೧ ವಸುದೇವನು ಅರ್ಧರಾತ್ರಿಯಲ್ಲಿ ಯಮುನಾ ನದಿಯನ್ನು ದಾಟಿ ಆಚೆಯ ಹಳ್ಳಿಗೆ ಹೋಗಿ ಅಲ್ಲಿದ್ದ ತನ್ನ ಸ್ನೇಹಿತ ನಂದಗೋಪನಿಗೆ, ಮಗುವಾದ ಶ್ರೀಕೃಷ್ಣನನ್ನು ಒಪ್ಪಿಸಿ, ಪ್ರತಿಯಾಗಿ ಅವನಿಗೆ ಹುಟ್ಟಿ ಸತ್ತುಹೋಗಿದ್ದ ಒಂದು ಹೆಣ್ಣುಮಗುವನ್ನು ತಂದು ದೇವಕಿಯ ಕೈಯಲ್ಲಿಡುವನು ಪಂಚಾಯುಧಗಳೂ ಗರುಡನೂ ಕೃಷ್ಣನನ್ನು ಸೇವಿಸುವರು ಹೋಗುವಾಗಲೂ ಬರುವಾಗಲೂ ಯಮುನೆಯು ದಾರಿ ಬಿಡುವಳು ೨ ಮಧೂಕಋಷಿಯ ಶಾಪವು ಚಂಡಾಲ ರೂಪಿಗಳಾದ ಅಲಕ್ಷ್ಮಿ ಖಲತಿ ಕಾಳರಾತ್ರಿ ಮಹಾನಿದ್ರೆ ಪಿಂಗಲಾಕ್ಷಿ ಇವರೊಡನೆ ಕಂಸನಿಗೆ ಕಾಣಿಸಿಕೊಂಡು ಅವನ ಅರಮನೆಯಲ್ಲಿ ನೆಲಸುವುದು. ಕಂಸನು ವಸುದೇವನಿಗೆ ಹೇಳಿಕಳುಹಿಸಿ ಅವನು ತಂದ ಹೆಣ್ಣು ಮಗುವನ್ನು ಕೊಲ್ಲಲು ಅದು ಕಾತ್ಯಾಯನಿಯಾಗಿ, ಕುಂಡೋದರ ಶೂಲ ನೀಲ ಮನೋಜವ ಎಂಬವರನ್ನು ಪರಿವಾರ ಮಾಡಿಕೊಂಡು ಗೊಲ್ಲವೇಷದಿಂದ ನಂದಗೋಪನಿದ್ದ ಹಳ್ಳಿಗೆ ಹೋಗುವುದು. ೩. ಕೃಷ್ಣನು ಬಂದಾಗಿನಿಂದ ದಿನೇ ದಿನೇ ಗೋಕುಲವು ಸುಖಸಂಪತ್ತಿನಿಂದ ಶೋಭಿಸುತ್ತಿದೆ, ಅವನು ತನಗೆ ಬಂದ ಪೂತನಾ ಧೇನುಕಾದಿ ಗಂಡಾಂತರಗಳನ್ನು ಕಳೆದುಕೊಂಡು, ಯುವಕನಾಗಿ, ಬಲರಾಮ ಗೋಪ ಗೋಪಿಯರೊಡನೆ ಕ್ರೀಡಿಸುತ್ತಿದ್ದಾನೆ ವೃಷಭಾಸುರ ವಿಧ್ವಂಸನ. ೪ ಕಾಳೀಯ ಮದ ಮರ್ದನ; ಕಂಸನು ತಾನು ಆಚರಿಸುವ 'ಧನುರುತ್ಸವ'ಕ್ಕೆ ಬರಬೇಕೆಂದು ಆಜ್ಞೆಮಾಡಲು, ಅಲ್ಲಿಗೆ ಹೋಗುವ

ವಾದವರಿಗೆ ಈ ವಿಚಾರದಲ್ಲಿ ಸಂದೇಹ ಹುಟ್ಟಲಾರದು ಮೃಚ್ಛಕಟಿಕವು ವಸಂತಸೇನೆಯ ಅನುಸರಣೆ, ದ್ಯೂತ, ಚೌರ್ಯ, ಮುಂತಾದ ಅಂಶಗಳಲ್ಲಿ ಅತಿ ವಿಸ್ತಾರವನ್ನು ಒಳಕೊಂಡಿದೆ ಎಂಬುದು ಒಂದು ಸಾರಿ ಎರಡನ್ನೂ ಓದಿ ಹೋಲಿಸಿದರೆ ಸುಲಭವಾಗಿ ಗೊತ್ತಾಗುತ್ತದೆ ಇವೆರಡಕ್ಕೂ ಇರತಕ್ಕ ಒಂದು ಪ್ರಧಾನ ಭೇದವೆಂದರೆ, ಆರ್ಯಕಪಾಲಕರಿಗೆ ಸಂಬಂಧಪಟ್ಟ ರಾಜ್ಯ ಕ್ರಾಂತಿ ವೃತ್ತಾಂತ ಮೃಚ್ಛಕಟಿಕದಲ್ಲಿ ವಸಂತಸೇನಾ ಚಾರುದತ್ತರ ಪ್ರಣಯ ಕಥೆಯೂ, ಈ ಕ್ರಾಂತಿ ವೃತ್ತಾಂತವೂ ಹೆಣೆದುಕೊಂಡಿವೆ, ಇದಕ್ಕೆ ಶಕಾರನು ಉದ್ದಕ್ಕೂ ಸಂಯೋಗಿಯಾಗಿದ್ದಾನೆ ಈ ರಾಜಕೀಯ ವೃತ್ತಾಂತವು ಚಾರುದತ್ತದಲ್ಲಿ ಇಲ್ಲವೇ ಇಲ್ಲ. ಮೃಚ್ಛಕಟಿಕದಲ್ಲಿ ಇದು ನಾಲ್ಕನೆಯ ಅಂಕದ ಕೊನೆಯ ಭಾಗದಲ್ಲಿ, ಶರ್ವಿಳಕನು ಹೊಸದಾಗಿ ಲಭಿಸಿದ ಹೆಂಡತಿಯನ್ನು ಕರೆದುಕೊಂಡು ಹೋಗುವಾಗ "ತೆರೆಯಲ್ಲಿ" ಕೂಗಿ ಹೇಳುವ ಮಾತಿನಿಂದ ಆರಂಭವಾಗುತ್ತದೆ ಮೃಚ್ಛಕಟಿಕಕ್ಕೆ ಹೃದಯ ಸ್ವರೂಪವಾದ ಮಣ್ಣಿನ ಗಾಡಿಯ ವೃತ್ತಾಂತವು ನಾಟಕದ ಮಧ್ಯಕ್ಕೆ ಸರಿಯಾಗಿ, ಎಂದರೆ ಆರನೆಯ ಅಂಕದ ಆದಿಯಲ್ಲಿ, ಬರುತ್ತದೆ ಆದ್ದರಿಂದ ಅದಕ್ಕೂ ಇಲ್ಲಿ ಅವಕಾಶವಿಲ್ಲ ಈ ನಾಟಕವು ಭಾಸನ ಸರಣಿಯಲ್ಲಿಯೇ ಮುಂದಕ್ಕೂ ಬೆಳೆದಿದ್ದರೆ ಈ ವೃತ್ತಾಂತಗಳು ಬರುತ್ತಿದ್ದುವೋ ಇಲ್ಲವೋ ಹೇಳುವುದು ಸಾಧ್ಯವಿಲ್ಲ

## ೪ ಪ್ರತಿಜ್ಞಾಯೌಗಂಧರಾಯಣ

"ಪ್ರತಿಜ್ಞಾಯೌಗಂಧರಾಯಣ"ವು ಉದಯನನ ಕಥೆಯ ಪೂರ್ವಭಾಗದಿಂದ ರಚಿತವಾಗಿದೆ (ಪುಟ ೫೮). ಉದಯನನ ಮಂತ್ರಿಯಾದ ಯೌಗಂಧರಾಯಣನು ಸೆರೆಸಿಕ್ಕಿದ ತನ್ನ ರಾಜನನ್ನು ಬಿಡಿಸಿಕೊಂಡು ಬರುತ್ತೇನೆಂದು "ಪ್ರತಿಜ್ಞೆ" ಮಾಡಿ ಅದನ್ನು ನೆರವೇರಿಸಿದ್ದೇ ಇದರ ವಿಷಯ ಮಂತ್ರಿಯಾದರೂ ಯೌಗಂಧರಾಯಣನೇ ಪ್ರಧಾನ ಪಾತ್ರ ಎರಡನೆಯ ಅಂಕವನ್ನು ಬಿಟ್ಟು ಮಿಕ್ಕ ಮೂರು ಅಂಕಗಳಲ್ಲಿಯೂ ಓಡಾಟವೆಲ್ಲಾ ಅವನದೇ.* ಅವನು ಮಾತನಾಡಿದರೆ "ಆಹಾ ಏನು

* ಈ ನಾಟಕದಲ್ಲಿರುವುದು ಉದಯನನ ಕಥೆಯಾದರೂ ಪ್ರತಿಕ್ಷಣ

ಸ್ವರ ಗಾಂಭೀರ್ಯ! ಆರ್ಯನ ಒಂದಕ್ಷರದಿಂದ ಈ ಪ್ರಪಂಚವೆಲ್ಲಾ ತುಂಬಿಹೋಗಿದೆಯಲ್ಲ!' ಎಂದು ಎಲ್ಲರೂ ಆಶ್ಚರ್ಯಪಡುವ ತೇಜಸ್ವಿಯಾದ ವ್ಯಕ್ತಿ, ಆದರೂ ಅವನಿಗೆ ಅಪಾರವಾದ ಸ್ವಾಮಿ ಭಕ್ತಿ, ತನ್ನ ರಾಜನಿಗಾಗಲಿ ಪರರಾಜರಿಗಾಗಲಿ ಅವನಲ್ಲಿ ವಿಶೇಷ ಗೌರವ; ಅವನಿಂದ ಯಾವ ಕೆಲಸವಾದರೂ ಆಗಿಯೇ ತೀರುವುದೆಂದು ಮಿತ್ರರಿಗೆ ಧೈರ್ಯ, ಹಾಳಾಗುವುದೆಂದು ಶತ್ರುಗಳಿಗೆ ಹೆದರಿಕೆ

ಈ ನಾಟಕದ ಮೊದಲನೆಯ ಅಂಕದಲ್ಲಿ ವತ್ಸರಾಜನು ಮಹಾಸೇನನ ಕಡೆಯ ಸೈನಿಕರ ಕೈಗೆ ಸೆರೆಸಿಕ್ಕುವನು

ಎರಡನೆಯ ಅಂಕದಲ್ಲಿ ಮಹಾಸೇನನ ಅರಮನೆಗೆ ಪ್ರವೇಶ ಮಹಾಸೇನನಿಗೆ ವತ್ಸರಾಜನನ್ನು ಅಳಿಯನಾಗಿ ಮಾಡಿಕೊಳ್ಳಬೇಕೆಂದು ಆಸೆ, ಆದರೆ ಅದು ಸಾಧ್ಯವೇ ಎಂದು ಸಂದೇಹ. ಈ ಸಮಯದಲ್ಲಿ ವತ್ಸರಾಜನು ಸೆರೆ ಸಿಕ್ಕಿದನೆಂಬ ವರ್ತಮಾನವು ಬರುವುದು ಅದನ್ನು ಕೇಳಿ ಮಹಾಸೇನನಿಗೆ ಆಗುವ ಉತ್ಸಾಹವೂ ಸಂತೋಷವೂ ಸಂಭ್ರಮವೂ ಬಹು ಚೆನ್ನಾಗಿ ಚಿತ್ರಿಸಲ್ಪಟ್ಟಿವೆ—

**ಕಂಚುಕಿ**—ಶಾಲಂಕಾಯನ ಮಂತ್ರಿಗಳು ವತ್ಸರಾಜನನ್ನು ಹಿಡಿದರು

**ರಾಜ**—(ಸಂತೋಷದಿಂದ) ಏನೆಂದೆ!

**ಕಂಚುಕಿ**—ಶಾಲಂಕಾಯನ ಮಂತ್ರಿಗಳು ವತ್ಸರಾಜನನ್ನು ಹಿಡಿದರು

**ರಾಜ**— ಉದಯನನನ್ನೇ?

**ಕಂಚುಕಿ**— ಹೌದು

**ರಾಜ**—ಶತಾನೀಕರಾಜನ ಮಗ?

**ಕಂಚುಕಿ**— ನಿಜವಾಗಿಯೂ.

**ರಾಜ**—ಸಹಸ್ರಾನೀಕರಾಜನ ಮೊಮ್ಮಗ?

**ಕಂಚುಕಿ**—ಆತನೇಯೆ.

**ರಾಜ**—ಕೌಶಾಂಬಿಯ ರಾಜ?

---

ದಲ್ಲಿಯೂ ನಾವು ಅವನ ವಿಚಾರವನ್ನು ಕೇಳುತ್ತಿದ್ದರೂ, ಅವನನ್ನು ಮಾತ್ರ ಕವಿಯು ರಂಗದಮೇಲೆ ತಂದಿಲ್ಲ ಇದು ಯೌಗಂಧರಾಯಣನಿಗೆ ಪ್ರಾಧಾನ್ಯವನ್ನು ಕೊಡಲು ಮಾಡಿರುವ ಒಂದು ಉಪಾಯವೆಂದು ತೋರುತ್ತದೆ.

ಕಂಚುಕಿ—ಇದು ವ್ಯಕ್ತವಾಗಿದೆ

ರಾಜ—ಗಾಂಧರ್ವ ವಿದ್ಯಾನಿಪುಣ?

ಕಂಚುಕಿ—ಹಾಗೆಂದು ಹೇಳುತ್ತಾರೆ

ರಾಜ—ವತ್ಸರಾಜನೇ!

ಕಂಚುಕಿ—ಹೌದು ವತ್ಸರಾಜ

ರಾಜ—ಯೌಗಂಧರಾಯಣನು ಮೃತನಾದನೇ?

ಕಂಚುಕಿ—ಇಲ್ಲ, ಕೌಶಾಂಬಿಯಲ್ಲಿದ್ದಾನೆ

ರಾಜ—ಹಾಗಾದರೆ ವತ್ಸರಾಜ ಸಿಕ್ಕಿಲ್ಲ

ಕಂಚುಕಿ — ಮಹಾರಾಜರು ನಂಬಬಹುದು ನಾನು ಮುದುಕ, ಬ್ರಾಹ್ಮಣ, ಎಂದೂ ಮಹಾಸೇನಮಹಾರಾಜನಲ್ಲಿ ಹಿಂದೆ ಸುಳ್ಳು ಹೇಳಿದ್ದಿಲ್ಲ . .

ಶಾಲಂಕಾಯನನು ವತ್ಸರಾಜನ ವೀಣೆಯನ್ನು ತಂದು ಮಹಾಸೇನನಿಗೆ ಒಪ್ಪಿಸಲು, ಅದನ್ನು ಅವನು ತನ್ನ ಮಕ್ಕಳಲ್ಲಿ ಅರ್ಥಶಾಸ್ತ್ರಾಸಕ್ತನಾದ ಗೋಪಾಲಕನಿಗಾಗಲಿ ಗಾಂಧರ್ವದ್ವೇಷಿಯಾದ ಅನುಪಾಲಕನಿಗಾಗಲಿ ಕೊಡಲಿಷ್ಟವಿಲ್ಲದೆ, ವೀಣೆಯನ್ನು ಕಲಿಯಲು ಮೊದಲು ಮಾಡಿದ್ದ ತನ್ನ ಮಗಳು ವಾಸವದತ್ತೆಗೆ ಕೊಡಿಸುವನು, ವತ್ಸರಾಜನು ಹೋರಾಡಿ ಗಾಯವಡೆದು ಸೆರೆ ಸಿಕ್ಕಿದ್ದದ್ದರಿಂದ, ಅವನ ಗಾಯಗಳಿಗೆ ಔಷಧ ಹಾಕಿದರೇ ಇಲ್ಲವೇ, ಅವನನ್ನು ಸರಿಯಾದ ಕಡೆಯಲ್ಲಿ ಮಲಗಿಸಿದ್ದರೇ ಇಲ್ಲವೇ, ತಕ್ಕ ರೀತಿಯಲ್ಲಿ ಉಪಚಾರಾದಿಗಳು ನಡೆದುವೇ ಇಲ್ಲವೇ ಎಂದು ಬಹು ಅನುರಾಗದಿಂದ ವಿಚಾರಿಸಿಕೊಳ್ಳುವನು. ನಾಟಕದಲ್ಲೆಲ್ಲಾ ಈ ಅಂಕವೇ ಅತ್ಯಂತ ಸ್ವಾರಸ್ಯವಾದದ್ದು

ಮೂರನೆಯ ಅಂಕದಲ್ಲಿ ಯೌಗಂಧರಾಯಣ ರುಮಣ್ವಂತಾದಿಗಳು ಉದಯನನನ್ನು ಬಿಡಿಸಲು ಮಾಡುವ ಪ್ರಯತ್ನವೂ, ನಾಲ್ಕನೆಯ ಅಂಕದಲ್ಲಿ ಅವನು ವಾಸವದತ್ತೆಯೊಡನೆ ಕೌಶಾಂಬಿಗೆ ತಪ್ಪಿಸಿಕೊಂಡು ಹೋಗುವುದೂ ವಿವರಿಸಲ್ಪಟ್ಟಿವೆ.

ನಾಟಕವು ವಿನೋದದಿಂದ ಮುಗಿಯುತ್ತದೆ. ವಾಸವದತ್ತೆಯ ತಾಯಿಯಾದ ಅಂಗಾರವತಿಯು, ಮಗಳು ಹೋದಳೆಂದು ಅರಮನೆಯ

ಮೇಲಿನಿಂದ ಬಿದ್ದು ಪ್ರಾಣ ಕಳೆದುಕೊಳ್ಳಲು ಯತ್ನಿಸುವಳು ಮಹಾಸೇನನು ಇದನ್ನು ಕಂಡು, ವತ್ಸರಾಜನು ಗಾಂಧರ್ವರೀತಿಯಿಂದ ವಾಸವದತ್ತೆಯನ್ನು ಮದುವೆ ಮಾಡಿಕೊಂಡಿದ್ದನೆಂದೂ, ಆದ್ದರಿಂದ ಅದಕ್ಕೆ ಚಿಂತಿಸಬಾರದೆಂದೂ, ಅವರವರಿಗೆ ಮದುವೆ ನಡೆದುಹೋಗಿರುವುದರಿಂದಲೂ, ಅವರು ಎದುರಿಗೆ ಇಲ್ಲದ್ದರಿಂದಲೂ, ಅವರ ಚಿತ್ರಗಳನ್ನಿಟ್ಟು ವಿವಾಹವನ್ನು ನಡೆಸಿಬಿಟ್ಟರೆ ಸರಿಯೆಂದೂ ಹೆಂಡತಿಯನ್ನು ಸಮಾಧಾನಪಡಿಸುವನು

## ೫ ಅಭಿಷೇಕ ನಾಟಕ

"ಅಭಿಷೇಕ ನಾಟಕ"ದಲ್ಲಿ ಕಿಷ್ಕಿಂಧಾ ಸುಂದರ ಯುದ್ಧ ಕಾಂಡಗಳ ರಾಮಾಯಣ ಕಥೆಯು ಪ್ರತಿಪಾದಿತವಾಗಿದೆ ಎಂದೂ ಪ್ರತಿಮಾನಾಟಕದೊಡನೆ ಹೋಲಿಸಿದರೆ ಇದು ಶುಷ್ಕಸಂಗ್ರಹವೆಂದೂ ಹಿಂದೆಯೇ ತಿಳಿಸಿದೆ (ಪುಟ ೮೬) ಮೂರು ದೊಡ್ಡ ಕಾಂಡಗಳನ್ನು ಸಂಗ್ರಹ ಮಾಡಿ ಅದನ್ನು ಅದಮಿ ಒಂದು ಸಣ್ಣ ನಾಟಕದಲ್ಲಿ ತುಂಬಿರುವುದೇ ಒಂದು ಗುಣ ಮತ್ತು ಅವಗುಣ ಇದೊಂದನ್ನೇ ಓದಿದವರಿಗೆ ಭಾಸನಿಗೆ ಕಲ್ಪನಾಶಕ್ತಿಯೇ ಇಲ್ಲವೇನೋ ಎನ್ನಿಸುತ್ತದೆ ಆದರೆ ಕಣ್ಣುಬಿಟ್ಟು ನೋಡಿದರೆ, ಇದರಲ್ಲಿಯೂ ಸನ್ನಿವೇಶಕಲ್ಪನೆ ಪಾತ್ರರಚನೆ ಮುಂತಾದವುಗಳಲ್ಲಿ ಕೌಶಲವು ಕಂಡುಬರುತ್ತದೆ, ಹೀಗೆಂದು ಇದರ ಪೂರ್ವಭಾಗದ ಕಥೆಯುಳ್ಳ ಪ್ರತಿಮಾನಾಟಕದೊಡನೆ ಹೋಲಿಸಲಾಗದು ಇದಕ್ಕೂ ಅದಕ್ಕೂ ಅಜಗಜಾಂತರ !

ಮಾದರಿಗಾಗಿ ಇದರ ಮೂರನೆಯ ಅಂಕದಿಂದ ಸ್ವಲ್ಪ ಭಾಗವನ್ನು ಇಲ್ಲಿ ಅನುವಾದ ಮಾಡಿದೆ :—

(ರಾಕ್ಷಸರು ಹನೂಮಂತನನ್ನು ಹಿಡಿದುಕೊಂಡು ಬಂದು ರಾವಣನ ಮುಂದೆ ನಿಲ್ಲಿಸುವರು)

ರಾಕ್ಷಸರು—ಆ ! ಹೀಗೆ ಬಾ, ಹೀಗೆ ಬಾ.

ಹನೂಮಂತ—ನಾನೇನು ಆ ದುಷ್ಟರಾಕ್ಷಸನಿಗೆ ಸೋತೆನೇ ? ಆ ರಾಕ್ಷಸರಾಜನನ್ನು ನೋಡಬೇಕೆಂದು ನಾನೇ ಸಿಕ್ಕಿಕೊಂಡೆ ! (ಹತ್ತಿರಕ್ಕೆ

ಹೋಗಿ) ಏನಯ್ಯ ರಾಜ ! ಕ್ಷೇಮವೋ ನೀನು ?

ರಾವಣ—(ಅಲ್ಲಗಳೆಯುತ್ತ) ವಿಭೀಷಣ ! ಅದೆಲ್ಲಾ ಇವನ ಕೆಲಸವೇ ?

ವಿಭೀಷಣ—ಅದಕ್ಕಿಂತಲೂ ಹೆಚ್ಚು ಮಹಾರಾಜ !

ರಾವಣ—ನಿನಗೆ ಹೇಗೆ ಗೊತ್ತು ?

ವಿಭೀ—" ನೀನು ಯಾರು ? " ಎಂದು ಮಹಾರಾಜನು (ಆತನನ್ನು) ಕೇಳೋಣವಾಗಲಿ

ರಾವಣ—ಎಲೋ ವಾನರ ! ಯಾರು ನೀನು ? ಏಕೆ ನಮ್ಮ ಅಂತಃಪುರ ವನ್ನು ಪ್ರವೇಶಿಸಿದೆ ?

ಹನೂ—ಕೇಳು ! ನಾನು ಆಂಜನೇಯ, ಮಾರುತನ ಮಗ. ಹನೂ ಮಂತನೆಂಬ ವಾನರ, ಶ್ರೀರಾಮನಿಂದ ಬಂದಿದ್ದೇನೆ

ವಿಭೀ—ಮಹಾರಾಜ, ಕೇಳಿದೆಯೋ ?

ರಾವಣ—ಏನು ಕೇಳಿದ್ದರಿಂದ ?

ವಿಭೀ—ಹನೂಮಂತ, ಪೂಜ್ಯನಾದ ರಾಮನು ಏನು ಅಪ್ಪಣೆಕೊಡಿಸಿ ದನು ?

ಹನೂ—ಕೇಳಿ, ರಾಮಶಾಸನವನ್ನು !

ರಾವಣ—ಏನು ಏನು ? ರಾಮ " ಶಾಸನ "ವೆಂದನೇ ? ಆಃ, ಕೊಂದು ಬಿಡಿ ಈ ವಾನರನನ್ನು !

ವಿಭೀ—ಮಹಾರಾಜನು ಪ್ರಸನ್ನನಾಗಬೇಕು ಎಂಥ ಅಪರಾಧ ಮಾಡಿ ದ್ದರೂ ದೂತನನ್ನು ಕೊಲ್ಲಬಾರದು, ಇಲ್ಲದಿದ್ದರೆ ರಾಮನ ಮಾತ ನ್ನಾದರೂ ಕೇಳಿ ಆಮೇಲೆ ಮಹಾರಾಜನು ಮನಸ್ಸಿಗೆ ಬಂದಂತೆ ಮಾಡಬಹುದು

ರಾವಣ—ಲೋ ವಾನರ ! ಏನೆಂದ ಆ ಮನುಷ್ಯ ?

ಹನೂ—ಕೇಳು !—" ಶಂಕರನನ್ನು ಬೇಕಾದರೂ ಶರಣಹೋಗು, ದುರ್ಗ ದಲ್ಲಿ ಅವಿತುಕೊ, ಪಾತಾಳದಲ್ಲಿರು,—ನಿನ್ನನ್ನು ಶರವರ್ಷದಿಂದ ತುಂಡು ತುಂಡು ಮಾಡಿ ಯಮಸದನಕ್ಕೆ ಕಳುಹಿಸುತ್ತೇನೆ " ಎಂದನು

ರಾವಣ—ಹ ಹ ಹ !! ದೇವದಾನವರನ್ನು ಗೆದ್ದು ಪೌಲಸ್ತ್ಯನಿಂದ

ಪುಷ್ಪಕವನ್ನು ಕಿತ್ತುಕೊಂಡವನು ನಾನು! ನನ್ನ ಮೇಲೆ ಆ ಮನುಷ್ಯನು ಯುದ್ಧಕ್ಕೆ ಬರುತ್ತಾನೆಯೇ?

ಹನೂ—ಇಂಥ ಶೂರನಾದ ನೀನು ಅವನ ಪತ್ನಿಯನ್ನೇಕೆ ಕದ್ದು ತಂದೆ?

ವಿಭೀ—ಹನೂಮಂತನು ಚೆನ್ನಾಗಿ ಕೇಳಿದ. ರಾಕ್ಷಸರಾಜ, ನೀನು ರಾಮನನ್ನು ಕಳುಹಿಸಿಬಿಟ್ಟು, ಭಿಕ್ಷುಕವೇಷದಿಂದ ಮೋಸಗೊಳಿಸಿ ಕರೆತರಲಿಲ್ಲವೇ ಆಕೆಯನ್ನ?

ರಾವಣ—ವಿಭೀಷಣ, ಏನು ಪರಪಕ್ಷವನ್ನು ಹಿಡಿಯುತ್ತೀಯೆ!

ವಿಭೀ—ಮಹಾರಾಜನು ಪ್ರಸನ್ನನಾಗಬೇಕು ನನ್ನ ಹಿತವಚನವನ್ನು ಕೇಳು ರಾಮನ ಧರ್ಮಪತ್ನಿಯನ್ನು ಒಪ್ಪಿಸಿಬಿಡು ಮಹಾರಾಜನಿಂದ ಈ ರಾಕ್ಷಸಕುಲವು ನಾಶವಾಗಬಾರದೆಂಬುದು ನನ್ನ ಕೋರಿಕೆ

ರಾವಣ—ವಿಭೀಷಣ! ಸಾಕು ಸಾಕು ನಿನ್ನ ಭಯವನ್ನು ಬಿಡು, ಸಿಂಹವು ಜಿಂಕೆಯಿಂದ ಹತವಾಗುತ್ತದೆಯೆ? ಮಹಾಮದಗಜವು ನರಿಯಿಂದ ಹತವಾಗುತ್ತದೆಯೇ?

ಹನೂ—ರಾವಣ! ನಿನ್ನ ಭಾಗ್ಯಕ್ಕೆಲ್ಲಾ ಕೊನೆಯಾಗಿದೆ ಎಂದು ತೋರುತ್ತದೆ, ಅದಕ್ಕೇ ಹೀಗೆ ಮಾತನಾಡುತ್ತಿದ್ದೀಯೆ! ಆ ಭುವನೈಕನಾಥನನ್ನು ಇಂಥ ನೀಚ ಮಾತುಗಳಿಂದ ತಿರಸ್ಕರಿಸಿ ಏಕೆ ಕ್ಷೀಣಪುಣ್ಯನಾಗುತ್ತೀಯೆ?

ರಾವಣ—ಏನು ಏನು, ನನ್ನ ಹೆಸರೆತ್ತಿ ಬಯ್ಯುತ್ತೀಯಾ? ಕೊಂದುಬಿಡಿ ಈ ವಾನರನನ್ನು! ಅಥವಾ ದೂತವಧೆ ಸರಿಯಲ್ಲ ಶಂಕುಕರ್ಣ, ಈ ವಾನರವನ್ನು ಬಾಲ ಹತ್ತಿಸಿ ಬಿಟ್ಟುಬಿಡು!

ಶಂಕು—ಮಹಾರಾಜನ ಅಪ್ಪಣೆ

ರಾವಣ—ಅಥವಾ ಬಾ ಇಲ್ಲಿ!

ಹನೂ—ಬಂದಿದ್ದೇನೆ

ರಾವಣ—ಆ ಮನುಷ್ಯನಿಗೆ ನಾನು ಹೇಳಿದೆನೆಂದು ಹೀಗೆ ಹೇಳು—
"ಇಗೋ ನಿನ್ನ ಹೆಂಡತಿಯನ್ನು ಹೊಡೆದುಕೊಂಡು ಬಂದು ನಿನಗೆ ಸೋಲನ್ನುಂಟುಮಾಡಿದ್ದೇನೆ. ಪೌರುಷವಿದ್ದರೆ ಯುದ್ಧಕ್ಕೆ ಬಾ!"

ಹನೂ—ರಾವಣ, ವಾನರಸೇನೆಯು ಜಾಗ್ರತೆಯಾಗಿ ಬಂದು ನಿನ್ನ ಲಂಕೆಗೆ ಮುತ್ತಿಗೆ ಹಾಕುವುದು, ಆದರ ಗೋಪುರಗಳು ಉದ್ಯಾನ ಗಳೆಲ್ಲಾ ಹಾಳಾಗುವುವು, ನೀನು ಶ್ರೀರಾಮನ ಬಿಲ್ಲಿನ ದನಿ ಯಿಂದಲೇ ಪರಾಜಿತನಾಗುವೆ!

ರಾವಣ—ಆಃ! ಅಟ್ಟಿಬಿಡಿ ಈ ವಾನರನನ್ನ !

ರಾಕ್ಷಸರು—ಹೀಗೆ ಬಾ, ಹೀಗೆ ಬಾ

(ಹೊರಟು ಹೋಗುವರು)

ವಿಭೀಷಣನಿಗೆ ಇದ್ದ ರಾಮಪಕ್ಷಪಾತವನ್ನು ನೋಡಿ ರಾವಣನು ರೇಗಿ "ಅಣ್ಣನೆಂಬ ಸ್ನೇಹವಿಲ್ಲದೆ ಇವನು ಶತ್ರುಪಕ್ಷವನ್ನು ಸೇರಿದ್ದಾನೆ ಇವನನ್ನು ನೋಡಲಾರೆ, ಆಚೆಗೆ ಕಳುಹಿಸಿಬಿಡಿ" ಎಂದು ಗರ್ಜಿಸು ವನು ವಿಭೀಷಣನು "ನಾನೇ ಹೊರಟುಹೋಗುತ್ತೇನೆ" ಎಂದು ಹೊರಟು "ಆಶ್ರಿತರಕ್ಷಕನಾದ ಶ್ರೀರಾಮನನ್ನು ಆಶ್ರಯಿಸಿ, ನಷ್ಟವಾಗಿ ರುವ ಈ ನಿಶಾಚರ ಕುಲವನ್ನು ಉದ್ಧಾರಮಾಡುತ್ತೇನೆ" ಎಂದು ಸಂಕಲ್ಪಿಸಿ ಶ್ರೀರಾಮನ ಬಳಿಗೆ ಹೋಗಿ ಅವನನ್ನು ಆಶ್ರಯಿಸುವನು (ಅಂಕ ೩)

---

"ಭವಂತ್ವರಜಸೋ ಗಾವಃ ಪರಚಕ್ರಂ ಪ್ರಶಾಮ್ಯತು |
ಇಮಾಮಪಿ ಮಹೀಂ ಕೃತ್ಸ್ನಾಂ ರಾಜಸಿಂಹಃ ಪ್ರಶಾಸ್ತು ನಃ ||"

ಶುಭಂ ಭೂಯಾತ್

ಅ ನು ಬ ಂ ಧ ೨

# ಯ ಜ್ಞ ಫ ಲ

೧೯೪೧ ರಲ್ಲಿ ಕಾಥಿಯವಾಡ ಸಂಸ್ಥಾನದ ಗೊಂಡಲವೆಂಬ ಊರಿನ ನಿವಾಸಿಗಳಾದ ಜೀವರಾಮ ಕಾಲಿದಾಸ ಶಾಸ್ತ್ರಿಗಳೆಂಬವರು "ಯಜ್ಞಫಲ" ಎಂಬ ಸಂಸ್ಕೃತ ನಾಟಕವನ್ನು ಎರಡು ಹಸ್ತಪ್ರತಿಗಳ ಆಧಾರದ ಮೇಲೆ ಪ್ರಕಟಿಸಿದರು 1 ಇವು ಅವರಿಗೆ ಅದಕ್ಕಿಂತ ಹದಿನೇಳು ವರ್ಷಗಳ ಹಿಂದೆಯೇ ದೊರೆತಿದ್ದುವಂತೆ ಅವು ಕಾಶಿ ಸೂರತ್ ಪಂಜಾಬ್ ಮುಂತಾದ ಉತ್ತರ ಭಾರತ ಪ್ರದೇಶದಲ್ಲಿ ಅವರಿಗೆ ದೊರೆತ ಇತರ ಲಿಖಿತ ಪುಸ್ತಕಗಳ ಜೊತೆಯಲ್ಲಿ ಸಿಕ್ಕಿದವುಗಳು ಯಜ್ಞಫಲದ ಒಂದು ಪ್ರತಿಯ ಕೊನೆಯಲ್ಲಿ "ಇತಿ ಯಜ್ಞನಾಟಕಂ ಸಮಾಪ್ತಂ" ಎಂದು ಇದೆ ಇದೇ ಕ ಪ್ರತಿ ಇದೇ ಮುದ್ರಿತ ಪ್ರತಿಗೆ ಆಧಾರ. ಇನ್ನೊಂದು ಪ್ರತಿಯ ಕೊನೆಯಲ್ಲಿ "ಇತಿ ಯಜ್ಞಫಲಂ ಸಂಪೂರ್ಣಂ " ಎಂದಿದೆ ಇದೇ ಖ ಪ್ರತಿ ಇದರಿಂದ ಅಲ್ಲಲ್ಲೇ ಪಾಠಾಂತರಗಳನ್ನು ಸೂಚಿಸಿದೆ ಇವೆರಡರಲ್ಲಿಯೂ ಪ್ರತಿಕಾರನು ತನ್ನ ಕಾಲವನ್ನು ವಿಕ್ರಮ ಶಕದಲ್ಲಿ ಬರೆದಿದ್ದಾನೆ ಆದ್ದರಿಂದ ಕ ಪ್ರತಿಯು ಕ್ರಿ ಶ ೧೬೭೦ ರಲ್ಲಿ ಹುಟ್ಟಿದ್ದೆಂದೂ ಖ ಪ್ರತಿಯು ೧೭೪೪ ರಲ್ಲಿ ಹುಟ್ಟಿದ್ದೆಂದೂ ಗೊತ್ತಾಗುತ್ತದೆ

ಗಣಪತಿ ಶಾಸ್ತ್ರಿಗಳು ಪ್ರಕಟಿಸಿದ ಸ್ವಪ್ನವಾಸವದತ್ತಾದಿ ಹದಿಮೂರು ನಾಟಕಗಳಿಗೂ ಇದಕ್ಕೂ ಎಲ್ಲಾ ಅಂಶಗಳಲ್ಲಿಯೂ ಸಾದೃಶ್ಯವಿದೆ — ನಾಟಕಕ್ಕೆ ಹೆಸರು ಕೊಟ್ಟಿರುವ ಬಗೆ, ನಾಂದ್ಯಂತದಲ್ಲಿ ಅನಂತರ ಸೂತ್ರಧಾರನು ಪ್ರವೇಶಿಸುವುದು, ಮಂಗಳ ಶ್ಲೋಕದಲ್ಲಿ ಮುದ್ರಾಲಂಕಾರ, ಸ್ಥಾಪನೆ, ಕವಿಯ ಹೆಸರು ಹೇಳದಿರುವುದು, ಪಾತ್ರಗಳು

---

1 The YAJNAPHALA of Mahakavi Bhasa, with a short introduction by Rajavaidya Jivaram Kalidasa Sastri, published by the Rasashala Aushadhashram, Gondal, Kathiawar India, 1941 Royal 16 mo pages 20+208 Price Rs 5

ಹೀಗೆ ಹೋಗಿ ಹಾಗೆ ಬರುವುದು (ನಿಷ್ಕ್ರಮ್ಯ ಪ್ರವಿಶ್ಯ), ಪ್ರತೀಹಾರಿಗೆ ವಿಜಯಾ ಎಂಬ ಹೆಸರು, ಭರತ ವಾಕ್ಯದಲ್ಲಿ "ರಾಜಹಂಸ"ದ ನಿರ್ದೇಶ, ಕಾಳಿದಾಸನ ಕಾವ್ಯನಾಟಕಗಳಲ್ಲಿ ಕಂಡು ಬರುವ ಭಾವಗಳು, ಸರಳವಾದ ಲಘುವಾದ ಶೈಲಿ, ಅಲಂಕಾರ ಕವಿಸಮಯಗಳು ಹೆಚ್ಚಾಗಿಲ್ಲದಿರುವುದು, ಪಾತ್ರಗಳಲ್ಲಿ ಸಾತ್ವಿಕ ಮಧುರ ಮನೋಧರ್ಮ ಇತ್ಯಾದಿ ಆದ್ದರಿಂದ ಇದೂ ಆ ಹದಿಮೂರು ನಾಟಕಗಳ ಗುಂಪಿಗೇ ಸೇರಿದ್ದೆಂದೂ, ಭಾಸನದಾಗಿರುವುದು ಸಂಭವವೆಂದೂ ಎಲ್ಲರೂ ನಂಬಿದರು ಆದರೆ ಸ್ವಲ್ಪ ಕಾಲವಾದಮೇಲೆ ಗೋಪಾಲದತ್ತ ಶಾಸ್ತ್ರಿಗಳೆಂಬವರು ಇದ್ದಕ್ಕಿದ್ದ ಹಾಗೆ ಈ ನಾಟಕವು ಭಾಸನನ್ನನುಕರಿಸಿ ತಾವು ಬರೆದದ್ದೆಂದೂ, ಅದಕ್ಕೆ ನಾಟಕದ ಸಂಸ್ಕೃತಪೀಠಿಕೆಯಲ್ಲಿಯೂ ನಾಟಕದೊಳಗೂ ಸ್ಪಷ್ಟಸೂಚನೆಗಳನ್ನಿಟ್ಟಿದ್ದರೆಂದೂ ಒಂದು ಕಥೆಯನ್ನು ಹುಟ್ಟಿಸಿದರು. ಸಂಸ್ಕೃತ ಉಪೋದ್ಘಾತದ ಮೊದಲ ಹತ್ತೊಂಬತ್ತು ವಾಕ್ಯಗಳನ್ನು ತೆಗೆದುಕೊಂಡು ಅವುಗಳ ಎಂಟನೆಯ ಅಕ್ಷರಗಳನ್ನು ಕ್ರಮವಾಗಿ ಜೋಡಿಸಿದರೆ ಅದು "ಉಪೋದ್ಘಾತ ಭೀ ಮೇರೇಸೇ ಹೀ ಲಿಖಾಯಾ" ಎಂಬ ಹಿಂದೀ ವಾಕ್ಯವಾಗುತ್ತದೆ ಇದನ್ನು ನೋಡಿ ಎಲ್ಲರೂ ಸಂಭವವೆಂದು ತಿಳಿದುಕೊಂಡರು ಆದರೆ ಈಚೆಗೆ ಈ "ಸೂಚನೆ" ಗಳೆಲ್ಲಾ ಗೋಪಾಲದತ್ತ ಶಾಸ್ತ್ರಿಗಳ ಕೃತ್ರಿಮವೆಂದು ತಿಳಿಯಿತು 2 ಏಕೆಂದರೆ ಉಪೋದ್ಘಾತವನ್ನು ಬರೆದವರು ಅವರೇಯೆ ಅದಕ್ಕ ರುಜು ಹಾಕಿದ್ದವರು ಕಾಲಿದಾಸ ಶಾಸ್ತ್ರಿಗಳು ಉಪೋದ್ಘಾತ ಬರೆದಾಗ ಅವರು ಬೇಕೆಂದೇ ವಾಕ್ಯಗಳನ್ನು ಹೀಗೆ ರಚಿಸಿರಬಹುದು, ಮುಂದೆ ಬರುವುವೆಂದು ಹೇಳಿರುವ ಸೂಚನೆಗಳು ಸುಳ್ಳು, ಇಲ್ಲವೇ ಘುಣಾಕ್ಷರ ನ್ಯಾಯ, ಹಸ್ತಪ್ರತಿ ಈಚಿನದಲ್ಲ, ಕೃತ್ರಿಮ

---

2 ಇವರ ಸ್ಥಳ ಅಲ್ಮೋರಾ ಜಯಪುರ, ಬೊಂಬಾಯಿ, ಗೊಂಡಲ ಮುಂತಾದ ಕಡೆಗಳಲ್ಲಿ ಸಂಚಾರ ಮಾಡುತ್ತಿದ್ದರಂತೆ. ಯಜ್ಞಫಲದ ಖ ಪ್ರತಿಯನ್ನು ಕಾಲಿದಾಸಶಾಸ್ತ್ರಿಗಳಿಂದ ತೆಗೆದುಕೊಂಡು ಹೋದವರು ಅದನ್ನು ಹಿಂತಿರುಗಿ ಕೊಡಲೇ ಇಲ್ಲವಂತೆ ಗ್ರಂಥವನ್ನು ಅಚ್ಚಿಗೆ ಸಿದ್ಧಪಡಿಸಿದವರೂ ಅವರೇಯಂತೆ ಅವರು ಗ್ರಂಥ ಪ್ರಕಾಶವಾದ ಸ್ವಲ್ಪ ಕಾಲದ ಮೇಲೆ ಲಕ್ನೋ ನಗರದಲ್ಲಿ ಕಾಲವಾದರಂತೆ

ವ ವುಗಳೆಲ್ಲವನ್ನೂ ಡಾ|| ದಂಡೇಕರವರು ಮೂಲಪ್ರತಿಯ ಸೂಕ್ಷ್ಮ ಪರೀಕ್ಷೆಯಿಂದ ನಿರ್ವಿವಾದವಾಗಿ ನಿರ್ಧರಿಸಿದ್ದಾರೆ[3]

ಆದ್ದರಿಂದ ಹಿಂದೆ ನಮಗೆ ತಿಳಿದಿದ್ದ ಹದಿಮೂರು ನಾಟಕಗಳನ್ನು ಬರೆದ ಕವಿಯೇ "ಯಜ್ಞಫಲ"ವನ್ನು ಒರೆದಿರುವುದು ಸಂಭವ ದೇವನಾಗರೀ ಲಿಪಿಯಲ್ಲಿ ಕಾಗದದಮೇಲೆ ಬರೆದಿರುವ ಪ್ರಾಚೀನ ಹಸ್ತಪ್ರತಿಯು ಉತ್ತರದೇಶದಲ್ಲಿ ದೊರೆತದ್ದರಿಂದ, ಇವು ಶಾಕ್ಯರು ಮಾಡಿಕೊಂಡ ರಂಗ ಪ್ರತಿಗಳೆಂದು ಇನ್ನು ಹೇಳುವ ಹಾಗಿಲ್ಲ[4] ಗಣಪತಿ ಶಾಸ್ತ್ರಿಗಳಿಗೆ ದೊರೆತವು ಗ್ರಂಥಾಕ್ಷರದಲ್ಲಿ ಓಲೆಯಮೇಲೆ ಬರೆದಿದ್ದವು, ದಕ್ಷಿಣ ದೇಶದ ತುದಿಯಲ್ಲಿ ಮಾತ್ರ ದೊರೆತಿದ್ದವು ಅದರಲ್ಲಿಯೂ ವಸ್ತುಸಂಗ್ರಹ ಚಾತುರ್ಯ, ಪದ್ಯಗಳನ್ನು ಪಾತ್ರಗಳು ಹಂಚಿಕೊಂಡು ಮಾತನಾಡುವುದು, ಕೈಕೇಯಿ ಪಾತ್ರದ ಪರಿವರ್ತನೆ, ಪದ್ಯಬಾಹುಳ್ಯ,[5] ವರ್ಣನೆಯ ಸ್ವರೂಪ,[6] ಶಾಸ್ತ್ರಗಳ ಹೆಸರುಗಳು ಮುಂತಾದವುಗಳನ್ನು ಹೋಲಿಸಿದರೆ, ಯಜ್ಞಫಲವು ಪ್ರತಿಮಾನಾಟಕದ ಪೂರ್ವವರ್ತಿ ಎಂಬುದು ಸಂಭವವಾಗಿ ಕಾಣುತ್ತದೆ. ಪ್ರತಿಮಾನಾಟಕವನ್ನು ಬರೆದವನೇ ಯಜ್ಞಫಲವನ್ನು ಬರೆ

---

3 The Authorship of the Yajnaphala—by R N Dandekar, Annals of the Bhandarkar Oriental Research Institute, Vol XXXI (1951) pages 307-314 'Yajnaphala' a critical study' by Dr G K Bhat, Journal of the University of Bombay, September 1951, Arts Number (26) pages 64-75 ಮತ್ತು 'Yajnaphala a newly discovered drama by Bhasa' by A D Pusalkar, Journal of the Bombay branch of the Royal Asiatic Society, 1942, pages 23-29 ಎಂಬ ಲೇಖನಗಳನ್ನೂ ನೋಡಬಹುದು

4 ಕಾಲೋ ಲಗತಿ(೬೬),ಗಾಲೀಂ ದದಾತಿ(೧೦೭), ಕಲ್ಯೇ ವನಂ ಯಾಸ್ಯಾಮು—ಇವು ಉತ್ತರದೇಶದ ಪ್ರಯೋಗಗಳಾಗಿ ಕಾಣುತ್ತವೆ.

5 ಯಜ್ಞಫಲದಲ್ಲಿ ಒಟ್ಟು ೨೯೧ ಪದ್ಯಗಳಿವೆ, ಪ್ರತಿಮಾನಾಟಕದಲ್ಲಿ ೧೫೭ ಪದ್ಯಗಳಿವೆ ಎರಡರಲ್ಲಿಯೂ ಅಂಕಸಂಖ್ಯೆ ಏಳು

6 ಸೂರ್ಯಾಸ್ತ, 1 ೨೮_೨೯, ಉದ್ಯಾನ 11 ೨೩, ರಾಮ 111 ೨೭, ಹಿಂತಿರುಗಿ ಮನೆಗೆ ಬರುವ ಹಸುಗಳು IV ೪೮_೫೦ ಇತ್ಯಾದಿ

ದನೆಂದು ಹೇಳಿದರೆ ಒಪ್ಪುವಂತಿದೆ ಪ್ರತಿಮಾನಾಟಕವು ಭಾಸನದಾದರೆ ಇದೂ ಭಾಸನದೇಯೆ

"ಯಜ್ಞಫಲ"ದಲ್ಲಿರುವುದು ಬಾಲಕಾಂಡದ ಕಥೆ—ರಾಮ ಲಕ್ಷ್ಮಣ ಭರತ ಶತ್ರುಘ್ನರ ಹುಟ್ಟು ಬಳೆವಣಿಗೆ ವಿದ್ಯೆ ವಿವಾಹ ಇವು ಮೂರು ಯಜ್ಞಗಳ ಫಲಗಳು ಅವರ ಹುಟ್ಟು ದ ಶ ರ ಥ ನ ಪುತ್ರಕಾಮೇಷ್ಟಿ ಯಾಗದ ಫಲ , ವಿದ್ಯೆ, ಅಸ್ತ್ರಸಂಪಾದನೆ, ವಿಶ್ವಾಮಿತ್ರನ ಯಾಗ ಸಂರಕ್ಷಣೆಮಾಡಿ ಪಡೆದದ್ದು , ಮದುವೆ ಜನಕನು ನಡಸಿದ ಯಜ್ಞಾನಂತರದಲ್ಲಿ ರಾಮನು ಧನುರ್ಭಂಗ ಮಾಡಿ ಆದದ್ದು. ಇದಲ್ಲದೆ ಯಜ್ಞಫಲವೆಂಬ ಮಾತೂ ಭಾವವೂ ನಾಟಕದ ಉದ್ದಕ್ಕೂ ಅಲ್ಲಲ್ಲೇ ಬರುತ್ತವೆ ಈ ಶ್ಲೋಕವನ್ನು ನೋಡಿ —ಈಶಂ ಸಮಾರಾಧ್ಯ ನರಶ್ಚ ಯಜ್ಞೇಯಥೇಪ್ಸಿತಂ ಯಜ್ಞಫಲಂ ಭುನಕ್ತಿ. (VI ೮ )

**ಮೊದಲನೆಯ ಅಂಕದಲ್ಲಿ,** ದಶರಥರಾಜನಿಗೆ ಪುತ್ರೋತ್ಸವವಾದದ್ದಕ್ಕಾಗಿ, ಪ್ರಜೆಗಳೆಲ್ಲರೂ ಅವರವರ ಇಷ್ಟಾರ್ಥವನ್ನು ಪಡೆದು ಸಂತೋಷವಾಗಿದ್ದಾರೆ ಸೆರೆಯಲ್ಲಿದ್ದವರಿಗೆ ಬಿಡುಗಡೆಯಾಗಿದೆ. ದಶರಥನು ಯುವಕನಂತೆ ಉತ್ಸಾಹದಿಂದ ಧರ್ಮ ಬಿಡದೆ ರಾಜ್ಯ ಪರಿಪಾಲನೆ ಮಾಡುತ್ತಿದ್ದಾನೆ

**ಎರಡನೆಯ ಅಂಕದಲ್ಲಿ,** ರಾಜಕುಮಾರರಿಗೆ ಸುಮಾರು ಹದಿನೈದು ವರ್ಷ ವಯಸ್ಸು, ಮುಂಜಿಯಾಗಿದೆ. ವಸಿಷ್ಠರಿಂದ ಅವರು ಎಲ್ಲಾ ಶಾಸ್ತ್ರಗಳನ್ನೂ ಕಲಿತು ಕುಶಾಗ್ರಬುದ್ಧಿಗಳೆಂದು ಮೆಚ್ಚಿಗೆ ಪಡೆದಿದ್ದಾರೆ ಇನ್ನು ಅವರು ಶಸ್ತ್ರಾಸ್ತ್ರಗಳನ್ನು ಕಲಿಯಬೇಕಾಗಿದೆ ಅವರಲ್ಲಿ ಯಾರನ್ನು ಯುವರಾಜನನ್ನಾಗಿ ಮಾಡಬೇಕೆಂದು ದಶರಥನಿಗೆ ಚಿಂತೆಯಾಗಿದೆ ಅವನು ಕೈಕೇಯಿಯನ್ನು ಮದುವೆ ಮಾಡಿಕೊಂಡಾಗ ಅವಳ ಮಗನಿಗೆ ರಾಜ್ಯ ಕೊಡುವುದಾಗಿ ಆತುರದಲ್ಲಿ ಮಾತು ಕೊಟ್ಟಿದ್ದಾನೆ ಆದರೆ ರಾಜಗುಣಗಳುಳ್ಳ ರಾಮನಿಗೇ ರಾಜ್ಯ ಕೊಡಬೇಕೆಂದು ಆಸೆ ಆದ್ದರಿಂದ ರಾಣಿಯರೂ ಪ್ರಜೆಗಳೂ ಪರಿಜನರೂ ಮಂತ್ರಿಗಳೂ ಭೃತ್ಯರೂ, ಮುಖ್ಯವಾಗಿ ಭರತನೂ, ರಾಮನಲ್ಲಿ ಅನುರಕ್ತರಾಗುವಂತೆ ಪ್ರಯತ್ನ ಮಾಡೆಂದು ಸುಮಂತ್ರನಿಗೆ ಆಜ್ಞೆ ಮಾಡುತ್ತಾನೆ.

ಅಷ್ಟು ಹೊತ್ತಿಗೆ ಮೂವರು ರಾಣಿಯರೂ ಬರುತ್ತಾರೆ ಅವರಲ್ಲಿ ಕೌಸಲ್ಯೆಗೆ ತಾನು ಹಿರಿಯ ರಾಣಿಯೆಂದು ಅಭಿಮಾನ ಸುಮಿತ್ರೆ ಪ್ರಶಾಂತಳು ಕೈಕೇಯಿಯು ಗಂಭೀರೆ ದಶರಥನು ತನ್ನ ರಾಜ್ಯದ ವಿಚಾರವನ್ನೆತ್ತಿ ತನ್ನ ನಾಲ್ಕು ಮಕ್ಕಳೂ ಯೋಗ್ಯರಾಗಿರುವುದರಿಂದ ಅವರಿಗೆ ರಾಜ್ಯವನ್ನು ಸಮವಾಗಿ ಹಂಚುವನೆನ್ನುವನು ರಾಮನು ಯೋಗ್ಯತಮನಾಗಿರುವುದರಿಂದ ಅವನಿಗೇ ರಾಜ್ಯವೆಲ್ಲಾ ಸಲ್ಲುವುದೆಂದು ಕೈಕೇಯಿ ಸ್ಪಷ್ಟವಾಗಿ ಹೇಳುವಳು ದಶರಥನು ತಾನು ಕೈಕೇಯಿಯನ್ನು ಮದುವೆ ಮಾಡಿಕೊಂಡಾಗ ಅವಳ ಮಗನಿಗೆ ರಾಜ್ಯ ಕೊಡುವುದಾಗಿ ಪ್ರತಿಜ್ಞೆ ಮಾಡಿದ್ದನ್ನು ಜ್ಞಾಪಿಸುವನು. ಅವಳು ಮಗನಿಗೆ ರಾಜ್ಯ ಬಂದರೆ ತಾಯಿಗೆ ಸಂತೋಷವೇ ಎನ್ನುವಳು ಇಷ್ಟಕ್ಕೇ ರಾಮನಿಗೆ ರಾಜ್ಯವೆಲ್ಲಿ ಸಿಕ್ಕದೇ ಹೋಗುವುದೋ ಎಂದು ಕೌಸಲ್ಯೆಯು ಮೂರ್ಛೆ ಹೋಗುವಳು. ಸುಮಿತ್ರೆಯು ರಾಮ ಭರತರಿಗೆ ರಾಜ್ಯವನ್ನು ಹಂಚಿಕೊಡಬೇಕೆಂದು ಸೂಚಿಸುವಳು ರಾಮನನ್ನು ಲಕ್ಷ್ಮಣನೂ ಭರತನನ್ನು ಶತ್ರುಘ್ನನೂ ಸೇವಿಸಿಕೊಂಡಿರುತ್ತಾರೆ, ಆದರಿಂದಲೇ ಶಾಂತಿ, ರಾಜ್ಯವು ಬರಿಯ ಭಾರ ಎನ್ನುವಳು ಗಂಡನಿಗೂ ಸವತಿಯರಿಗೂ ಮೆಚ್ಚಿಕೆಯಾದ ಹಂಗನೇ ಧನ್ಯೆ ಎಂದು ಅವಳ ಭಾವ ರಾಮ ಭರತರಲ್ಲಿ ಯಾರು ಹೆಚ್ಚು ಯೋಗ್ಯರು ಎಂದು ದಶರಥನು ಕೈಕೇಯಿಯನ್ನು ಪ್ರಶ್ನೆ ಮಾಡಲು, ಅವಳು ಹಿಂದು ಮುಂದು ನೋಡದೆ "ರಾಮ" ಎಂದು ಉತ್ತರ ಕೊಡುವಳು "ನನ್ನನ್ನು ಸಂತೋಷಪಡಿಸುವುದಕ್ಕೇ ಹಿಂದೆ ನೀನು ಆ ರೀತಿ ಪ್ರತಿಜ್ಞೆ ಮಾಡಿದ್ದು, ರಾಮನಿಗೆ ರಾಜ್ಯ ಬಂದರೆ ನನಗೆ ಸಂತೋಷವಾಗುತ್ತದೆ, ಆದ್ದರಿಂದ ಮಾತಿಗೆ ತಪ್ಪಿದಂತಾಗುವುದಿಲ್ಲ ಭರತನೂ ಗುಣವಂತನೇ, ಆದರೆ ಅವನಿಗಿಂತ ಹೆಚ್ಚಿನ ಗುಣಶಾಲಿಯಾದ ರಾಮನ ಮುಂದೆ ಅವನ ಗುಣವೇನು ಶೋಭಿಸುತ್ತದೆ ?" ಎನ್ನುವಳು 'ಯಾವಾಗಲೂ ಗರ್ಜಿಸುವ ಮೇಘವು ಇಂದು ಅಮೃತದ ಮಳೆ ಸುರಿಸಿತು' ಎಂದು ರಾಜನು ಸಂತೋಷಪಡುವನು. ಮಿಕ್ಕ ರಾಣಿಯರಿಗೂ ಸಂತೋಷವಾಗುವುದು ಕೈಕೇಯಿಯು ಮಹಾನುಭಾವೆ, ನೀತಿಜ್ಞೆ ಎಂದು ಸುಮಿತ್ರೆಯು ಅವಳನ್ನು ಶ್ಲಾಘಿಸುವಳು

ರಾಜನು ಸುಮಂತ್ರನನ್ನು ಕರಸಿ ಇದನ್ನು ತಿಳಿಸುವನು ಸುಮಂತ್ರನು ರಾಜಕುಮಾರರು ಗುಣಶಾಲಿಗಳೂ ವಿವೇಕವುಳ್ಳವರೂ ಆಗಿದ್ದದ್ದರಿಂದ ರಾಜ್ಯವಿಚಾರವು ಅವರಲ್ಲಿದ್ದ ಪರಸ್ಪರ ಪ್ರೀತಿಗೆ ಕುಂದು ತರುವುದಿಲ್ಲವೆಂದೂ, ರಾಜನು ನಿಶ್ಚಿಂತನಾಗಿರಬಹುದೆಂದೂ ಧೈರ್ಯ ಹೇಳುವನು

**ಮೂರನೆಯ ಅಂಕದಲ್ಲಿ**, ರಾಜಪುತ್ರರು ಶಸ್ತ್ರಾಸ್ತ್ರ ಪ್ರವೀಣರಾಗಿ ಅನಧ್ಯಯನದಲ್ಲಿ ಊರ ಹೊರಗೆ ತಮ್ಮ ಪ್ರಾವೀಣ್ಯವನ್ನು ಪರೀಕ್ಷಿಸಲು ಬಂದಿದ್ದಾರೆ (ರಾಮನ ಶೌರ್ಯ ಎಲ್ಲೆಲ್ಲೂ ತಿಳಿದು ರಾವಣನು ಅವನನ್ನು ಅಪಹರಿಸಿಕೊಂಡು ಹೋಗಲು ಅಯೋಧ್ಯೆಗೆ ಬಂದು ಅದೃಶ್ಯನಾಗಿ ಹೊಂಚುತ್ತಿದ್ದಾನೆ ವಿಶ್ವಾಮಿತ್ರನು ರಾಮನಿಗೆ ಅತಿಬಲಾ ಜೃಂಭಕಾ ಮುಂತಾದ ಅಸ್ತ್ರಗಳನ್ನು ಕೊಡಲು ಕರೆದುಕೊಂಡು ಹೋಗಬೇಕೆಂದು ಬಂದಿದ್ದಾನೆ ಈ ಇಬ್ಬರೂ ಅದೃಶ್ಯರಾಗಿ ನೋಡುತ್ತಿದ್ದಾರೆ.) ಶತ್ರುಘ್ನನೂ ಭರತನೂ ಅಲ್ಲಾಡುತ್ತಿರುವ ಮರದ ಎಲೆಗಳನ್ನು ಬಾಣಹೊಡೆದು ತೂತುಗುಟ್ಟಿಸುತ್ತಾರೆ ಲಕ್ಷ್ಮಣನು ಒಂದು ಮರವನ್ನು ಬೇರು ಸಹಿತವಾಗಿ ಎಬ್ಬಿ ಅದನ್ನು ಚೂರು ಚೂರು ಮಾಡುತ್ತಾನೆ, ಅಲ್ಲಾಡುವ ಎಲೆಯನ್ನು ನಿಲ್ಲಿಸುತ್ತಾನೆ, ಮರವನ್ನೂ ಬಂಡೆಯನ್ನೂ ನಡುಗಿಸುತ್ತಾನೆ ರಾಮನ ಸರದಿ ಬಂದಾಗ ತನ್ನ ತಮ್ಮಂದಿರು ಮಾಡಿದಷ್ಟನ್ನೇ ತಾನೂ ಮಾಡುವುದಾಗಿ ಹೇಳಿ ಬಾಣ ಪ್ರಯೋಗಿಸಲು, ರಾವಣನು ಅದೃಶ್ಯನಾಗಿ ಅವನ ಬಾಣಗಳನ್ನು ಮಧ್ಯದಲ್ಲಿ ತುಂಡುಮಾಡುವನು. ಮರವನ್ನು ಅಲ್ಲಾಡಿಸುತ್ತೇನೆಂದು ವಾಯುವ್ಯಾಸ್ತ್ರ ಬಿಡಲು, ರಾವಣನು ಅದನ್ನು ತಡೆಯುವನು ರಾಮನು ಕೋಪಗೊಂಡು ಆಗ್ನೇಯಾಸ್ತ್ರವನ್ನು ತೊಡಬೇಕೆಂದಿರಲು ಅದಕ್ಕೆ ಪ್ರತಿಯನ್ನು ಅರಿಯದ ರಾವಣನು ಹೆದರಿ ಓಡಿಹೋಗುವನು. ಮರದಲ್ಲಿದ್ದ ಹಕ್ಕಿಪಕ್ಷಿಗಳು ಸುಟ್ಟು ಹೋಗುವುವೆಂದು ಹೇಳಿ ಭರತನು ಅದನ್ನು ತೊಡದಂತೆ ತಡೆಯುವನು. ಸಂಚಾರಾರ್ಥವಾಗಿ ಬಂದಿದ್ದ ವಸಿಷ್ಠನು ರಾವಣ ವಿಶ್ವಾಮಿತ್ರರು ಬಂದಿದ್ದದ್ದನ್ನು ತಿಳಿಸುವನು

ಇದಕ್ಕೆ ಮುಂಚೆಯೇ ಚೇಟಿಯರೊಡನೆ ಅಲ್ಲಿಗೆ ಬಂದಿದ್ದ ಮಂಥರೆ

ರಾಮುನಿಗೆ ವಸಿಷ್ಠಾದಿಯಾಗಿ ಎಲ್ಲರೂ ಕೊಡುತ್ತಿದ್ದ ಗೌರವವನ್ನು ನೋಡಿ ಸಹಿಸದೆ ಭರತನಿಗೆ ರಾಜ್ಯ ಕೊಡಿಸುವುದಕ್ಕಾಗಿ ಕೈಕೇಯಿಯ ಮನಸ್ಸನ್ನು ಕೆಡಿಸಲು ನಿರ್ಧರಿಸುವಳು

**ನಾಲ್ಕನೆಯ ಅಂಕದಲ್ಲಿ,** ವಿಶ್ವಾಮಿತ್ರನು ದಶರಥನಲ್ಲಿಗೆ ಬಂದು ರಾಮ ಲಕ್ಷ್ಮಣರನ್ನು ಕರೆದುಕೊಂಡು ಹೋಗುತ್ತಾನೆ. ಯಜ್ಞರಕ್ಷೆಯ ನೆವದಿಂದ ತನ್ನಲ್ಲಿದ್ದ ಅಸ್ತ್ರವಿದ್ಯೆಯು ಸತ್ಪಾತ್ರದಲ್ಲಿ ವಿನಿಯೋಗವಾಗಲಿ ಎಂಬುದು ಅವನ ಉದ್ದೇಶ ಇಲ್ಲಿ ವಸಿಷ್ಠ ವಿಶ್ವಾಮಿತ್ರ ದಶರಥ ಸುಮಂತ್ರ ಇವರ ಸಂವಾದವು ತುಂಬಾ ಸ್ವಾರಸ್ಯವಾಗಿದೆ ವಸಿಷ್ಠ ದಶರಥ ಸೇನಾಪತಿ ಇವರಿಂದ ರಾಮಾದಿಗಳು ಕಲಿಯಬೇಕಾದ ಶಾಸ್ತ್ರ ಶಸ್ತ್ರಗಳನ್ನೆಲ್ಲಾ ಕಲಿತಾಗಿದೆ. ಅವುಗಳ ಪ್ರಯೋಗವೂ ತಿಳಿದಿದೆ. ಆದರೆ ಜೃಂಭಕಾಸ್ತ್ರ ಬ್ರಹ್ಮಾಸ್ತ್ರ ಎರಡನ್ನೂ ದಶರಥನು ಕೇಳಿದ್ದಾನೆಯೇ ಹೊರತು ತಿಳಿದಿಲ್ಲ ವಸಿಷ್ಠನಿಗೆ ಬ್ರಹ್ಮಾಸ್ತ್ರದಿಂದ ಮಿಕ್ಕ ಅಸ್ತ್ರಗಳನ್ನು ತಡೆಯುವುದು ಗೊತ್ತೇ ಹೊರತು ಪ್ರಯೋಗ ಗೊತ್ತಿಲ್ಲ ಆದ್ದರಿಂದ ಅವು ವಿಶ್ವಾಮಿತ್ರರಿಂದಲೇ ಬರಬೇಕು ಅದರ ಉಪದೇಶಕ್ಕೆ ಅರಮನೆ ಸರಿಯಾದ ಸ್ಥಳವಲ್ಲ. ವಸ್ತುಗುಣಗಳ ವಿಕಾಸಕ್ಕೆ ದೇಶ ಕಾಲ ಪಾತ್ರಗಳು ಮುಖ್ಯ. ಆದ್ದರಿಂದ ರಾಜಪುತ್ರರು ವಿಶ್ವಾಮಿತ್ರನ ಆಶ್ರಮಕ್ಕೆ ಹೋಗ ಬೇಕು ಅವೇ ಬೇಡವೆಂದರೆ, ದಶರಥನ ಕಾರ್ಪಣ್ಯ ವ್ಯಕ್ತವಾಗುತ್ತದೆ ಹೀಗಿರಲು, ವಿಶ್ವಾಮಿತ್ರನು ರಾಮನನ್ನು ಕಳುಹಿಸೆಂದು ಕೇಳುತ್ತಾನೆ ಅವನು ಹುಡುಗನಾದರೂ ಅಸ್ತ್ರಗಳನ್ನು ಪಡೆದು ಸುಬಾಹು ಮಾರೀಚ ರನ್ನು ಸಂಹರಿಸಲು ಸಮರ್ಥನಾಗುತ್ತಾನೆ, ದಶರಥನಿಂದ ಅದು ಸಾಧ್ಯ ವಿಲ್ಲ, ರಾಮನ ಮೇಲೆ ದಶರಥನಿಗಿಂತ ಹೆಚ್ಚಿನ ಪ್ರೀತಿ ವಿಶ್ವಾಮಿತ್ರನಿಗಿದೆ, ಆದ್ದರಿಂದ ರಾಮನನ್ನು ಕಳುಹಿಸಬಹುದೆಂದು ವಸಿಷ್ಠರು ಹೇಳುತ್ತಾರೆ ಲಕ್ಷ್ಮಣನು ಅವನನ್ನು ಹಿಂಬಾಲಿಸುತ್ತಾನೆ ಭರತ ಶತ್ರುಘ್ನರು ದಶರಥನ ಜೊತೆಗೆ ಇರುತ್ತಾರೆ.

**ಐದನೆಯ ಅಂಕದಲ್ಲಿ,** ವಿಶ್ವಾಮಿತ್ರನು ಉಪದೇಶಿಸಿದ ಅಸ್ತ್ರಗ ಳಿಂದ ರಾಮ ಲಕ್ಷ್ಮಣರು ರಾಕ್ಷಸರ ಕಾಟವನ್ನು ತಪ್ಪಿಸಲು ಅವನ ಯಜ್ಞವು ನೆರವೇರಿ, ಆಶ್ರಮದಲ್ಲಿ ಶಾಂತಿ ಲಭಿಸಿದೆ. ಅದರ ಪ್ರಕೃತಿ

ಸೌಂದರ್ಯವನ್ನೂ ಅಲ್ಲಿಯ ಜನರ ವಾಸ್ತವ ಪ್ರೇಮವನ್ನೂ ವಿಶ್ವಾಮಿತ್ರನು ನಗರದ ಕೃತಕ ಸೌಂದರ್ಯ ನಾಗರಿಕರ ಕೃತ್ರಿಮತೆಗಳೊಡನೆ ಹೋಲಿಸಿ ತೋರಿಸುತ್ತಾನೆ. ಹಳ್ಳಿಯ ಜನರ ಪರಿಚಯವಾಗಲೆಂದು ಅಂದಿನ ರಾತ್ರಿ ಅವರು ಅಲ್ಲಿಯೇ ತಂಗಿ ಒಬ್ಬ ರೈತನ ಆತಿಥ್ಯವನ್ನು ಸ್ವೀಕರಿಸುತ್ತಾರೆ ಈ ಅಂಕದಲ್ಲಿಯೂ ಅದರ ವಿಷ್ಕಂಭಕದಲ್ಲಿಯೂ ಬರುವ ಹಲವು ಸಂಗತಿಗಳು ಬಹು ಸ್ವಾರಸ್ಯವಾಗಿವೆ

**ಆರನೆಯ ಅಂಕದಲ್ಲಿ,** ರಾಮಸೀತೆಯರು ಉದ್ಯಾನದೊಳಗೆ ಒಬ್ಬರನ್ನೊಬ್ಬರು ನೋಡಿ ಪ್ರಣಯಾಸಕ್ತರಾಗಿದ್ದಾರೆ. ಇನ್ನು ಆರು ದಿನಕ್ಕೆ ಜನಕನ ಯಜ್ಞವು ಮುಗಿಯುತ್ತದೆ ಆಮೇಲೆ ರಾಮನಿಂದ ಶಿವ ಧನುಸ್ಸಿಗೆ ಹೆದೆಕಟ್ಟಿಸಿ ಅವನಿಗೆ ಸೀತೆಯನ್ನು ಮದುವೆ ಮಾಡಬೇಕೆಂದು ಜನಕನು ಯೋಚಿಸುತ್ತಾನೆ ರಾಮನೊಬ್ಬನೇ ಅದನ್ನು ಮಾಡಬಲ್ಲವನೆಂದು ವಿಶ್ವಾಮಿತ್ರನು ಭರವಸೆ ಹೇಳಿದ್ದಾನೆ ಅದಕ್ಕಾಗಿ ದಶರಥಾದಿಗಳನ್ನು ಜನಕನು ಕರೆಕಳುಹಿಸುತ್ತಾನೆ

**ಏಳನೆಯ ಅಂಕದಲ್ಲಿ,**[7] ಯಜ್ಞವು ಸಾಂಗವಾಗಿ ನಡೆದು ರಾಮಾದಿಗಳಿಗೆ ಮದುವೆಯಾಯಿತೆಂದು ಜನಕನು ಸದಸ್ಸನ್ನು ಸೇರಿಸಿ ಸ್ವಸ್ತಿವಾಚನ ಮಾಡಿಸುತ್ತಾನೆ ವಸಿಷ್ಠ ವಿಶ್ವಾಮಿತ್ರ ಶತಾನಂದರು ಅಭಿನಂದನೆ ಆಶೀರ್ವಾದಗಳನ್ನು ಮಾಡುತ್ತಾರೆ ಅಷ್ಟು ಹೊತ್ತಿಗೆ ಪರಶುರಾಮನು ಕುಪಿತನಾಗಿ ಬರುತ್ತಾನೆ. ಎಲ್ಲರೂ ನಮಸ್ಕರಿಸುತ್ತಾರೆ ರಾಮನು ಶೈವಧನುಸ್ಸನ್ನು ಹೇಗೆ ಮುರಿದ ಎಂದು ಪರಶುರಾಮನು ಕೇಳುತ್ತಾನೆ ರಾಮನು "ನನ್ನ ಹುಡುಗತನವನ್ನು ಕ್ಷಮಿಸಬೇಕು, ಬಿಲ್ಲು ಹಳೆಯದೆಂದು ಗೊತ್ತಿರಲಿಲ್ಲ; ತುಂಬ ಬಗ್ಗಿಸಿದೆ, ಮುರಿದು ಹೋಯಿತು!" ಎಂದು ಉತ್ತರ ಕೊಡುತ್ತಾನೆ. "ಹಾಗಾದರೆ ನನ್ನ ಬಿಲ್ಲಿಗೆ ಹೆದೆ ಏರಿಸು ನೋಡೋಣ" ಎಂದು ತನ್ನ ಬಿಲ್ಲನ್ನು ಕೊಡ ಹೋದಾಗ ರಾಮನ ವೈಷ್ಣವ ತೇಜಸ್ಸನ್ನು ನೋಡಿ ಪರಶುರಾಮನು "ಅಧರ್ಮನಿರತರೂ ಬಲಗರ್ವಿತರೂ ನೀಚರೂ ಬ್ರಹ್ಮದ್ವೇಷಿಗಳೂ ಆದ

---

7 ಏಕೋ ಏನೋ ಈ ಅಂಕವನ್ನು "ಆರನೆಯ ನಿರ್ವಹಣಾಂಕ"ವೆಂದು ಕರೆದಿದೆ.

ವರನ್ನು ಕೊಲ್ಲಲು ನಾನು ಆರಂಭಿಸಿದ ಕೆಲಸವನ್ನು ನೀನು ಪೂರ್ತಿ ಮಾಡು ! ” ಎಂದು ಹೇಳಿ ಆ ಬಿಲ್ಲನ್ನು ಅವನಿಗೇ ಕೊಡುವನು ತನ್ನ ಪುಣ್ಯವನ್ನೆಲ್ಲಾ ಅಲ್ಲಿದ್ದ ಸಭಿಕರಿಗೆ ಹಂಚಿಬಿಡುವನು ಏಕೆಂದರೆ ಅದು ಶಾಶ್ವತ ಬ್ರಹ್ಮಸ್ಥಿತಿಗೆ ಅಡ್ಡಿ ಅವನು ಹೊರಟು ಹೋಗಲು, ಬ್ರಹ್ಮ ವಿಷ್ಣು ಮಹೇಶ್ವರ ಇಂದ್ರ ನಾರದಾದಿಗಳು ಆಕಾಶದಿಂದ ಪುಷ್ಪವೃಷ್ಟಿ ಯನ್ನು ಕರೆಯುವರು ವಿಶ್ವಾಮಿತ್ರನು ದಶರಥನಿಗೆ ಹೇಳುವ ಈ ಭರತ ವಾಕ್ಯದಿಂದ ನಾಟಕ ಮುಗಿಯುವುದು —

ರಕ್ಷಂತು ವರ್ಣಾ ಧರ್ಮಂ ಸ್ವಂ ಪ್ರಜಾಃ ಸ್ಯುರನುಪಪ್ಲುತಾಃ ।
ತ್ವಂ ರಾಜಸಿಂಹ ಪೃಥಿವೀಂ ಸಾಗರಾಂತಾಂ ಪ್ರಶಾಧಿ ಚ ||

ಇದರಲ್ಲಿ ಮಿಕ್ಕ ನಾಟಕಗಳಲ್ಲಿ ಬರುವುದಕ್ಕಿಂತ ಹಾಸ್ಯ ಹೆಚ್ಚಾಗಿದೆ, ಉತ್ತಮವಾಗಿದೆ ಅದು ವಿದೂಷಕನ ಮೋದಕಗಳಲ್ಲಿಯೇ ಮುಗಿಯುವುದಿಲ್ಲ

೧ ಇದು ತಾಮ್ರಾಯನನೆಂಬ ಋಷಿಶಿಷ್ಯನ ಮಾತು :

ಇದರಲ್ಲಿ[8] ಹೊಗಳತಕ್ಕದ್ದೇನಿದೆ ? ಅವನು ದೊರೆಯ ಮಗ ಯಾವಾಗಲೂ ಸುಖಭೋಜನವಿರುತ್ತದೆ ಸೇವಿಸುವುದಕ್ಕೆ ಆಳುಕಾಳುಗಳಿರುತ್ತಾರೆ. ತಾಯಿತಂದೆಗಳು ಮುದ್ದಿನಲ್ಲಿ ಬೆಳಸಿದ್ದಾರೆ ವೈದ್ಯರು ದೇಹಸ್ಥಿತಿಯನ್ನು ನೋಡಿಕೊಳ್ಳುತ್ತಾರೆ, ಹಲವು ಉಪಾಧ್ಯಾಯರು ಪ್ರೀತಿಯಿಂದ ಪಾಠ ಹೇಳಿಕೊಡುತ್ತಾರೆ. ಹೀಗಿರುವುದರಿಂದ ಅವನು ತುಂಬ ವಿದ್ಯಾವಂತನಾಗಿದ್ದಾನೆಂಬುದೇನಾಶ್ಚರ್ಯ ? ನಾವೋ, ಗುರುವು ಆರೋಗ್ಯವಾಗಿದ್ದರೂ ನಿತ್ಯವೂ ಅವನನ್ನು ಸೇವಿಸಬೇಕು, ಭಿಕ್ಷೆ ಎತ್ತಿಕೊಂಡು ಬರಬೇಕು, ದೊರೆತದ್ದರಲ್ಲಿ ಜೀವಿಸಿಕೊಂಡಿರಬೇಕು, ಗುರುವಿಗೆ ಹೆದರಿಕೊಂಡಿರಬೇಕು, ಒಣಕಲು ಮಂಚದ ಮೇಲೆ ಮಲಗಿಕೊಳ್ಳಬೇಕು, ಓದುವುದಕ್ಕೆ ಅವಕಾಶವೇ ಸಾಲದು ಆದ್ದರಿಂದ ನಾವು ಕಲಿತ ಅಲ್ಪ ವಿದ್ಯೆಯೇ ಅವನ ಬಹು ವಿದ್ಯೆಗಿಂತ ಹೆಚ್ಚು ಋಷಿಗಳು ಹೊಗಳುವುದು ಅವನ ವಿದ್ಯೆಯನ್ನಲ್ಲ, ರಾಜಪುತ್ರತ್ವವನ್ನ (ಪುಟ ೧೪೩)

೨ “ ನಿನಗ ಹೊನ್ನು ದೊರೆಯಿತೇ ? ” ಎಂದು ಸುಮಂತ್ರನು ಕೇಳಲು ವಿದೂಷಕನು ಹೀಗೆ ಉತ್ತರ ಕೊಡುತ್ತಾನೆ :—

---

8 ರಾಮನು ವಿದ್ಯಾಸಂಪಾದನೆಯಲ್ಲಿ ಎಲ್ಲರನ್ನೂ ಮೀರಿಸಿದ್ದಾನೆ ಎಂಬುದರಲ್ಲಿ.

ನಾನು ಹೊನ್ನನ್ನು ಏನು ಮಾಡಲಿ? ಅದೇನು ಉಣ್ಣುವುದಕ್ಕೆ ಉಡು ವುದಕ್ಕೆ ಕುಡಿಯುವುದಕ್ಕೆ ಬರುತ್ತದೆಯೋ? ನಾನೇನು ರಾಜನೇ ವರ್ತಕನೇ ಹೊನ್ನಿಗೆ ಆಶೆಪಡುವುದಕ್ಕೆ?

೩ ಇದು ವಿಶ್ವಾಮಿತ್ರನ ವಿಚಾರ ಕೇಳಿ ಬೆರಗುವಟ್ಟ ವಿದೂಷ ಕನ ವರ್ಣನೆ —

ಅವನಿಗೆ ಎರಡು ಮುಖ, ನಾಲ್ಕು ಕೈ, ಬೆನ್ನೇ ಇಲ್ಲ, ಎರಡು ಕಡೆಯೂ ಮುಂಭಾಗವೇಯೆ... ಎರಡು ಕಡೆಯೂ ನೋಡಬಲ್ಲ.... ಒಂದು ಬಾಯಿಂದ ವೇದ ಹೇಳುತ್ತಾನೆ ಇನ್ನೊಂದು ಬಾಯಿಂದ ಬೈಯು ತ್ತಾನೆ. ಎರಡು ಕೈಗಳಿಂದ ಬ್ರಾಹ್ಮಣ ಕರ್ಮ, ಎರಡು ಕೈಗಳಿಂದ ಯುದ್ಧ

ಗೋಪಿಲ—ಇದೆಲ್ಲಾ ನೀನು ಕಂಡಿದ್ದೇ?

ವಿದೂಷಕ—ಅಯ್ಯೋ ಮೂರ್ಖ! ಕಂಡದ್ದಲ್ಲ, ಕೇಳಿದ್ದು, ಕಂಡದ್ದ ಕ್ಕಿಂತ ಕೇಳಿದ್ದೇ (ಶ್ರುತಿ) ಹೆಚ್ಚಿನ ಪ್ರಮಾಣವಲ್ಲವೇ? ಹೊಗೆಯಿಂದಲೋ ರೋಗದಿಂದಲೋ ಕಣ್ಣು ಕಾಣದಿರಬಹುದು, ಕಿವಿ ಕೇಳದೇ ಹೋಗುವುದಿಲ್ಲ

ಈ ನಾಟಕದಲ್ಲಿ ನವೀನವೂ ಸುಂದರವೂ ಆದ ಎಷ್ಟೋ ಭಾವಗ ಳಿವೆ ಮುಂದೆ ಮಾದರಿಗಾಗಿ ಕೆಲವನ್ನು ಕೊಟ್ಟಿದೆ :—

೧ ಸೂಜಿ ಹರಿತವಾಗಿದ್ದರೂ ನೀರಿನಲ್ಲಿ ತೂತುಮಾಡಬಲ್ಲುದೇ? (ಪುಟ ೫೭)

೨. ಒಂದು ದೀಪದಿಂದ ಇನ್ನೊಂದು ದೀಪವನ್ನು ಹೊತ್ತಿಸಿ ಕೊಂಡ ಮೇಲೆ ಅವಕ್ಕೆ ಭೇದವಿರುತ್ತದೆಯೇ? (ಪುಟ ೭೨)

೩ ಮರವು ತನ್ನನ್ನು ಕಡಿಯುವುದಕ್ಕೆಂದು ಕೊಡಲಿ ಹೊತ್ತು ಬರುವವನಿಗೆ ನೆರಳನ್ನೂ ಹಣ್ಣನ್ನೂ ಕೊಡುವುದಿಲ್ಲವೆಂದು ಹಿಂತೆಗೆಯು ತ್ತದೆಯೇ? (ಪುಟ ೧೦೧)

೪ ಎಣ್ಣೆಯಲ್ಲಿ ಅದ್ದಿದ ಬತ್ತಿಯನ್ನು ಹೊತ್ತಿಸಬಹುದೇ ಹೊರತು ಮಣ್ಣು ಮುದ್ದೆಯನ್ನು ಹೊತ್ತಿಸುವುದಕ್ಕಾಗುವುದಿಲ್ಲ. (ಪುಟ ೧೧೪)[9]

---

9 ಮೂಲವು ಸೂಕ್ಷ್ಮವಾದ ಶ್ಲೇಷೆಗಳಿಂದ ಕೂಡಿ ಸುಂದರವಾಗಿದೆ :—

ಗೃಹ್ಣಾತಿ ದೀಪಸ್ಯ ಶಿಖಾಂ ಗುಣಾಢ್ಯಾ
ಸ್ನಿಗ್ಧಾ ಚ ವರ್ತಿರ್ನ ತು ಪಂಕಪಿಂಡಃ।
ಗೃಹ್ಣಾತಿ ವಿದ್ಯಾಶ್ಚ ಗುರೋಸ್ತಥೈವ
ಧೀಯೋ ಗುಣ್ಯೈಃ ಸ್ನೇಹಭರಶ್ಚ ಶಿಷ್ಯಃ ॥

೫ ಭೂಮಿಯಲ್ಲಿ ಎಲ್ಲಾ ರಸಗಳೂ ಇದ್ದರೂ ಸಿಹಿಯು ಕಬ್ಬಿಗೆ ಮಾತ್ರ ಬರುವುದು ಕಬ್ಬಿನ ಮಹಿಮೆ (ಪುಟ ೧೪೭)

೬ ಹಳ್ಳಿಗಾಡಿನವರು ಪಟ್ಟಣವಾಸಕ್ಕೆ ಬಂದರೆ ಅವರ ಗುಣವೆಲ್ಲಾ ಹಾಳಾಗುತ್ತದೆ ಅವರು ಬೇಸಾಯವನ್ನು ಮರೆಯುತ್ತಾರೆ ಈಗ ನಾವು ದೀನರೆಂದುಕೊಂಡಿರುವವರು ಕಾಲಕ್ರಮದಲ್ಲಿ ರಾಜರೂ ತಮಗಿಂತ ಹಗುರವೆಂದು ಭಾವಿಸುತ್ತಾರೆ ಈಗ ಅತಿಥಿಗಳನ್ನು ಸೇವಿಸುತ್ತಿರುವವರು ಆಮೇಲೆ ತಾವೇ ಪೂಜ್ಯರೆಂದುಕೊಳ್ಳುತ್ತಾರೆ; ನಗರದೋಷಗಳೆಲ್ಲಾ ಅವರಲ್ಲಿ ಹೊಮ್ಮುತ್ತವೆ ಯಾರಿಗೆ ಯಾವುದು ಸಹಜವಾದ ನಿವಾಸವೋ ಸಹಜವಾದ ಗುಣವೋ ಅವನಿಗೆ ಅಲ್ಲಿ ಆದರಿಂದ ಘನತೆ (ಪುಟ ೧೬೦)

೭. ಸೂರ್ಯನು ಒಬ್ಬನೇ ಆದರೂ ಹಲವು ಜಲಾಶಯಗಳಲ್ಲಿ ಹಲವಾಗಿ ಕಾಣುವಂತೆ, ಆತ್ಮನೂ ಹಲವಾಗಿ ಕಾಣುತ್ತಾನೆ(ಪುಟ ೧೯೮)

೮ ಅನುರೂಪನಾದ ವರನಲ್ಲಿ ಅನುರಕ್ತಳಾಗಿರುವವಳನ್ನು "ಕೊಡುವುದಕ್ಕೆ" ನಮಗೆ ಅಧಿಕಾರವೇನಿದೆ? ಹುಡುಗನಲ್ಲಿ ಸಮಾನವಾದ ಗುಣಪ್ರೀತಿಗಳಿರುವುದರಿಂದ ಹುಡುಗಿಯನ್ನು ಅಭಿನಂದಿಸಿದೆವು ಎಂಬುದಕ್ಕೆ ಬದಲು, ಸೌಲಭ್ಯಕ್ಕೋಸ್ಕರ, ಹುಡುಗಿಯನ್ನು ಕೊಟ್ಟೆವು ಎಂದು ಹೇಳುತ್ತೇವೆ (ಪುಟ ೧೯೯)

೯. ಹಣವೆಲ್ಲಾ ವೆಚ್ಚವಾಗಿ ಹೋದವನನ್ನು ಸೂಳೆಯು ಹೇಗೆ ಮನೆ ಬಿಟ್ಟು ಓಡಿಸಿಬಿಡುತ್ತಾಳೋ ಹಾಗೇ ಪುಣ್ಯ ವೆಚ್ಚವಾಗಿ ಹೋದವನನ್ನೂ ಸ್ವರ್ಗದಿಂದ ಓಡಿಸಿಬಿಡುತ್ತಾರೆ (ಪುಟ ೨೦೫)



# ಅನುಬಂಧ ೨

## ಭಾಸಕೃತವೆಂದು ಕಾವ್ಯಸಂಗ್ರಹಗಳಲ್ಲಿ ದೊರೆಯುವ ಶ್ಲೋಕಗಳು

### I. ಶಾರ್ಙ್ಗಧರಪದ್ಧತಿ

೧. ಅಸ್ಯಾ ಲಲಾಟೇ ರಚಿತಾ ಸಖೀಭಿಃ
ವಿಭಾವ್ಯತೇ ಚಂದನಪತ್ರಲೇಖಾ ।
ಆಪಾಂಡುರಕ್ಷಾಮಕಪೋಲಭಿತ್ತಾ-
ವನಂಗಬಾಣವ್ರಣಪಟ್ಟಿಕೇವ ॥

ಇದು ಭಾಸಕೃತವೆಂದು "ಸೂಕ್ತಿಮುಕ್ತಾವಳಿ"ಯಲ್ಲಿಯೂ "ಸುಭಾಷಿತಾವಳಿ"ಯಲ್ಲಿಯೂ ಬರುತ್ತದೆ

೨. ದಯಿತಾಬಾಹುಪಾಶಸ್ಯ
ಕುತೋಯಮಪರೋ ವಿಧಿಃ ।
ಜೀವಯತ್ಯರ್ಪಿತಃ ಕಂಠೇ
ಮಾರಯತ್ಯಪವರ್ಜಿತಃ ॥

ಇದು "ಕಲಶಕ"ಕೃತವೆಂದು "ಸುಭಾಷಿತಾವಳಿ"ಯಲ್ಲಿಯೂ 'ಶ್ಯಾಮಲ'ಕೃತವೆಂದು 'ಸದುಕ್ತಿಕರ್ಣಾಮೃತ'ದಲ್ಲಿಯೂ ಹೇಳಿದೆ

೩. ಕಪೋಲೇ ಮಾರ್ಜಾರೀ ಪಯ ಇತಿ ಕರಾನ್ ಲೇಢಿ ಶಶಿನಃ
ತರುಚ್ಛಿದ್ರಪ್ರೋತಾನ್ ಬಿಸಮಿತಿ ಕರೀ ಸಂಕಲಯತಿ ।
ರತಾಂತೇ ತಲ್ಪಸ್ಥಾನ್ ಹರತಿ ವನಿತಾಪ್ಯಂಶುಕಮಿತಿ
ಪ್ರಭಾಮತ್ತಶ್ಚಂದ್ರೋ ಜಗದಿದಮಹೋ ವಿಪ್ಲವಯತಿ ॥

ಇದು ಭಾಸಕೃತವೆಂದು 'ಸುಭಾಷಿತಾವಳಿ'ಯಲ್ಲಿಯೂ ಉಕ್ತವಾಗಿದೆ; ಆದರೆ "ಸದುಕ್ತಿಕರ್ಣಾಮೃತ"ವು ಇದು ರಾಜಶೇಖರ ರಚಿತವೆಂದು ಹೇಳುತ್ತದೆ

೪. ತೀಕ್ಷ್ಣಂ ರವಿಸ್ತಪತಿ ನೀಚ ಇವಾಚಿರಾಢ್ಯಃ
ಶೃಂಗಂ ರುರುಸ್ತ್ಯಜತಿ ಮಿತ್ರಮಿವಾಕೃತಜ್ಞಃ ।
ತೋಯಂ ಪ್ರಸೀದತಿ ಮುನೇರಿವ ಚಿತ್ತಮನ್ತಃ
ಕಾಮೀ ದರಿದ್ರ ಇವ ಶೋಷಮುಪೈತಿ ಪಂಕಃ ॥

ಇದು " ಸದುಕ್ತಿಕರ್ಣಾಮೃತ "ದಲ್ಲಿಯೂ ಭಾಸಕೃತವೆಂದು ಉಕ್ತವಾಗಿದೆ

## II ಸುಭಾಷಿತಾವಳಿ (ವಲ್ಲಭದೇವ ಕೃತ)—

೫ ಬಾಲಾ ಚ ಸಾ ವಿದಿತಪಂಚಶರಪ್ರಪಂಚಾ
ತನ್ವೀ ಚ ಸಾ ಸ್ತನಭರೋಪಚಿತಾಂಗಯಷ್ಟಿಃ ।
ಲಜ್ಜಾಂ ಸಮುದ್ವಹತಿ ಸಾ ಸುರತಾವಸಾನೇ
ಹಾ ಕಾಪಿ ಸಾ ಕಿಮಿವ ಕಿಂ ಕಥಯಾಮಿ ತಸ್ಯಾಂ ॥

೬ ದುಃಖಾರ್ತೇ ಮಯಿ ದುಃಖಿತಾ ಭವತಿ ಯಾ ಹೃಷ್ಟೇ ಪ್ರಹೃಷ್ಟಾ ತಥಾ
ದೀನೇ ದೈನ್ಯಮುಪೈತಿ ರೋಷಪರುಷೇ ಪಥ್ಯಂ ವಚೋ ಭಾಷತೇ ।
ಕಾಲಂ ವೇತ್ತಿ ಕಥಾಃ ಕರೋತಿ ನಿಪುಣಾ ಮತ್ಸಂಸ್ತವೇ ರಜ್ಯತೇ
ಭಾರ್ಯಾ ಮಂತ್ರಿವರಃ ಸಖಾ ಪರಿಜನಃ ಸೈಕಾ ಬಹುತ್ವಂ ಗತಾ॥

೭ ಕಠಿನಹೃದಯೇ ಮುಂಚ ಕ್ರೋಧಂ ಸುಖಪ್ರತಿಘಾತಕಂ
ಲಿಖತಿ ದಿವಸಂ ಯಾತಂ ಯಾತಂ ಯಮಃ ಕಿಲ ಮಾನಿನಿ ।
ವಯಸಿ ತರುಣೇ ನೈತದ್ಯುಕ್ತಂ ಚಲೇ ಚ ಸಮಾಗಮೇ
ಭವತಿ ಕಲಹೋ ಯಾವತ್ ತಾವದ್ವರಂ ಸುಭಗೇ ರತಂ ॥

೮ ಕೃತಕಕೃತಕೈರ್ಮಾಯಾಸಖ್ಯೈಸ್ತ್ವಯಾಸ್ಮ್ಯತಿವಂಚಿತಾ
ನಿಭೃತನಿಭೃತೈಃ ಕಾರ್ಯಾಲಾಪೈರ್ಮಯಾಪ್ಯುಪಲಕ್ಷಿತಂ ।
ಭವತು ವಿದಿತಂ ನೇಷ್ಯಾಹಂ ತೇ ವೃಥಾ ಪರಿಖಿದ್ಯಸೇ
ಹ್ಯಹಮಸಹನಾ ತ್ವಂ ನಿಸ್ಸ್ನೇಹಃ ಸಮೇನ ಸಮಂ ಗತಂ ॥

## III ಸದುಕ್ತಿಕರ್ಣಾಮೃತ

೯ ದಗ್ಧೋ ಮನೋಭವತರೌ ಬಾಲಾ ಕುಚಕುಂಭಸಂಭೃತೈರಮೃತೈಃ ।
ತ್ರಿವಲೀಕೃತಾಲವಾಲಾ ಜಾತಾ ರೋಮಾವಲೀ ವಲ್ಲೀ ॥

೧೦ ಪ್ರತ್ಯಾಸನ್ನವಿವಾಹಮಂಗಲವಿಧೌ ದೇವಾರ್ಚನವ್ಯಸ್ತಯಾ
ದೃಷ್ಟ್ವಾಗ್ರೇ ಪರಿಣೇತುರೇವ ಲಿಖಿತಾಂ ಗಂಗಾಧರಸ್ಯಾಕೃತಿಂ ।
ಉನ್ಮಾದಸ್ಮಿತರೋಷಲಜ್ಜಿತರಸೈರ್ಗೌರ್ಯಾ ಕಥಂ ಚಿಚ್ಚಿರಾತ್
ವೃದ್ಧಸ್ತ್ರೀವಚನಾತ್ ಪ್ರಿಯೇ ವಿನಿಹಿತಃ ಪುಷ್ಪಾಂಜಲಿಃ ಪಾತು ವಃ ॥

೧೧. ವಿರಹಿವನಿತಾವಕ್ತ್ರೌಪಮ್ಯಂ ಬಿಭರ್ತಿ ನಿಶಾಪತಿಃ
ಗಲಿತವಿಭವಸ್ಯಾಜ್ಞೇವಾದ್ಯ ದ್ಯುತಿರ್ಮಸೃಣಾ ರವೇಃ ।
ಅಭಿನವವಧೂರೋಷಸ್ವಾದುಃ ಕರೀಷತನೂನಪಾತ್
ಅಸರಲಜನಾಶ್ಲೇಷಕ್ರೂರಸ್ತುಷಾರಸಮೀರಣಃ ॥

## IV. ಸೂಕ್ತಿಮುಕ್ತಾವಳಿ (ಬಿಲ್ಹಣ ಕೃತ)

೧೨ ಯದಪಿ ವಿಬುಧೈಃ ಸಿಂಧೋರಂತಃ ಕಥಂಚಿದುಪಾರ್ಜಿತಂ
ತದಪಿ ಸಕಲಂ ಚಾರು ಸ್ತ್ರೀಣಾಂ ಮುಖೇಷು ವಿಲೋಕ್ಯತೇ ।
ಸುರಸುಮನಸಃ ಶ್ವಾಸಾಮೋದೇ (ಶಶೀ) ಚ ಕಪೋಲಯೋಃ
ಅಮೃತಮಧರೇ ತಿರ್ಯಗ್ಭೂತೇ ವಿಷಂ ಚ ವಿಲೋಚನೇ ॥

ಇದೇ ಗ್ರಂಥಕರ್ತರಿಂದ ರಚಿತವಾದ

# ವಚನ ಭಾರತ

## (ಎರಡನೆಯ ಮುದ್ರಣ)

ಹದಿನೆಂಟು ಪರ್ವಗಳ ಮಹಾಭಾರತದ ಕಥೆಯೆಲ್ಲಾ ಇದೊಂದೇ ಸಂಪು ದಲ್ಲಿದೆ. ತಿಳಿಯಾದ ಹೊಸಗನ್ನಡ ಗದ್ಯದಲ್ಲಿದೆ. ವಿಸ್ತಾರವಾದ ಪೀಠಿಕೆಯ ಟಿಪ್ಪಣಿಗಳೂ, ಮೂರು ಉಪಾಖ್ಯಾನಗಳನ್ನೊಳಗೊಂಡ ಅನುಬಂಧವೂ ಇ ಸರಸ್ವತಿ, ಬದರೀನಾಥ, ಗೀತೋಪದೇಶ, ಘಟೋತ್ಕಚ ಭಗದತ್ತರ ಯು ಸಾವಿತ್ರೀ ಸತ್ಯವಾನ, ಪಾಂಡವರು ಕುಂತಿಯನ್ನು ತಪೋವನದಲ್ಲಿ ಕಂಡು ಮುಂತಾದ ಹದಿನೇಳು ರೇಖಾಚಿತ್ರಗಳೂ ಹಾಫ್‌ಟೋನ್ ಚಿತ್ರಗಳೂ ಇವೆ ಹೊ ಪಾದ ದಪ್ಪ ಕಾಗದವನ್ನು ಉಪಯೋಗಿಸಿ, ಗಟ್ಟಿಯಾದ ರಟ್ಟು ಕಟ್ಟಿಸಿ ಸುಂ ವಾದ ಕವಚವನ್ನು ಹಾಕಿದೆ. ಡೆಮ್ಮಿ ೫೦೦ ಪುಟಗಳ ಮೇಲಿರುವ ದೊಡ್ಡ ಗ್ರಂ

**ಬೆಲೆ: ರೂ. ೬—೮—೦**

# ಕಥಾಮೃತ

## (ಕಥಾಸರಿತ್ಸಾಗರದ ಅನುವಾದ)

ಪೀಠಿಕೆ ಟಿಪ್ಪಣಿ ಅನುಬಂಧಗಳೊಡನೆ ಹೊಳಪುಕಾಗದದ ಮೇಲೆ ಮುದ್ರ ವಾಗಿದೆ. ಡೆಮ್ಮಿ ೫೭೨ ಪುಟಗಳಿವೆ. ಗಟ್ಟಿಯಾದ ರಟ್ಟಿನಿಂದಲೂ ಸುಂದರವ ಕವಚದಿಂದಲೂ ಕೂಡಿದೆ. ತಿಳಿಯಾದ ಹೊಸಗನ್ನಡ ಗದ್ಯದಲ್ಲಿದೆ. ಪಾರ್ವ ಪರಮೇಶ್ವರರ ಮತ್ತು ಬೇತಾಳನ ಚಿತ್ರಗಳಿವೆ

ರಾಮಾಯಣ ಭಾರತ ಭಾಗವತಗಳನ್ನು ಬಿಟ್ಟರೆ ಬೃಹತ್ಕಥೆಯೇ ಪ್ರಾಚಿ ಸಂಸ್ಕೃತ ಗದ್ಯ ಪದ್ಯ ನಾಟಕಗಳೆಲ್ಲಕ್ಕೂ ಆಕರವನ್ನೊದಗಿಸಿದೆ. ಅದರ ಕಥೆಗ ದೇಶವಿದೇಶಗಳಿಗೆ ಹೋಗಿ ಅರೇಬಿಯನ್ ನೈಟ್ಸ್, ಷೇಕ್ಸ್‌ಪಿಯರಿನ ನಾಟಕ ಮುಂತಾದ ಪ್ರಸಿದ್ಧ ಸಾಹಿತ್ಯಕ್ಕೆ ಸಾಮಗ್ರಿಗಳನ್ನು ಒದಗಿಸಿವೆ.

ಈ ಗ್ರಂಥದಲ್ಲಿ ಎಲ್ಲ ವಯಸ್ಸಿನ, ಎಲ್ಲ ರುಚಿಗಳ, ಜನರಿಗೂ ಪ್ರಿಯವಾಗ ಕಥೆಗಳಿವೆ:—ಕಳ್ಳರ ಕಥೆ, ಭೂತಬೇತಾಳಗಳ ಕಥೆ, ದಡ್ಡರ ಕಥೆ, ಪಂಚತಂತ್ರ ಕಥೆ, ವಿದ್ಯಾಧರರ ಕಥೆ, ವಿಕ್ರಮಾದಿತ್ಯನ ಕಥೆ ಇತ್ಯಾದಿ. ಇದು, ಪ್ರಾಚೀನ ಭ ಖಂಡದ ಅತ್ಯುತ್ತಮ ಕಥೆಗಳ ಭಂಡಾರ. **ಬೆಲೆ: ರೂ. ೭—೮—೦**

ಅಂಚೆಯ ವೆಚ್ಚ ಪ್ರತ್ಯೇಕ: ಪುಸ್ತಕ ವ್ಯಾಪಾರಿಗಳಿಗೆ ದಳ್ಳಾಳಿಯು ಪುಸ್ತಕಗಳು ಗ್ರಂಥಕರ್ತರಲ್ಲಿಯೂ **ಎಚ್. ಎಂ. ಶಂಕರನಾರಾಯಣರಾ** **ಎಂ.ಎ.** ೫೭೮ ಕೃಷ್ಣರಾಜವನಂ, ಮೈಸೂರು ಇವರಲ್ಲಿಯೂ ದೊರೆಯುತ್ತವೆ

ಇದೇ ಗ್ರಂಥಕರ್ತರಿಂದ ರಚಿತವಾದ

# ವಚನ ಭಾರತ

## (ಎರಡನೆಯ ಮುದ್ರಣ)

ಹದಿನೆಂಟು ಪರ್ವಗಳ ಮಹಾಭಾರತದ ಕಥೆಯೆಲ್ಲಾ ಇದೊಂದೇ ಸಂಪು ದಲ್ಲಿದೆ. ತಿಳಿಯಾದ ಹೊಸಗನ್ನಡ ಗದ್ಯದಲ್ಲಿದೆ. ವಿಸ್ತಾರವಾದ ಪೀಠಿಕೆಯು ಟಿಪ್ಪಣಿಗಳೂ, ಮೂರು ಉಪಾಖ್ಯಾನಗಳನ್ನೊಳಗೊಂಡ ಅನುಬಂಧವೂ ಇ ಸರಸ್ವತಿ, ಬದರೀನಾಥ, ಗೀತೋಪದೇಶ, ಘಟೋತ್ಕಚ ಭಗದತ್ತರ ಯು ಸಾವಿತ್ರೀ ಸತ್ಯವಾನ, ಪಾಂಡವರು ಕುಂತಿಯನ್ನು ತಪೋವನದಲ್ಲಿ ಕಂಡು ಮುಂತಾದ ಹದಿನೇಳು ರೇಖಾಚಿತ್ರಗಳೂ ಹಾಫ್‌ಟೋನ್ ಚಿತ್ರಗಳೂ ಇವೆ. ಹೊ ಪಾದ ದಪ್ಪ ಕಾಗದವನ್ನು ಉಪಯೋಗಿಸಿ, ಗಟ್ಟಿಯಾದ ರಟ್ಟು ಕಟ್ಟಿಸಿ ಸುಂ ವಾದ ಕವಚವನ್ನು ಹಾಕಿದೆ. ಡೆಮ್ಮಿ ೫೦೦ ಪುಟಗಳ ಮೇಲಿರುವ ದೊಡ್ಡ ಗ್ರಂ

**ಬೆಲೆ : ರೂ. ೬—೮—೦**

# ಕಥಾಮೃತ

## (ಕಥಾಸರಿತ್ಸಾಗರದ ಅನುವಾದ)

ಪೀಠಿಕೆ ಟಿಪ್ಪಣಿ ಅನುಬಂಧಗಳೊಡನೆ ಹೊಳಪುಕಾಗದದ ಮೇಲೆ ಮುದ್ರಿ ವಾಗಿದೆ. ಡೆಮ್ಮಿ ೫೭೨ ಪುಟಗಳಿವೆ. ಗಟ್ಟಿಯಾದ ರಟ್ಟಿನಿಂದಲೂ ಸುಂದರವ ಕವಚದಿಂದಲೂ ಕೂಡಿದೆ. ತಿಳಿಯಾದ ಹೊಸಗನ್ನಡ ಗದ್ಯದಲ್ಲಿದೆ. ಪಾರ್ವ ಪರಮೇಶ್ವರರ ಮತ್ತು ಬೇತಾಳನ ಚಿತ್ರಗಳಿವೆ.

ರಾಮಾಯಣ ಭಾರತ ಭಾಗವತಗಳನ್ನು ಬಿಟ್ಟರೆ ಬೃಹತ್ಕಥೆಯೇ ಪ್ರಾಚಿ ಸಂಸ್ಕೃತ ಗದ್ಯ ಪದ್ಯ ನಾಟಕಗಳಿಲ್ಲಕ್ಕೂ ಆಕರವನ್ನೊದಗಿಸಿದೆ. ಅದರ ಕಥೆಗ ದೇಶವಿದೇಶಗಳಿಗೆ ಹೋಗಿ ಅರೇಬಿಯನ್ ನೈಟ್ಸ್, ಷೇಕ್ಸ್‌ಪಿಯರಿನ ನಾಟಕ ಮುಂತಾದ ಪ್ರಸಿದ್ಧಸಾಹಿತ್ಯಕ್ಕೆ ಸಾಮಗ್ರಿಗಳನ್ನು ಒದಗಿಸಿವೆ.

ಈ ಗ್ರಂಥದಲ್ಲಿ ಎಲ್ಲ ವಯಸ್ಸಿನ, ಎಲ್ಲ ರುಚಿಗಳ, ಜನರಿಗೂ ಪ್ರಿಯವಾಗ ಕಥೆಗಳಿವೆ :—ಕಳ್ಳರ ಕಥೆ, ಭೂತಬೇತಾಳಗಳ ಕಥೆ, ದಡ್ಡರ ಕಥೆ, ಪಂಚತಂತ್ರ ಕಥೆ, ವಿದ್ಯಾಧರರ ಕಥೆ, ವಿಕ್ರಮಾದಿತ್ಯನ ಕಥೆ ಇತ್ಯಾದಿ. ಇದು, ಪ್ರಾಚೀನ ಭ ಖಂಡದ ಅತ್ಯುತ್ತಮ ಕಥೆಗಳ ಭಂಡಾರ. **ಬೆಲೆ : ರೂ. ೭—೮—೦**

ಅಂಚೆಯ ವೆಚ್ಚ ಪ್ರತ್ಯೇಕ : ಪುಸ್ತಕ ವ್ಯಾಪಾರಿಗಳಿಗೆ ದಳ್ಳಾಳಿಯುಂ ಪುಸ್ತಕಗಳು ಗ್ರಂಥಕರ್ತರಲ್ಲಿಯೂ **ಎಚ್. ಎಂ. ಶಂಕರನಾರಾಯಣರಾ** **ಎಂ.ಎ.** ೫೭೮ ಕೃಷ್ಣರಾಜವನಂ, ಮೈಸೂರು ಇವರಲ್ಲಿಯೂ ದೊರೆಯುತ್ತವೆ.

